# ಶ್ರೀತುಳಸೀ

## (ಉಪಚಾರ - ಉಪಯೋಗ)



ಸಂಗ್ರಹ–ಅನುವಾದ : ಪಂ. ವಾದಿರಾಜಾಚಾರ್ಯ ಕರಣಂ

ಪ್ರಕಾಶನ : ವಿಶ್ವಮಧ್ವಮಹಾಪರಿಷತ್, ಉತ್ತರಾದಿಮಠ, ಬೆಂಗಳೂರು

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 113

# ಶ್ರೀತುಳಸೀ

## (ಉಪಚಾರ - ಉಪಯೋಗ)

ತುಲಸಿಯ ಸೇವೆ ಮಾಡುವುದು ತುಲಸಿಯಿಂದ ದೇವರನ್ನು ಅರ್ಚಿಸುವುದು ಪ್ರತಿದಿವಸವೂ ವಿಶಿಷ್ಟ ಪುಣ್ಯಪ್ರದ. ಚತುರ್ಯುಗಮೂರ್ತಿಗಳಾದ ಶ್ರೀಮನ್ಮೂಲರಾಮ-ಚಂದ್ರದೇವರು, ಶ್ರೀಮನ್ಮೂಲಸೀತಾದೇವಿಯರು, ಶ್ರೀದಿಗ್ವಿಜಯರಾಮ- ಚಂದ್ರದೇವರು, ಶ್ರೀವ್ಯಾಸಮುಷ್ಟಿ ಮೊದಲಾದ ಸರ್ವೋತ್ತಮ ಪ್ರತಿಮೆಗಳ ಸನ್ನಿಧಾನ. ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನಾಧೀಶ್ವರರಾದ ಶ್ರೀ1008 ಶ್ರೀಸತ್ಯಾತ್ಮ-ತೀರ್ಥರ ಅತಿ ಪಾವನವಾದ ಸನ್ನಿಧಾನ. ಇಂತಹ ಪಾವನಪ್ರಸಂಗದಲ್ಲಿ ಈ ಹೊತ್ತಿಗೆಯ ಸಮರ್ಪಣೆಯ ಯೋಗವನ್ನು ನನಗೆ ಒದಗಿಸಿಕೊಟ್ಟ ಶ್ರೀತುಳಸಿಯನ್ನು ಭಕ್ತಿಯಿಂದ ಸ್ಮರಿಸುತ್ತಾ ಗುರುಗಳ (ಶ್ರೀ1008ಶ್ರೀ ಸತ್ಯಾತ್ಮತೀರ್ಥರು) ಮೂಲಕ ಈ ''ಶ್ರೀತುಳಸಿ''ಯನ್ನು ದೇವರಿಗೆ ಸಮರ್ಪಿಸುತ್ತಿದ್ದೇನೆ.

... ಸಂಗ್ರಹ ಮತ್ತು ಅನುವಾದ ...

ಪಂ. ವಾದಿರಾಜಾಚಾರ್ಯ ಕರಣಂ

... ಪ್ರಕಾಶನ ...

ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ, ಬೆಂಗಳೂರು

ಶ್ರೀತುಳಸೀ (ಉಪಚಾರ - ಉಪಯೋಗ)
(ಪುರಾಣ-ಸ್ಮೃತಿ-ಆಗಮಗಳಲ್ಲಿ ಪ್ರಸ್ತುತವಾದ ತುಲಸೀಮಹಿಮೆಗಳ ಸಂಗ್ರಹಾತ್ಮಕ ಅನುವಾದ ಕೃತಿ)
ಸಂಗ್ರಹ ಮತ್ತು ಅನುವಾದ : ಪಂ. ವಾದಿರಾಜಾಚಾರ್ಯ ಕರಣಮ್
ಮೊದಲ ಮುದ್ರಣ : ಸೆಪ್ಟೆಂಬರ್ 2012 ಪ್ರತಿಗಳು : 1000
(ಶ್ರೀ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ 17ನೇ ಚಾತುರ್ಮಾಸ್ಯ ಶುಭಸಂದರ್ಭ)
ದ್ವಿತೀಯ ಮುದ್ರಣ : ಏಪ್ರಿಲ್ 2014 ಪ್ರತಿಗಳು : 1000



ಬೆಲೆ : ರೂ.133/-

**Vishva Madhwa Maha Parishat**
#11 2nd Floor Uttaradimath Building.
UttaradiMath Road, Shankarpuram,
Basavanagudi BANGALORE - 4
Phone : 080 26603692

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ

ಮುಖಪುಟ ವಿನ್ಯಾಸ: ಶೇಷಗಿರಿ ಕೆ ಎಮ್

ಮುದ್ರಣ : **ವಾಗರ್ಥ**, ಬೆಂಗಳೂರು-೧೯. vagartha@yahoo.com

॥ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀ ಶ್ರೀ ೧೦೦೮
ಶ್ರೀ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ

# ಅನುಗ್ರಹಸಂದೇಶ

ತುಲಸೀ ಪರಮಾತ್ಮನಿಗೆ ಅತ್ಯಂತ ಪ್ರಿಯಳಾಗಿದ್ದಾಳೆ. ''ಎಲ್ಲ ಸಾಧನವಿದ್ದು ತುಲಸಿ ಇಲ್ಲದ ಪೂಜೆ ಒಲ್ಲನೋ ಹರಿ ತಾ ಕೊಳ್ಳನೋ'' ಎಂಬ ದಾಸರ ಉಕ್ತಿಯಂತೆ ತುಲಸೀ ಇಲ್ಲದೆ ಮಾಡಿದ ಪೂಜೆಯನ್ನು ದೇವರು ಸ್ವೀಕರಿಸುವುದಿಲ್ಲ.

''ಯಾ ದೃಷ್ಟಾ..... ತಸ್ಯೈ ತುಲಸ್ಯೈ ನಮಃ''

ನೋಡಿದರೆ ಪಾಪಗಳನ್ನು ಕಳೆಯುವಳು.
ಮುಟ್ಟಿದರೆ ದೇಹವನ್ನು ಪವಿತ್ರಗೊಳಿಸುವಳು.
ನಮಿಸಿದರೆ ರೋಗಗಳನ್ನು ಪರಿಹರಿಸುವಳು.
ಗಿಡ ನೆಟ್ಟರೆ ಭಗವಂತನ ಸಾಮೀಪ್ಯವನ್ನು ನೀಡುವಳು.
ಭಗವಂತನ ಪಾದಗಳಿಗೆ ಅರ್ಪಿಸಿದರೆ ಮೋಕ್ಷವನ್ನೇ ನೀಡುವಳು.

ಪಾಪಗಳನ್ನೂ, ರೋಗಗಳನ್ನೂ ಕಳೆಯುವ ಇಂತಹ ತುಳಸಿಯ ಮಹಿಮೆಯನ್ನು ಅನೇಕ ಸ್ಮೃತಿಗ್ರಂಥಗಳಿಂದ ಹಾಗೂ ಪುರಾಣಗಳಿಂದ ಸಂಗ್ರಹಿಸಿ ನಮ್ಮ ಪ್ರಿಯಶಿಷ್ಯನಾದ ಪಂ. ವಾದಿರಾಜಾಚಾರ್ಯ ಕರಣಂ ಇವನು ಬಹಳ ಸುಂದರವಾಗಿ ನಿರೂಪಣೆ ಮಾಡಿದ್ದಾನೆ. ತುಲಸಿಯ ಬಗ್ಗೆ ಬೇಕಾದ ಪ್ರಾಯಃ ಎಲ್ಲ ಮಾಹಿತಿಗಳನ್ನು ಈ ಹೊತ್ತಿಗೆಯಲ್ಲಿ ಕೊಡಲಾಗಿದೆ. ಇದನ್ನು ಚೆನ್ನಾಗಿ ಅಧ್ಯಯನ ಮಾಡಿ ತುಲಸೀಮಹಿಮೆಯನ್ನು ತಿಳಿದು ಉಪಯೋಗಿಸುವ ವಿಧಾನವನ್ನೂ ತಿಳಿದು ಭಕ್ತಿಪೂರ್ವಕವಾಗಿ ದೇವರಿಗೆ ಅರ್ಪಿಸಿ, ಸ್ವೀಕರಿಸಿದರೆ ನಿಜವಾಗಿ ಸಾಧಕರು ಧನ್ಯರಾಗುತ್ತಾರೆ. ಒಂದೊಂದು ವಿಷಯಗಳ ಬಗ್ಗೆ ಕೂಲಂಕಷವಾಗಿ ಅಧ್ಯಯನ ಮಾಡಿ ಸಂಗ್ರಹವಾಗಿ, ಸರಳವಾಗಿ ನಿರೂಪಿಸುವ ಉತ್ತಮವಾದ ಕಲೆ ಹಾಗೂ ಪಾಂಡಿತ್ಯ ನಮ್ಮ ವಾದಿರಾಜಾಚಾರ್ಯನಿಗೆ ಮೈಗೂಡಿದೆ. ಈಗಾಗಲೇ ಹತ್ತಾರು ಕೃತಿಗಳನ್ನು ವೇದವ್ಯಾಸರಿಗೆ ಅರ್ಪಿಸಿದ್ದಾನೆ. ಇದೇ ರೀತಿ ಸಕಲಸಜ್ಜನರಿಗೆ ಉಪಯೋಗ ಆಗುವ ನೂರಾರು ಕೃತಿಗಳು ಇವನಿಂದ ಮೂಡಿಬರಲಿ ಎಂಬುದಾಗಿ ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲಸೀತಾಸಮೇತ ಶ್ರೀಮೂಲರಾಮದಿಗ್ವಿಜಯರಾಮ-ವೇದವ್ಯಾಸರಲ್ಲಿ ಪ್ರಾರ್ಥಿಸುತ್ತೇವೆ.

ಮುಕ್ಕಾಂ :
ಬೆಂಗಳೂರು. ಚಾತುರ್ಮಾಸ್ಯ.
ಅಧಿಕ ಭಾದ್ರಪದ. ಕೃಷ್ಣ ಪ್ರತಿಪತ್

ಇತ್ಯನೇಕ ನಾರಾಯಣಸ್ಮರಣೆಗಳು

# ಮುನ್ನಡಿವ ಮುನ್ನ

ಧಾರ್ಮಿಕವಾದ ಎಲ್ಲ ಕಾರ್ಯಗಳಲ್ಲಿಯೂ ತುಲಸಿಯ ಸ್ಥಾನ-ಮಾನಗಳು ಅತಿವಿಶಿಷ್ಟವಾಗಿವೆ. ತುಲಸಿ ಇಲ್ಲದೇ ಯಾವ ಕಾರ್ಯಗಳೂ ನಡೆಯುವುದಿಲ್ಲ. ಶ್ರೀಹರಿಗೆ ಪ್ರಿಯಳಾಗಿದ್ದಾಳೆ ಶ್ರೀತುಲಸಿ. ಈ ಕಾರಣಕ್ಕಾಗಿಯೇ ಜಗನ್ಮಾನ್ಯಳಾಗಿದ್ದಾಳೆ. ಆಧ್ಯಾತ್ಮಿಕ-ಆಧಿದೈವಿಕ-ಆಧಿಭೌತಿಕವಾದ ಸುಖಕ್ಕೆ ಸಾಧನ ಶ್ರೀತುಳಸಿ. ಪದುಮನಾಭನಿಂದ ಪಾಮರನ ವರೆಗೆ ಎಲ್ಲರ ಕೊರಳಲ್ಲಿ ಕಂಗೊಳಿಸುವವಳು ಶ್ರೀತುಳಸಿ. ಪೌರ್ವಾತ್ಯರು-ಪಾಶ್ಚಿಮಾತ್ಯರು ಎಲ್ಲರಿಗೂ ಒಂದಿಲ್ಲ ಒಂದು ಕಾರಣಕ್ಕಾಗಿ ಬೇಕಾದವಳು ಶ್ರೀತುಳಸಿ. ಪ್ರಾಯಃ ಎಲ್ಲ ರೋಗಗಳಿಗೆ ಪರಿಹಾರಕ ಶ್ರೀತುಳಸಿ. ಭವರೋಗವನ್ನೇ ಪರಿಹರಿಸುವವಳಿಗೆ ರೋಗಗಳ ಪರಿಹಾರ ಏನಾಶ್ಚರ್ಯ ? ವೇದ-ಪುರಾಣ-ಇತಿಹಾಸ-ಕಾವ್ಯ-ಪದ-ಪದ್ಯ-ಸುಳಾದಿಗಳಲ್ಲಿ ಬೆಳೆದು ನಿಂತ ದೇವತಾವೃಕ್ಷ ಶ್ರೀತುಳಸಿ. ಶ್ವೇತದ್ವೀಪದಿಂದ ಜಂಬೂದ್ವೀಪದ ತನಕ ಸುಪ್ರಸಿದ್ಧಳಾದವಳು ಶ್ರೀತುಳಸಿ. ನಿತ್ಯಯೋಗಿಗಳಾಗಿ ಸರ್ವಸಂಗವನ್ನೂ ಪರಿತ್ಯಜಿಸಿದ ಸನಕಾದಿಗಳ ಮನಸ್ಸನ್ನೂ ಕದಡಿದ ಮಹಿಮೆ ಶ್ರೀತುಳಸಿಯದು.

ತುಲಸಿಯ ಪೂಜೆ ದೇವರ ಪೂಜೆ. ತುಲಸಿಯಿಂದ ಮಾಡುವ ಪೂಜೆಯೂ ದೇವರ ಪೂಜೆಯೇ. ತುಲಸಿಯಲ್ಲಿಯ ಎಲ್ಲವೂ ದೇವರಿಗಾಗಿಯೇ. ಮಂಜರೀ, ದಳ, ಎಲೆ, ಕಾಷ್ಠ, ಬೇರು, ಮೃತ್ತಿಕಾ, ಹೆಸರು ಎಲ್ಲವನ್ನೂ ದೇವರಿಗೆ ಅರ್ಪಿಸಿದ್ದಾಳೆ. ಅದೆಲ್ಲವನ್ನೂ ದೇವರು ಒಪ್ಪಿಕೊಂಡಿದ್ದಾನೆ. ಹೀಗೆ ತನ್ನ ಸರ್ವಸ್ವವನ್ನು ದೇವರಿಗೆ ಸಮರ್ಪಿಸಿಕೊಂಡ ಮಹಚ್ಚೇತನ ಶ್ರೀತುಳಸಿ.

ಪ್ರಾಯಃ ಎಲ್ಲ ಪುರಾಣಗಳೂ ತುಲಸಿಯ ಮಹಿಮೆಯನ್ನು ಬಣ್ಣಿಸಿವೆ. ಇಂತಹ ತುಲಸಿಯ ಮಹಿಮೆಯ ಸಂಗ್ರಹ ಮತ್ತು ಅನುವಾದ ಇಲ್ಲಿ ಇದೆ. ತುಲಸಿಗೆ ನಾವು ಮಾಡಬಹುದಾದ ಉಪಚಾರಗಳು, ತುಲಸಿಯಿಂದ ನಮಗಾಗುವ ಉಪಯೋಗಗಳನ್ನು ಸಂಗ್ರಹವಾಗಿ ಈ ಹೊತ್ತಿಗೆಯಲ್ಲಿ ತಿಳಿಸಲು ಪ್ರಯತ್ನ ಮಾಡಲಾಗಿದೆ.

ಮತ್ತು ಶ್ರೀಸತ್ಯಪ್ರಮೋದತೀರ್ಥಗ್ರಂಥಭಾಂಡಾಗಾರದಲ್ಲಿ ದೊರೆತ ಒಂದು ಅಪರೂಪದ ಹಸ್ತಪ್ರತಿಯಲ್ಲಿ ಇರುವ ಸುಮಾರು ಹತ್ತು ಕಥಾನಕಗಳ ಕನ್ನಡ ಅನುವಾದವನ್ನು ಮಾಡಿದ್ದೇನೆ. ಈ ಕಥಾಭಾಗ ಆಬಾಲವೃದ್ಧರಿಗೆ ಉಪಯುಕ್ತವಾಗುತ್ತದೆ ಎಂದು ಭಾವಿಸಿದ್ದೇನೆ. ಮತ್ತು ವಿದ್ವಾಂಸರ ಅವಗಾಹನೆಗಾಗಿ ಅಲ್ಲಿಯ ಮೂಲಭಾಗವನ್ನು ಪ್ರತ್ಯೇಕವಾಗಿ ನೀಡಲಾಗಿದೆ. ಪೌರಾಣಿಕವಾದ ತುಲಸಿಯ ಸ್ತೋತ್ರಗಳು, ಕವಚ, ಮಾಹಾತ್ಮ್ಯಗಳನ್ನು ಕೂಡಾ ನೀಡಲಾಗಿದೆ. ಮತ್ತು ಹರಿದಾಸರು ರಚಿಸಿದ ತುಲಸಿಯ ಹಾಡುಗಳನ್ನು ಕೂಡಾ ಸಂಗ್ರಹಿಸಿ ನೀಡಲಾಗಿದೆ.

ಸ್ಮೃತಿಗಳ ಸಂಗ್ರಹ ಅದರ ಯಥಾವತ್ತಾದ ಅನುವಾದ ಮಾತ್ರ ಇಲ್ಲಿ ಇದೆ. ಇದರಲ್ಲಿ ನನ್ನ ಮಾತುಗಳು, ನನ್ನ ಕಲ್ಪನೆಗಳು ಸರ್ವಥಾ ಇಲ್ಲ. ಈ ಹೊತ್ತಿಗೆಯನ್ನು ಓದುವಾಗ ನಿಮಗೆ ಈ ವಿಷಯ ಸ್ಪಷ್ಟವಾಗುತ್ತದೆ.

ಇದನ್ನು ಓದಿದ ಮೇಲೆ ಪ್ರತಿನಿತ್ಯವೂ ತುಲಸಿಯ ಸೇವೆ ಮಾಡಲೇಬೇಕೆಂಬ ಭಾವನೆ ಒಂದು ಕ್ಷಣ ಮನಸ್ಸಿನಲ್ಲಿ ಬಂದು ಹೋದರೂ ಸಾಕು. ನನ್ನ ಈ ಪ್ರಯತ್ನ ಸಫಲವೆಂದು ಭಾವಿಸುತ್ತೇನೆ. ಈ ಪುಸ್ತಕವನ್ನು ಓದಿದ ಬಾಯಿಯಿಂದ ನನ್ನನ್ನು ಹರಿಸಿದರೆ ನಾನು ಮತ್ತಿಷ್ಟು ಸಂತೋಷಪಡುತ್ತೇನೆ.

## ಕೃತಜ್ಞತಾಸಮರ್ಪಣೆ

ಈ ಪ್ರಕಾಶನದ ಜೀವಾಳ ಪ್ರಾತಃಸ್ಮರಣೀಯರಾದ, ಪರಮಪೂಜ್ಯರಾದ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು. ಪರಮಪೂಜ್ಯರಾದ ಅವರ ಚರಣಕಮಲಗಳಲ್ಲಿ ಭಕ್ತಿಶ್ರದ್ಧಾಪೂರ್ವಕವಾದ ಅನಂತಾನಂತಶಿರಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಪ್ರಸ್ತುತ ತುಲಸೀಪುಸ್ತಕದ ಮುದ್ರಣಮಾಡುವಾಗ ತುಲಸೀಮಾಹಾತ್ಮ್ಯ ಎಂಬ ಎರಡು ಅಪರೂಪವಾದ ಪ್ರತಿಗಳು ಶ್ರೀಸತ್ಯಪ್ರಮೋದ-ತೀರ್ಥಪುಸ್ತಕಭಾಂಡಾಗಾರದಲ್ಲಿ ನನಗೆ ದೊರೆತವು. ಅವರು ಸಂಗ್ರಹಿಸಿದ ಗ್ರಂಥಾಲಯವನ್ನು ಕಂಡಾಗ ಪ್ರಾತಃಸ್ಮರಣೀಯರಾದ ಶ್ರೀಸತ್ಯಪ್ರಮೋದತೀರ್ಥರಿಗೆ ಹಸ್ತಪ್ರತಿಗಳ ಸಂಗ್ರಹ ಮತ್ತು ಪ್ರಾಚೀನ-ಅಪೂರ್ವ ಗ್ರಂಥಗಳ ಸಂರಕ್ಷಣೆಯ ಬಗ್ಗೆ ಇದ್ದ ಕಾಳಜಿ ಏನೆಂದು ಲೇಶ ಮಾತ್ರ ಅರ್ಥವಾಗಬಹುದು. ಗ್ರಂಥಗಳ ಸಂಗ್ರಹಕ್ಕಾಗಿ ಅವರು ಪಟ್ಟ ಶ್ರಮವನ್ನು ಹಿರಿಯರಿಂದ ಕೇಳಿದಾಗ ಮೈನವಿರೇಳುತ್ತದೆ.

ನನಗೆ ದೊರೆತ ಎರಡು ಹಸ್ತಪ್ರತಿಗಳಲ್ಲಿ ಒಂದು ಪ್ರತಿ ತುಂಬ ಸ್ಪಷ್ಟವಾಗಿ ಇದ್ದದ್ದರಿಂದ ನನ್ನ ಸಂಶೋಧನೆಗೆ ಯಾವುದೇ ರೀತಿಯಾದ ತೊಂದರೆಯಾಗಲಿಲ್ಲ. ಆ ಹಸ್ತಪ್ರತಿಗಳಲ್ಲಿ ತುಲಸೀಮಹಿಮಾಬೋಧಕವಾದ ಅತ್ಯಪರೂಪವಾದ ಹತ್ತು ಕಥಾನಕಗಳು ಇವೆ. ಪ್ರಾಯಃ ಯಾರೂ ಕೇಳದ ಕಥೆಗಳೆಂದು ನನಗೆ ತೋರುತ್ತದೆ.

ಈ ಸಂಶೋಧನೆಯ ಕಾರ್ಯದಲ್ಲಿ ನಮಗೆ ಎಲ್ಲ ರೀತಿಯಲ್ಲಿಯೂ ಬೆಂಬಲವಾಗಿ, ಸದಾ ಶ್ರೀಮನ್ನ್ಯಾಯಸುಧಾದಿಪಾಠಪ್ರವಚನಗಳಲ್ಲಿ, ಮಧ್ವಮತಸಿದ್ಧಾಂತದ ಪ್ರಚಾರದಲ್ಲಿ ನಿರತರಾಗಿ, ಸಮಾಜವನ್ನು ಭಕ್ತಿಯೆಂಬ ಗಂಗಾಪ್ರವಾಹದಲ್ಲಿ ಮುಳುಗಿಸಿ ಪುನೀತರನ್ನಾಗಿ ಮಾಡುತ್ತಿರುವವರು ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು. ಬಿಡುವು ಇವರ ದಿನಚರಿಯಲ್ಲಿಯೇ ಇಲ್ಲ. ಇದು ಅವರನ್ನು

ಕಂಡವರಿಗೆಲ್ಲ ಗೊತ್ತು. ಆದರೂ ನನ್ನ ಈ ಪ್ರಯತ್ನಕ್ಕೆ ಆಶೀರ್ವಚನವನ್ನು ನೀಡಿರುವ ನನ್ನ ವಿದ್ಯಾಗುರುಗಳ (ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು) ಸನ್ನಿಧಿಗೆ ಮತ್ತೆ ಮತ್ತೆ ಅನಂತಾನಂತ ಶಿರಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಬಿಡುವಿಲ್ಲದೇ ಪಾಠಪ್ರವಚನದಲ್ಲಿ ತಲ್ಲೀನರಾದರೂ ತಮ್ಮ ಅಮೂಲ್ಯ ಸಲಹೆಗಳಿಂದ ನಮ್ಮ ಏಳಿಗೆಗೆ ಕಾರಣರಾದ ಶ್ರೀಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಪಂ.ಪೂ.ಆಚಾರ್ಯರವರಿಗೆ (ಶ್ರೀ ರಂಗಾಚಾರ್ಯ ಗುತ್ತಲ) ಸಾಷ್ಟಾಂಗ ಪ್ರಣಾಮಗಳು.

ಬೇಸರವಿಲ್ಲದೇ ನಮ್ಮ ಅಭಿವೃದ್ಧಿಗೆ ಪದೇ ಪದೇ ಎಚ್ಚರ ನೀಡುತ್ತಿರುವ, ಗುರುಗಳಾದ ಶ್ರೀಸತ್ಯಧ್ಯಾನವಿದ್ಯಾಪೀಠದ ಕುಲಪತಿಗಳಾದ ಪಂ.ಪೂ ಆಚಾರ್ಯರಿಗೆ (ಶ್ರೀ ವಿದ್ಯಾಸಿಂಹಾಚಾರ್ಯ ಮಾಹುಲಿ) ಸಾಷ್ಟಾಂಗ ಪ್ರಣಾಮಗಳು.

ಸಂಶೋಧನೆಯ ಸಮಯದಲ್ಲಿ ಅಮೂಲ್ಯವಾದ, ಸೂಕ್ತವಾದ ಸಲಹೆಗಳನ್ನು ನೀಡುತ್ತಿರುವ ಪಂ. ವಿದ್ಯಾಧೀಶಾಚಾರ್ಯ ಗುತ್ತಲ ಇವರಿಗೆ ನನ್ನ ನಮಸ್ಕಾರಗಳು.

ಈ ಹೊತ್ತಿಗೆ ಅಚ್ಚುಕಟ್ಟಾಗುವಂತೆ ಜೋಡಣೆ ಮಾಡಿದ ಪಂ. ಮಹಿದಾಸಾಚಾರ್ಯ ಜೋಷಿ ಇವರಿಗೆ, ಶ್ರೀತುಳಸಿಯನ್ನು ಅತ್ಯಂತ ಸುಂದರವಾಗಿ ಅಲಂಕರಿಸಿದ ಶ್ರೀ ಕೆ. ಎಮ್ ಶೇಷಗಿರಿ ಇವರಿಗೆ ಆದರಪೂರ್ವಕ ಕೃತಜ್ಞತೆಗಳು. ಈ ನನ್ನ ಕೃತಿಯನ್ನು ಆದ್ಯಂತ ಅವಲೋಕನ ಮಾಡಿ ತಪ್ಪುಗಳನ್ನು ತಿದ್ದಿದ ನನ್ನ ತಂದೆಯವರಿಗೆ ನಮಸ್ಕಾರಗಳು. ಹಾಗೂ ಕರಡುಪ್ರತಿಯನ್ನು ತಿದ್ದುವಲ್ಲಿ ಆದ್ಯಂತ ನನಗೆ ಸಹಕರಿಸಿದ ನನ್ನ ಅಕ್ಕನ ಮಗನಾದ ಚಿ. ಹಯವದನ ಇವನಿಗೆ ವೇದೋಕ್ತಶುಭಾಶೀರ್ವಾದಗಳು.

ಈ ಹೊತ್ತಿಗೆಯ ಮುದ್ರಣಕ್ಕೆ ಶ್ರೀಮತಿ ಮಾನ್ವಿ ಕುಮುದಾಬಾಯಿ ಶ್ರೀ ಮಾನ್ವಿ ಲಕ್ಷಣರಾವ್ ಇವರ ಸ್ಮರಣಾರ್ಥ ಆರ್ಥಿಕ ಸಹಾಯಮಾಡಿರುವ ಶ್ರೀಮತಿ ಪರಿಮಳಾ ಶ್ರೀ ರಾಮರಾವ್ ಮಾನ್ವಿ ಮತ್ತು ಅವರ ಮಕ್ಕಳಾದ ಶ್ರೀಯುತ ಆನಂದರಾವ್ ಮಾನ್ವಿ ಇವರಿಗೆ ಆದರಪೂರ್ವಕ ಕೃತಜ್ಞತೆಗಳು.

ಮತ್ತು ಸಮಯಕ್ಕೆ ಸರಿಯಾಗಿ ಓರಣವಾಗಿ ಮುದ್ರಿಸಿದ ವಾಗರ್ಥ ಮುದ್ರಣಾಲಯದವರಿಗೆ ಕೃತಜ್ಞತೆಗಳು. ಇದರಲ್ಲಿರುವ ತಪ್ಪುಗಳನ್ನು ಸಹಿಸಿ ಹರಿಸಬೇಕೆಂದು ಸುಜನರಲ್ಲಿ ಸವಿನಯವಾಗಿ ಪ್ರಾರ್ಥಿಸುತ್ತೇನೆ.

ಇತಿ ಸುಧೀಪಾದದಾಸ

ವಾದಿರಾಜ ಕರಣಮ್

# ಪ್ರಕಾಶಕರ ನುಡಿ

ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ ''**ವಿಶ್ವಮಧ್ವಮಹಾಪರಿಷತ್**''

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈ ದೃಷ್ಟಿಯಲ್ಲಿ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಅನೇಕ ಮಹತ್ವದ ಗ್ರಂಥಗಳನ್ನು ಅನೇಕ ಟೀಕಾ-ಟಿಪ್ಪಣಿಗಳೊಂದಿಗೆ ಪ್ರಕಾಶಿಸಿದೆ. ಇದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ-ತೆಲುಗು-ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪ್ರಕೃತ ''**ಶ್ರೀತುಳಸೀ**'' ಎಂಬ ಹೊತ್ತಿಗೆಯು ವಿಶ್ವಮಧ್ವಮಹಾಪರಿಷತ್ತಿನಿಂದ ಪ್ರಕಾಶಿತವಾಗುತ್ತಿದೆ. ಇದರ ಸಂಪಾದನೆ ಮಾಡಿದ ಪಂ. ವಾದಿರಾಜಾಚಾರ್ಯ ಕರಣಂ ಇವರಿಗೆ ಸುಂದರವಾಗಿ ಮುದ್ರಣಮಾಡಿದ ವಾಗರ್ಥಮುದ್ರಣಾಲಯದವರಿಗೆ ಧನ್ಯವಾದಗಳು.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು - 4

## ವಿಷಯಾನುಕ್ರಮಣಿಕಾ





### ಆಶೀರ್ವಚನ

ಶ್ರೀಮತಿ ಪರಿಮಳಾ ಶ್ರೀ ರಾಮಾರಾವ್ ಮಾನ್ವಿ ಇವರು ತಮ್ಮ ತಂದೆ-ತಾಯಿಗಳಾದ ಶ್ರೀಮತಿ ಕುಮುದಾಬಾಯಿ ಶ್ರೀ ಲಕ್ಷ್ಣರಾವ್ ಮಾನ್ವಿ ಇವರ ಸ್ಮರಣಾರ್ಥ ಶ್ರೀತುಳಸೀ ಎಂಬ ಈ ಹೊತ್ತಿಗೆಯ ಪ್ರಕಾಶನದ ಸಮಗ್ರ ವೆಚ್ಚವನ್ನು ಭರಿಸಿದ್ದಾರೆ. ಈ ಮೂಲಕ ಶ್ರೀವೇದವ್ಯಾಸದೇವರ ಹಾಗೂ ಶ್ರೀಮದಾಚಾರ್ಯರ ಉತ್ತಮ ಸೇವೆಯನ್ನು ಮಾಡಿದ್ದಾರೆ.

ಇವರಿಗೆ ಹಾಗೂ ಇವರ ಮಕ್ಕಳಾದ ಶ್ರೀಯುತ ಮಾನ್ವಿ ಆನಂದರಾವ್ ಇವರಿಗೆ ಭಗವಂತ ಆಯುರಾರೋಗ್ಯ ಐಶ್ವರ್ಯಗಳನ್ನು, ಆಚಾರ್ಯರ ಶಾಸ್ತ್ರದಲ್ಲಿ ಆಸಕ್ತಿಯನ್ನು ನೀಡಲಿ ಎಂದು ಅಸ್ಮದುಪಾಸ್ಯಮೂರ್ತಿ ಶ್ರೀಮೂಲರಾಮದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

**ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು**

ಉತ್ತರಾದಿಮಠ

# ಶ್ರೀ ತುಳಸೀ

॥ ಶ್ರೀಗುರುಭ್ಯೋ ನಮಃ, ॥ ಶ್ರೀಪರಮಗುರುಭ್ಯೋ ನಮಃ ॥
॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥
॥ ತಸ್ಯೈ ತುಲಸ್ಯೈ ನಮಃ ॥

ತುಲಸಿಗೆ ವೈಷ್ಣವರ ಮನೆಗಳಲ್ಲಿ ವಿಶಿಷ್ಟವಾದ ಸ್ಥಾನವಿದೆ. ವಿಷ್ಣುವಿನ ಅರ್ಚನೆಗೆ ಪ್ರಧಾನವಾದ ಸಾಧನವಾಗಿದೆ ಈ ತುಲಸಿ. ತುಲಸಿಯನ್ನು ಭಕ್ತಿಯಿಂದ ಸ್ಮರಿಸಿದರೂ ವಿಶಿಷ್ಟವಾದ ಫಲ ದೊರೆಯುತ್ತದೆ. ಗೋಪೀಚಂದನವಿಲ್ಲದಿರುವಾಗ ಆ ಸ್ಥಾನದಲ್ಲಿ ತುಲಸೀಮೃತ್ತಿಕೆಯನ್ನು ಉಪಯೋಗಿಸಬಹುದೆಂದು ಸ್ಮೃತಿಗಳು ಸಾರುತ್ತವೆ.

ಆಯುರ್ವೇದದಲ್ಲಿಯೂ ಪ್ರಧಾನವಾದ ಸ್ಥಾನ-ಮಾನಗಳು ತುಲಸಿಗೆ ಇವೆ. ಅಜೀರ್ಣ,ಅತಿಸಾರ,ಹೃದಯರೋಗ,ಅಪಸ್ಮಾರ,ಜ್ವರ,ಕೆಮ್ಮು, ಮೊದಲಾದ ಸುಮಾರು ನೂರು ರೋಗಗಳಲ್ಲಿ ತುಲಸಿಯನ್ನು ಉಪಯೋಗಿಸಿ ಆ ರೋಗಗಳನ್ನು ಪರಿಹರಿಸಿದ ವೈದ್ಯರು ಈಗಲೂ ಇದ್ದಾರೆ. ಇದು ತುಲಸಿಯ ವೈಶಿಷ್ಟ್ಯ. ಸರ್ವರೋಗವೈದ್ಯನಾದ ಧನ್ವಂತರಿಯ ಆನಂದಾಶ್ರುಗಳಿಂದ ಅಮೃತದಲ್ಲಿ ಉತ್ಪನ್ನವಾಗಿದೆ ತುಲಸಿ. ಇಂತಹ ತುಲಸಿ ಸರ್ವರೋಗನಿವಾರಕವಾಗಿದೆ. ಆದರೆ ಒಂದು ವಿಷಯವನ್ನು ಕಡ್ಡಾಯವಾಗಿ ಗಮನಿಸಬೇಕು."ದೇವರ ನಿರ್ಮಾಲ್ಯವಾದ ತುಲಸಿಯನ್ನು ಔಷಧಕ್ಕಾಗಿ ಉಪಯೋಗಿಸಬೇಕು. ಇದರಿಂದ ಇನ್ನೂ ಹೆಚ್ಚಿನ ಪರಿಣಾಮಗಳು ಕಂಡುಬರುತ್ತವೆ."

ತುಲಸಿಯು ನಿತ್ಯೋಪಯೋಗಿಯಾದ ವೃಕ್ಷ. ಸ್ತ್ರೀ,ಪುರುಷ,ಬಾಲ,ವೃದ್ಧ ಎಂಬ ಭೇದವಿಲ್ಲದೇ ಎಲ್ಲರಿಂದ ಪೂಜ್ಯವಾದ ವೈಷ್ಣವ ವೃಕ್ಷ ಶ್ರೀತುಲಸಿ. ಆದರೂ ಮಹಿಳೆಯರ ಪಾಲಿಗೆ ಕಲ್ಪವೃಕ್ಷವಾಗಿದೆ. ಈ ವೃಕ್ಷದಲ್ಲಿ ಲಕ್ಷ್ಮೀದೇವಿಯ ಸನ್ನಿಧಾನವು ವಿಶಿಷ್ಟವಾಗಿದೆ. ಆದ್ದರಿಂದ ಭಗವಂತನ ವಿಶಿಷ್ಟವಾದ ಪ್ರೀತಿಗೆ ಪಾತ್ರವಾಗಿದೆ. ಇಂತಹ

ತುಲಸಿಯ ವಿಶೇಷವಾದ ವಿಚಾರಗಳನ್ನು ತಿಳಿದುಕೊಳ್ಳುವುದು ನಮ್ಮ ಕರ್ತವ್ಯವಾಗಿದೆ. ಅನೇಕ ಪುರಾಣಗಳು ಮತ್ತು ಸ್ಮೃತಿಗಳು ಧರ್ಮಶಾಸ್ತ್ರಪ್ರಬಂಧಗಳು ತುಲಸಿಯ ಮಹಿಮೆಯನ್ನು ಬಣ್ಣಿಸುತ್ತವೆ. ಆ ಆಧಾರದ ಮೇಲೆ ತುಲಸಿಯ ವಿಚಾರವನ್ನು ಸ್ವಲ್ಪಮಟ್ಟಿಗೆ ತಿಳಿಯೋಣ.

ಈಗಾಗಲೇ ತಿಳಿದಂತೆ ಶ್ರೀಹರಿಯ ಅರ್ಚನೆಯಲ್ಲಿ ತುಲಸಿಯ ಪಾತ್ರ ಪ್ರಧಾನವಾಗಿದೆ. ತುಲಸಿಯಿಂದ ಅರ್ಚಿಸಿದರೆ ಸಾಕು ಪರಮಾತ್ಮ ವಿಶೇಷವಾಗಿ ಪ್ರೀತನಾಗುತ್ತಾನೆ. ಆ ಅರ್ಚಕನಿಗೆ ವಿಶಿಷ್ಟವಾದ ಸ್ಥಾನವು ಸಿಗುತ್ತದೆ. ಇದು ಎಲ್ಲ ಸ್ಮೃತಿಗಳ ಒಕ್ಕೊರಳಿನ ತೀರ್ಮಾನ. ಈ ವಿಷಯವನ್ನು ಶ್ರೀಮದಾಚಾರ್ಯರು ಪರಿಷ್ಕೃತವಾಗಿ ತಮ್ಮ ಬೃಹದ್ಭಾಷ್ಯದಲ್ಲಿ ತಿಳಿಸುತ್ತಾರೆ. ಆ ವಚನವಿದು-

**ದ್ವಾದಶ್ಯಾದಿವ್ರತಂ ಚೈವ ತುಲಸ್ಯಾದ್ಯೈರಥಾಽರ್ಚನಮ್ ।**
**ಸರ್ವಂ ಭಕ್ತ್ಯರ್ಥಮುದ್ದಿಷ್ಟಂ ನಿಷ್ಫಲಂ ತು ತಯಾ ವಿನಾ ।।ಅ.ಷ।।**

ವ್ರತಗಳಲ್ಲಿ ದ್ವಾದಶೀವ್ರತ ಮಹತ್ತ್ವದ ಸ್ಥಾನವನ್ನು ಪಡೆದಿದೆ. ಅರ್ಚನಸಾಧನವಾದವುಗಳಲ್ಲಿ ತುಲಸಿಯ ಪಾತ್ರ ಮಹತ್ತ್ವದ್ದಾಗಿದೆ. ಆದರೆ ಅದು ಭಕ್ತಿಗಿಂತಲೂ ಮಹತ್ತ್ವದ್ದೆಂಬ ಭ್ರಾಂತಿಗೆ ಒಳಗಾಗಬಾರದು. ಭಕ್ತಿಯಿಲ್ಲದ ತುಲಸ್ಯಾದ್ಯರ್ಚನೆ, ದ್ವಾದಶ್ಯಾದಿವ್ರತಗಳು ವ್ಯರ್ಥವಾಗಿವೆ. ಅದರಿಂದ ಯಾವುದೇ ವಿಧವಾದ ಪ್ರಯೋಜನವಿರುವುದಿಲ್ಲ. ತುಲಸ್ಯಾದಿಸಾಧನಗಳಿಂದ ಅರ್ಚಿಸಿದರೆ, ದ್ವಾದಶ್ಯಾದಿವ್ರತಗಳನ್ನು ಪಾಲಿಸಿದರೇ ಸಾಧಕರ ಭಕ್ತಿಯು ಅಭಿವೃದ್ಧವಾಗುತ್ತದೆ. ಆದ್ದರಿಂದ ಭಕ್ತಿಯ ಅಭಿವೃದ್ಧಿಯನ್ನು ಬಯಸುವವರಾದ ಅಧಿಕಾರಿಗಳು ತುಲಸಿಯಿಂದ ಶ್ರೀಹರಿಯ ಅರ್ಚನೆಯನ್ನು ಅವಶ್ಯವಾಗಿ ಮಾಡಬೇಕು. ತುಲಸ್ಯರ್ಚನೆ ಮಾಡುವಾಗ ಮನಸ್ಸು ಭಕ್ತಿಯುಕ್ತವಾಗಿರಬೇಕು.

ಇದೇ ಮಾತನ್ನು ತಿಳಿಸುವ ಸ್ಕಂದಪುರಾಣದ ವಚನವನ್ನು ಗಮನಿಸಿ-

**ಭಕ್ತ್ಯಾ ಸಂಪೂಜಿತೋ ನಿತ್ಯಂ ತುಲಸ್ಯಾಸ್ತು ದಲಾರ್ಧತಃ ।**
**ಸ್ವಯಂ ಪ್ರತ್ಯಕ್ಷಮಾಯಾತಿ ಭಗವಾನ್ ಹರಿರೀಶ್ವರಃ ।।ವೈ.ಖಂ.ಕಾ.ಮಾ.೮.೫।।**

ದೇವರ ಅರ್ಚನೆಯನ್ನು ಭಕ್ತಿಯಿಂದ ಮಾಡಬೇಕು. ಲಕ್ಷತುಲಸಿಯಿಂದ ಅಲ್ಲ. ಅರ್ಧದಲ ಶ್ರೀತುಲಸಿಯನ್ನು ಭಕ್ತಿಯಿಂದ ಸಮರ್ಪಿಸಿದರೂ ದೇವರು ಸಂತೋಷದಿಂದ ಆ ಪೂಜೆಯನ್ನು ಸ್ವೀಕರಿಸುತ್ತಾನೆ. ಭಕ್ತಿಯಿಂದ ಪೂಜಿತನಾದ ಪರಮಾತ್ಮನೇ ನಮಗೆ ಗೋಚರನಾಗುತ್ತಾನೆ.

**ತುಲಸೀಶಬ್ದದ ಅರ್ಥ**

ಬ್ರಹ್ಮವೈವರ್ತಪುರಾಣವು ''ತುಲಸೀ'' ಎಂಬ ಶಬ್ದಕ್ಕೆ ವಿಶಿಷ್ಟವಾದ ಅರ್ಥವನ್ನು ತಿಳಿಸುತ್ತದೆ. ಆ ವಚನ ಹೀಗಿದೆ-

**ಯಸ್ಯಾ ದೇವ್ಯಾಸ್ತುಲಾ ನಾಽಸ್ತಿ ವಿಶ್ವೇಷು ನಿಖಿಲೇಷು ಚ ।**
**ತುಲಸೀ ತೇನ ವಿಖ್ಯಾತಾ ತಾಂ ಯಾಮಿ ಶರಣಂ ಪ್ರಿಯೇ ॥**

**ನರಾ ನಾರ್ಯಶ್ಚ ತಾಂ ದೃಷ್ಟ್ವಾ ತುಲನಾಂ ದಾತುಮಕ್ಷಮಾಃ ।**
**ತೇನ ನಾಮ್ನಾ ಚ ತುಲಸೀಂ ತಾಂ ವಿದಂತಿ ಪುರಾವಿದಃ ॥**

**-ಬ್ರ.ವೈ.ಪ್ರ.ಖ.೧೫.೧೫ ॥**

''ತುಲಾಂ ಸ್ಯತಿ ಇತಿ ತುಲಸೀ'' ತುಲನಾರಹಿತಳಾದವಳು ತುಲಸೀ. ಅರ್ಚನೆಸಾಧನಗಳಲ್ಲಿ ತುಲಸಿಯ ತುಲನಕ್ಕೆ ಬರುವ ಮತ್ತೊಂದು ಪತ್ರವಾಗಲೀ ಪುಷ್ಪವಾಗಲೀ ಇಡಿಯ ವಿಶ್ವದಲ್ಲಿಯೇ ಇಲ್ಲ. ಹೀಗಾಗಿ ಇದನ್ನು ''ತುಲಸೀ'' ಎಂಬ ನಾಮದಿಂದ ಜ್ಞಾನಿಗಳು ವ್ಯವಹರಿಸಿದ್ದಾರೆ.

ಪುರುಷರು ಮತ್ತು ಸ್ತ್ರೀಯರೆಲ್ಲರೂ ಈ ಪತ್ರದ ಪ್ರಭಾವವನ್ನು ಕಂಡು ಇದಕ್ಕೆ ಸರಿತೂಗುವ ಮತ್ತೊಂದು ಪತ್ರವನ್ನಾಗಲೀ, ಪುಷ್ಪವನ್ನಾಗಲೀ ತೋರಿಸಲು ಅಸಮರ್ಥರಾದರು. ಆದ್ದರಿಂದ ಇದಕ್ಕೆ ''ತುಲಸೀ'' ಎಂದು ಪೂರ್ವಜರು ವ್ಯವಹರಿಸಿದ್ದಾರೆ.

**ಬೃಹದ್ಧರ್ಮ ತಿಳಿಸುವ ಅರ್ಥ**

ಬೃಹದ್ಧರ್ಮಪುರಾಣ ತಿಳಿಸುವ ಅರ್ಥವೂ ಸ್ವರಸವಾಗಿದೆ. ಆ ವಚನವನ್ನು ಅವಲೋಕಿಸಿ-

**ತಕಾರೋ ಮರಣಂ ಪ್ರೋಕ್ತಂ ತದ್ಯೋಗಃ ಸ್ಯಾದುಕಾರತಃ ।**
**ಮೃತಾ ಲಸತಿ ಸೇತ್ಯೇವಂ ತುಲಸೀತ್ಯೇವ ಗೀಯತೇ ॥ ಬೃ.ಧ.ಪು ॥**

ತುಲಸೀ ಎಂಬ ಪದದಲ್ಲಿ **ತ್-ಉ-ಲಸೀ** ಎಂಬ ಶಬ್ದಗಳು ಇವೆ. **ತ್** ಎಂದರೆ ಮರಣವೆಂದರ್ಥ. **ಉ** ಎಂದರೆ ಸಂಬಂಧ ಉಳ್ಳವರು ಎಂದು ಅರ್ಥ. ಒಟ್ಟಾರೆ **ತು** ಎಂದರೆ ಮೃತರಾದವರು ಎಂದು ಅರ್ಥ. ಮೃತರಾದವರು **ಲಸತಿ** ಶೋಭಿಸುತ್ತಾರೆ. ಅರ್ಥಾತ್ ಯಾವ ವ್ಯಕ್ತಿ ತುಲಸಿಯ ಸ್ಮರಣಾದಿಗಳನ್ನು ಮಾಡಿ ಮೃತರಾಗಿರುವರೋ ಅವರು ಸ್ವರ್ಗಾದಿಲೋಕದಲ್ಲಿ ಶೋಭಾಯಮಾನರಾಗಿ ಇರುತ್ತಾರೆ ಎಂದು ಅರ್ಥ. ಈ ಕಾರಣದಿಂದ ತುಲಸೀ ಎಂದು ಸ್ಮೃತಿಗಳಲ್ಲಿ

ಗೀಯಮಾನಳಾಗಿದ್ದಾಳೆ. ಅಥವಾ ತುಲಸಿಯ ಸ್ಮರಣೆಯಿಂದ ಮೃತರಾದವರೂ ಬದುಕುತ್ತಾರೆ. ಮೃತರಾದವರನ್ನೂ ಬದುಕಿಸುವ ಸಾಮರ್ಥ್ಯ ಈ ತುಲಸಿಗೆ ಇದೆ. ಈ ಸಾಮರ್ಥ್ಯಗಳನ್ನು ಮನಗಂಡ ಮನೀಷಿಗಳು ಇದನ್ನು ತುಲಸೀ ಎಂದು ಅನ್ವರ್ಥವಾಗಿ ವ್ಯವಹರಿಸಿದ್ದಾರೆ. ತುಲಸಿಯನ್ನು ಸ್ಮರಿಸಿದವರೆಲ್ಲರೂ ಸದ್ಗತಿಯನ್ನು ಪಡೆಯುತ್ತಾರೆ.

**ಗೌರವ ಯಾರಿಗೆ ? ಯಾಕೆ ?**

ಇದು ಮೌಲಿಕವಾದ ಸಮಸ್ಯೆ. ಈ ಸಮಸ್ಯೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು ಅತ್ಯಂತ ಆವಶ್ಯಕ. ಈ ಸಮಸ್ಯೆಯನ್ನು ಎತ್ತಿಕೊಂಡು ಸ್ಕಂದಪುರಾಣ ಸಮರ್ಥವಾದ ರೀತಿಯಲ್ಲಿ ಪರಿಹರಿಸುತ್ತದೆ.

ಅದು ಧಾತ್ರೀಯನ್ನು ವರ್ಣಿಸುವ ಭಾಗ. ಧಾತ್ರೀವೃಕ್ಷಕ್ಕೆ ಇಷ್ಟೆಲ್ಲ ಮಹಿಮೆ ಬಂದದ್ದು ಯಾಕೆ? ಅದರ ಪೂಜೆ ಇಷ್ಟು ವಿಶಿಷ್ಟವಾಗಿ ನಡೆಯುತ್ತಿರುವುದು ಯಾಕೆಂದು ಪ್ರಶ್ನೆಮಾಡಿದವರಿಗೆ ನೀಡಿದ ಉತ್ತರ ಹೀಗಿದೆ-

**ಆಮರ್ದಕೀ ನಗೋ ಹ್ಯೇಷಃ ಪ್ರವರೋ ವೈಷ್ಣವೋ ಯತಃ ॥**

ಈ ಧಾತ್ರೀವೃಕ್ಷ ವೈಷ್ಣವ ವೃಕ್ಷ ಆದ್ದರಿಂದ ವೃಕ್ಷಗಳಲ್ಲೆಲ್ಲ ಇದು ಶ್ರೇಷ್ಠವಾಗಿದೆ.

ಈ ಮಾತನ್ನು ನಾವು ಸರಿಯಾಗಿ ಆಲೋಚಿಸಬೇಕು. ಮನುಷ್ಯನಿಗೆ ಗೌರವ-ದೊಡ್ಡಸ್ತಿಕೆ ತಾನು ಮಾಡಿದ ದೊಡ್ಡ-ದೊಡ್ಡ ಕಾರ್ಯಗಳಿಂದಲ್ಲ. ಹಣದ ಸಂಪಾದನೆಯಿಂದಲ್ಲ. ಸೌಂದರ್ಯಪ್ರಾಪ್ತಿಯಿಂದಲ್ಲ. ಮತ್ತಾವುದೇ ಲೌಕಿಕವಾದ ಕಾರಣಕ್ಕಾಗಿ ಚೇತನರಿಗೆ ಶ್ರೇಷ್ಠತ್ವವು ಪ್ರಾಪ್ತವಾಗುವುದಿಲ್ಲ. ಅವರಲ್ಲಿಯ ವೈಷ್ಣವತೆಯಿಂದಲೇ ಅವರವರಿಗೆ ಶ್ರೇಷ್ಠತ್ವವು ಪ್ರಾಪ್ತವಾಗುತ್ತದೆಂದು ಸ್ಕಂದಪುರಾಣ ಬಹಳ ಸೊಗಸಾಗಿ ತಿಳಿಸಿದೆ.

ವಿಷ್ಣುವಿನ ಸಾಕ್ಷಾತ್ಕಾರವನ್ನು ಪಡೆದ ಬ್ರಹ್ಮದೇವರಿಗೆ ಆನಂದ ಉದ್ರಿಕ್ತವಾಯಿತು. ಆ ಆನಂದೋದ್ರೇಕದಿಂದ ಬ್ರಹ್ಮದೇವರ ಆನಂದಾಶ್ರುಗಳು ನೆಲದ ಮೇಲೆ ಬಿದ್ದವು. ಆಗ ಹುಟ್ಟಿದ ವೃಕ್ಷವಿದು. ಹೀಗಾಗಿ ಈ ವೃಕ್ಷ ವೈಷ್ಣವವೃಕ್ಷ.

ಮಾತ್ರವಲ್ಲ. ಈ ವೃಕ್ಷದ ಪತ್ರಗಳು ದೇವರ ಅರ್ಚನೆಗೆ ಉಪಯುಕ್ತವಾಗುತ್ತವೆ. ಈ ವೃಕ್ಷದ ಫಲ ದೇವರ ನೈವೇದ್ಯಕ್ಕೆ ಉಪಯುಕ್ತವಾಗಿದೆ. ಹೀಗೆ ಈ ವೃಕ್ಷ ವಿಷ್ಣುವಿಗೆ ಉಪಯುಕ್ತವಾದ ವೃಕ್ಷವಾಗಿದೆ. ಅಂತೆಯೇ ವೈಷ್ಣವಪ್ರವರವಾಗಿದೆ. ಹೀಗಾಗಿ ಈ ವೃಕ್ಷ ಶ್ರೇಷ್ಠವಾಗಿದೆ. ಎಂದು ಸ್ಕಂದಪುರಾಣ ಉವಾಚ.

ಇನ್ನು ತುಲಸಿಯ ವಿಚಾರ ಮಾಡಿದರೇ,

ಅಮೃತಪ್ರಾಪ್ತಿಗಾಗಿ ದೇವತೆಗಳು-ಅಸುರರು ಕ್ಷೀರಸಾಗರವನ್ನು ಮಥಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಸಾಕ್ಷಾತ್ ನಾರಾಯಣ ಧನ್ವಂತರಿರೂಪದಿಂದ ಸುಧಾಕಮಂಡಲುವನ್ನು ಧರಿಸಿ ಬಂದ. ದೇವತೆಗಳಿಗೆ ಅಮೃತವನ್ನು ಬಡಿಸುವ ಆನಂದ ಧನ್ವಂತರಿಯ ಕಣ್ಣುಗಳಲ್ಲಿ ಹರಿದಾಡಿತು. ಆ ಆನಂದ ಅಶ್ರುಗಳಾದವು. ಅಮೃತಕಲಶದಲ್ಲಿ ಉದುರಿದವು. ಆವಾಗಲೇ ಈ ತುಲಸಿಯು ಜನಿಸಿತು. ಸ್ವಯಂ ವಿಷ್ಣುವಿನಿಂದಲೇ ಜನಿಸಿದ ವೃಕ್ಷವಿದು. ಅದೂ ಅಮೃತದ ಕಲಶದಲ್ಲಿ. ಹೀಗೆ ಈ ವೃಕ್ಷ ಹುಟ್ಟಿನಿಂದಲೇ ವೈಷ್ಣವವಾಗಿದೆ.

ಅಲ್ಲದೇ, ಈ ವೃಕ್ಷದ ಮಂಜರೀ, ದಲ, ಎಲೆ, ನಿರ್ಮಾಲ್ಯ, ಕಾಷ್ಠ, ಮೃತ್ತಿಕಾ, ಕೊನೆಗೆ ತುಲಸೀ ಎಂಬ ನಾಮವೂ, ಒಂದೇನು... ! ತುಲಸಿಯಲ್ಲಿಯ ಎಲ್ಲವೂ ಶ್ರೀಹರಿಗೆ ಉಪಯುಕ್ತ. ತನ್ನಲ್ಲಿಯ ಎಲ್ಲವನ್ನೂ ಶ್ರೀಹರಿಗೆ ಸಮರ್ಪಿಸಿಕೊಂಡ ವೃಕ್ಷರಾಜವಿದು. ಹೀಗಾಗಿ ಇದು ವೈಷ್ಣವಶ್ರೇಷ್ಠವಾದ ವೃಕ್ಷ. ಆದ್ದರಿಂದಲೇ ತುಲನೆ ಇಲ್ಲದ್ದು ತುಲಸಿ ಎಂದು ದೇವಾಧಿದೇವತೆಗಳಿಂದ ಕೊಂಡಾಡಲ್ಪಟ್ಟಿದೆ. ಈ ವಿಷಯವನ್ನು ಯಾವಾಗಲೂ ಗಮನದಲ್ಲಿಟ್ಟುಕೊಳ್ಳಬೇಕು. ತುಲಸಿಯಲ್ಲಿಯ ಸರ್ವವೂ ಪಾವನವೆಂದು ನಿರೂಪಿಸುವ ವಚನವಿದು-

**ಪತ್ರಂ ಪುಷ್ಪಂ ಫಲಂ ಮೂಲಂ ಶಾಖಾ ತ್ವಕ್ ಸ್ಕಂಧಸಂಜ್ಞಿತಮ್ ।**
**ತುಲಸೀಸಂಭವಂ ಸರ್ವಂ ಪಾವನಂ ಮೃತ್ತಿಕಾದಿಕಮ್ ॥**

**ಶ್ರೀಹರಿ ಪಾದಸೇವಕಿ ಶ್ರೀತುಳಸಿ**

ತುಲಸಿಯು ನಿತ್ಯವೂ ಶ್ರೀಹರಿಯ ಪಾದಗಳಲ್ಲಿ ಆಸಕ್ತಳಾಗಿರುತ್ತಾಳೆ. ತನ್ನ ಸರ್ವಸ್ವವನ್ನೇ ದೇವರಿಗೆ ಸಮರ್ಪಿಸಿದ ಜೀವನ ತುಲಸಿಯದು. ತುಲಸಿಯ ಹಾಗೆ ನಾವಿರಬೇಕೆಂದು ಸನಕಾದಿಗಳು ಇಲ್ಲಿ ಪ್ರಾರ್ಥಿಸುತ್ತಿದ್ದಾರೆ. ತುಲಸಿಯ ಜೀವನ ಎಷ್ಟು ಪವಿತ್ರವಾಗಿದೆಯೋ ಇದರಿಂದ ಊಹಿಸಿಕೊಳ್ಳಬಹುದಾಗಿದೆ. ಸನಕಾದಿಗಳು ಹೇಳುವ ಮಾತಿದು. ಜಯವಿಜಯರಿಗೆ ಶಾಪ ನೀಡಿದ್ದು ಪಾಪವೆಂದು ಭಾವಿಸಿ ಆಡುತ್ತಿರುವ ಮಾತು ಇದು-

**ಕಾಮಂ ವ್ರಜೇಮ ವೃಜಿನೈರ್ನಿರಯೇಷು ನಷ್ಟಾ-**
**ಶ್ಚೇತೋಽಲಿವದ್ ಯದಿ ನು ತೇ ಪದಯೋ ರಮೇತ ।**

**ವಾಚಶ್ಚ ನಸ್ತುಲಸಿವದ್ ಯದಿ ತೇಽಂಘ್ರಿಶೋಭಾಃ**
**ಪೂರ್ಯೇತ ತೇ ಗುಣಗಣೈರ್ಯದಿ ಕರ್ಣರಂಧ್ರಃ ।।ಭಾಗ.೩.೧೬.೪೯।।**

ನಾವು ಮಾಡಿದ ಮಾಡುವ ಅಪರಾಧಗಳಿಗೆ ಲೆಕ್ಕವಿಲ್ಲ. ಆ ಅಪರಾಧಗಳಿಗೆ ತಕ್ಕುದಾದ ದುಃಖವನ್ನೂ ಅನುಭವಿಸಲು ನಾವು ಸಿದ್ಧರಾಗಿದ್ದೇವೆ. ನರಕಾದಿಗಳಲ್ಲಿಯೂ ನಾವು ವಾಸಮಾಡುತ್ತೇವೆ. ಆದರೆ, ನಮ್ಮ ಮನಸ್ಸು ಭ್ರಮರಗಳಂತೆ ನಿನ್ನ ಪಾದಕಮಲಗಳಲ್ಲಿಯೇ ಸಕ್ತವಾಗಬೇಕು. ನಮ್ಮ ಮಾತುಗಳು ನಿನ್ನಂಘ್ರಿಗಳಲ್ಲಿಯೇ ತುಲಸಿಯಂತೆ ಆಸಕ್ತವಾಗಬೇಕು. ನಿನ್ನ ಗುಣಗಣಗಳಿಂದ ನಮ್ಮ ಕಿವಿಯು ತುಂಬಬೇಕು. ಇದೊಂದಿದ್ದರೆ ಯಾವ ಲೋಕವಾದರೂ ಸರಿ. ಯಾವ ಯೋನಿಯಾದರೂ ಸರಿ. ನಮಗೆ ಅಂಜಿಕೆ ಇಲ್ಲ.

**ಜಗನ್ನಾಥದಾಸರ ನಿಲುವು**

**ಶ್ರೀತರುಣಿವಲ್ಲಭನ ಪ್ರೀತಿವಿಷಯಳೆ ನಿನ್ನ**
**ನಾ ತುತಿಸಿ ಕೈಯ ಮುಗಿವೆನು । ಮುಗಿವೆ ಎನ್ನಯ ಮಹಾ**
**ಪಾತಕವ ಕಳೆದು ಪೊರೆಯಮ್ಮ ।।೩೧।।**

ಪರಮಾತ್ಮ ತುಲಸಿಯನ್ನು ವಿವಾಹವಾಗಿದ್ದಾನೆ. ತುಲಸಿಯು ಪರಮಾತ್ಮನ ಪ್ರೀತಿಗೆ ಪಾತ್ರಳಾಗಿದ್ದಾಳೆ. ತುಲಸಿಯ ವಿವಾಹವಾಗುವುದಕ್ಕೆ ಕಾರಣವೇನು. ರಮಾದೇವಿಯು ದೇವರನ್ನು ಬಿಟ್ಟಳೇ? ದೇವರಿಗೇ ರಮೆಯಲ್ಲಿ ಬೇಸರವೇ? ಎಂದು ಅಜ್ಞರಿಗೆ ಸಂದೇಹ ಬರಬಹುದು. ಆದರೆ ಅದು ಅಜ್ಞಶಂಕೆಯೇ ಆಗಿದೆ. ಆ ಶಂಕೆಯಲ್ಲಿ ಹುರುಳಿಲ್ಲ ಎಂಬುದನ್ನು ದಾಸರಾಯರು ಈ ಪದ್ಯದಲ್ಲಿ ಸ್ವಾರಸ್ಯವಾಗಿ ತಿಳಿಸಿದ್ದಾರೆ.

ದೇವರ ಪ್ರೀತಿಗೆ ಪಾತ್ರಳು ಎಂದು ಹೇಳುವ ಪ್ರಸಂಗದಲ್ಲಿ **ಶ್ರೀತರುಣಿವಲ್ಲಭನ ಪ್ರೀತಿವಿಷಯಳೇ** ಎಂದು ತುಲಸಿಯನ್ನು ಸ್ತುತಿಸುತ್ತಾರೆ. ದೇವರನ್ನು ನಿತ್ಯವೂ ಆಶ್ರಯಿಸಿದ ನಿತ್ಯತರುಣಿಯಾದ ರಮಾದೇವಿಗೆ ಪ್ರಿಯನಾದ ಪರಮಾತ್ಮನ ಪ್ರೀತಿಯನ್ನು ಪಡೆದವಳು ಎಂದು ಅರ್ಥ.

ರಮಾದೇವಿಯು ಶ್ರೀ. ಅಂದರೆ ಎಂದೆಂದಿಗೂ ದೇವರನ್ನೇ ಆಶ್ರಯಿಸಿದವಳು. ಅನಾದ್ಯನಂತಕಾಲದ ಲಕ್ಷ್ಮೀನಾರಾಯಣರ ದಾಂಪತ್ಯದಲ್ಲಿ ಒಂದು ಕಣದ ಬಿರುಕು ಇಲ್ಲ. ಒಂದು ಕ್ಷಣದ ಬಿರುಸು ಇಲ್ಲ. ಎಂಬುದನ್ನು ತಿಳಿಯಲು ನಿಜವಾಗಿ ಸಂತೋಷಪಡಬೇಕು. ಹೀಗಾಗಿ ರಮೆಯು ದೇವರನ್ನು ಬಿಟ್ಟಿದ್ದಾಳೆ ಎಂಬ ಶಂಕೆಯೇ ಅಶಕ್ಯ. ವೃದ್ಧರಾದಮೇಲೆ ಎಲ್ಲರೂ ಎಲ್ಲರನ್ನೂ ಬಿಡಬೇಕಾಗುತ್ತದೆ. ಆ ಸಮಸ್ಯೆಯೂ

ರಮೆಗೆ ಇಲ್ಲ. ಅವಳು ನಿತ್ಯತರುಣಿ. ನಿತ್ಯತರುಣಿಯಾದ ರಮೆಯ ನಿತ್ಯವಲ್ಲಭನಾಗಿದ್ದಾನೆ ಪರಮಾತ್ಮ. ಹೀಗಾಗಿ ದೇವರು ರಮೆಯನ್ನು ಬಿಡುವ ಅವಕಾಶವೂ ಇಲ್ಲ.

ಆದರೆ ಇಲ್ಲಿ ತುಲಸಿಯ ಯೋಗ್ಯತೆಗೆ ಅನುಗುಣವಾಗಿ ಶ್ರೀಹರಿಯ ಸಂಗ ಅವಳಿಗಾಗಬೇಕು. ಆ ಸೌಭಾಗ್ಯವನ್ನು ತುಲಸಿಗೆ ದಯಪಾಲಿಸಿದವಳು ಲಕ್ಷ್ಮೀದೇವಿಯೇ. ರಮೆ ಇಲ್ಲದ ಯಾವ ಪದಾರ್ಥವನ್ನು ದೇವರು ಸ್ವೀಕರಿಸಲಾರ. ಹೀಗಾಗಿ ಸ್ವಯಂ ರಮಾದೇವಿಯೇ ತುಲಸಿಯಲ್ಲಿ ಸನ್ನಿಹಿತಳಾಗಿ ನಾಥನಾದ ಶ್ರೀಹರಿಗೆ ಪ್ರಿಯಳಾಗುವಂತೆ ಮಾಡಿದ್ದಾಳೆ. ಈ ತತ್ತ್ವವನ್ನು ಇಲ್ಲಿ ತಿಳಿಯಬೇಕು. ಈ ಭಾಗ್ಯ ಈ ಸೌಭಾಗ್ಯ ಸೌಭಾಗ್ಯದೇವತೆಯಾದ ರಮಾದೇವಿಯಿಂದಲೇ ತುಲಸಿಗೆ ಪ್ರಾಪ್ತವಾಗಿದೆ ಎಂಬುದನ್ನು ಮನಗಾಣಬೇಕು.

**ರಮಾದೇವಿಯರ ಸ್ಪರ್ಧೆಯ ಉತ್ಪ್ರೇಕ್ಷೆ**

ತುಲಸಿಗಿಂತಲೂ ರಮಾದೇವಿಯು ನಿಶ್ಚಿತವಾಗಿಯೂ ಅತ್ಯುತ್ತಮಳಾಗಿದ್ದಾಳೆ. ಈ ವಿಷಯದಲ್ಲಿ ಸರ್ವಥಾ ಸಂದೇಹವಿಲ್ಲ. ರಮಾದೇವಿಗೆ ಯಾರಿಂದಲೂ ಭಯವಿಲ್ಲ. ಯಾರೋ ಬಂದು ತನ್ನ ಸ್ಥಾನವನ್ನು ಕಬಳಿಸುತ್ತಾರೆ ಎಂಬ ಚಿಂತೆ ಅವಳಿಗೆ ಇಲ್ಲ. ಅವಳ ಸಾನ್ನಿಧ್ಯವಿದ್ದವರನ್ನು ಮಾತ್ರ ದೇವರು ಒಪ್ಪುತ್ತಾನೆ. ತುಲಸಿಯಲ್ಲಿ ರಮೆಯ ಸನ್ನಿಧಾನವಿದ್ದುದಕ್ಕಾಗಿಯೇ ಅವಳನ್ನು ಒಪ್ಪಿಕೊಂಡದ್ದು. ಇದು ಯಥಾರ್ಥ. ಏನೇ ಆದರೂ ತುಲಸಿಯನ್ನು ದೇವರು ಒಪ್ಪಿದ್ದಾನೆ. ದೇವರು ಒಪ್ಪಿದ ತುಲಸಿಯ ಮಹಿಮೆಯನ್ನು ಪ್ರಚಾರ ಮಾಡುವುದಕ್ಕಾಗಿ ಸ್ಪರ್ಧೆಯ ನಟನೆಯನ್ನು ರಮಾದೇವಿ ಮಾಡುತ್ತಾಳೆ. ಈ ಭಾಗವತದ ವಚನದಲ್ಲಿ ಅದು ಎಷ್ಟು ರಮಣೀಯವಾಗಿ ನಿರೂಪಿತವಾಗಿದೆ ಎಂಬುದನ್ನು ಆಸ್ವಾದಿಸಿ ನೋಡಿ-

**ಯಂ ವೈ ವಿಭೂತಿರುಪಯಾತ್ಯನುವೇಲಮನ್ಯೈ-**
**ರರ್ಥಾರ್ಥಿಭಿಃ ಸ್ವಶಿರಸಾ ಧೃತಪಾದರೇಣುಃ ।**
**ಧನ್ಯಾರ್ಪಿತಾಂಘ್ರಿತುಲಸೀನವದಾಮಧಾಮ್ನೋ**
**ಲೋಕಂ ಮಧುವ್ರತಪತೇರಿವ ಕಾಮಯಾನಾ ॥೩.೧೫. ೨೦ ॥**

ಬ್ರಹ್ಮಾದಿ-ಮಾನುಷಾಂತರೆಲ್ಲರೂ ರಮಾದೇವಿಯ ಪಾದರೇಣುವನ್ನು ಶಿರಸಾ ಧರಿಸುತ್ತಾರೆ. ಅವಳಿಗೆ ತನ್ನ ಹೃದಯದಲ್ಲಿಯೇ ದೇವರು ಸ್ಥಾನವನ್ನು ನೀಡಿದ್ದಾನೆ. ಯಾರೂ ಪಡೆಯಲಾಗದ ಸ್ಥಾನ-ಮಾನಗಳು ರಮೆಗೆ ಸ್ವಂತವಾಗಿವೆ. ದೇವರ ಪಾದಪದ್ಮಗಳು ತುಲಸಿಗೆ ಸ್ಥಾನವಾಗಿವೆ. ಭಗವದ್ಭಕ್ತರು ಅರ್ಪಿಸಿದ ತುಲಸೀಮಾಲೆ

ಪಾದದ್ವಂದ್ವಗಳಲ್ಲಿ ನಿರಂತರ ಪರಿಶೋಭಿಸುತ್ತಾ ಇರುತ್ತದೆ. ಆ ಸ್ಥಾನವೂ ಬಹಳ ದೊಡ್ಡದೇ ಆಗಿರಬೇಕು. ಆ ಪಾದದ್ವಂದ್ವಗಳು ನನ್ನದಾಗಬೇಕು. ಹೀಗೆ ಚಿಂತಿಸುತ್ತಾ ತುಲಸಿಯ ಜೊತೆ ಸ್ಪರ್ಧಿಸುವವಳಂತೆ ನಿತ್ಯವೂ ರಮಾದೇವಿಯು ದೇವರ ಪಾದಸೇವೆಯನ್ನು ಮಾಡಲು ಮುಂದಾಗಿರುತ್ತಾಳಂತೆ.

ಸ್ವಾಭಾವಿಕವಾಗಿಯೇ ರಮೆಯು ಶ್ರೀಹರಿಪಾದಸೇವಕಿಯಾಗಿದ್ದಾಳೆ. ಇಲ್ಲಿ ಹೀಗೆ ಉತ್ಪ್ರೇಕ್ಷೆ ಮಾಡಿದ್ದಾರೆ ಅಷ್ಟೇ. ಏನೇ ಇರಲಿ. ವಿಶಿಷ್ಟವಾದ ಸ್ಥಾನವನ್ನು ಪರಮಾತ್ಮ ತುಲಸಿಗೆ ಕೊಟ್ಟಿದ್ದನ್ನು ನೆನೆದಾಗ ತುಲಸಿಯ ಮಹಿಮೆಯು ವೇದ್ಯವಾಗುತ್ತದೆ.

ಈ ಪ್ರಸಂಗದಲ್ಲಿಯ ಯಾದವಾರ್ಯರ ವಚನಗಳು ಈ ರೀತಿಯಾಗಿವೆ. ಅವುಗಳನ್ನು ನೋಡಿ-

ಭಗವತಾ ಹಿ ತುಲಸ್ಯಾ ಅಂಘ್ರಿಯುಗಲಂ ಸ್ಥಾನಂ ದತ್ತಮ್ । ಅತ ಏವ ಭಕ್ತ್ಯೈಃ ಸಾ ತತ್ರೈವ ದಾಮಾದಿಸ್ವರೂಪಾ ಅರ್ಪ್ಯತೇ । ತುಲಸೀ ಚಾಽತೀವ ಭಗವತಃ ಪ್ರಿಯಾ ಪ್ರಸಿದ್ಧಾ । ತಸ್ಯ ಸಾರಗ್ರಾಹಿಪತಿತ್ವಾತ್ । ತುಲಸ್ಯಾಶ್ಚ ತಸ್ಯ ಗ್ರಾಹ್ಯಸಾರವತ್ತ್ವಾತ್ । ನ ಹಿ ತಸ್ಯಾ ಅನುತ್ತಮಂ ಸ್ಥಾನಂ ಭಗವಾನ್ ದಾಸ್ಯತಿ । ಅತೋಽಂಘ್ರಿಲಕ್ಷಣಂ ತುಲಸೀಸ್ಥಾನಂ ಮತ್ಸ್ಥಾನವದುತ್ತಮಮೇವ ಭವಿತುಮರ್ಹತೀತಿ ಜ್ಞಾತವ್ಯಮಿತಿ ।

**ತುಲಸಿಯಲ್ಲಿ ದೇವತೆಗಳ ಸನ್ನಿಧಾನ**

ತುಲಸಿ ಇದು ವೈಷ್ಣವ ವೃಕ್ಷ. ಅಂತೆಯೇ ಆ ವೃಕ್ಷವನ್ನು ದೇವತೆಗಳೆಲ್ಲ ಆಶ್ರಯಿಸಿಕೊಂಡಿದ್ದಾರೆ. ಆ ವೃಕ್ಷವನ್ನಾಶ್ರಯಿಸಿದ ಪ್ರಧಾನದೇವತೆಗಳನ್ನು ಅನೇಕ ಪುರಾಣಗಳು ಹೆಸರಿಸುತ್ತವೆ. ಅವುಗಳಲ್ಲಿ ಹಲವು ಹೆಸರುಗಳು ಹೀಗಿವೆ-

**ಯತ್ರೈಕಸ್ತುಲಸೀವೃಕ್ಷಃ ತಿಷ್ಠತಿ ದ್ವಿಜಸತ್ತಮ ।**
**ತತ್ರೈವ ತ್ರಿದಶಾಃ ಸರ್ವೇ ಬ್ರಹ್ಮವಿಷ್ಣುಶಿವಾದಯಃ ॥**

ಯಾವ ಪ್ರದೇಶದಲ್ಲಿ ಒಂದು ತುಲಸೀವೃಕ್ಷವು ಇರುತ್ತದೋ ಅಲ್ಲಿಯೇ ಬ್ರಹ್ಮ-ವಿಷ್ಣು-ರುದ್ರಾದಿದೇವತೆಗಳೆಲ್ಲರೂ ನೆಲೆಸಿರುತ್ತಾರೆ.

ಮೊದಲು ಈ ವೃಕ್ಷದ ಪ್ರಧಾನವಾದ ಅವಯವಗಳಲ್ಲಿ ತ್ರಿಮೂರ್ತಿಗಳು ನೆಲೆಸಿದ್ದಾರೆ ಎಂಬುದನ್ನು ಈ ವಚನ ತಿಳಿಸುತ್ತದೆ-

**ಕೇಶವಃ ಪತ್ರಮಧ್ಯೇಷು ಪತ್ರಾಗ್ರೇಷು ಪ್ರಜಾಪತಿಃ ।**
**ಪತ್ರವೃಂತೇ ಶಿವಸ್ತಿಷ್ಠೇತ್ ತುಲಸ್ಯಾಃ ಸರ್ವದೈವ ಹಿ ॥**

ತುಲಸೀ ಎಲೆಯ ಮಧ್ಯಭಾಗದಲ್ಲಿ ಬ್ರಹ್ಮ-ರುದ್ರರಿಗೆ ನಿಯಾಮಕನಾಗಿರುವ ಕೇಶವನು, ಪತ್ರದ ಮೇಲ್ಭಾಗದಲ್ಲಿ ಬ್ರಹ್ಮದೇವರು, ಪತ್ರದ ತೊಟ್ಟಿನಲ್ಲಿ ರುದ್ರದೇವರು ಯಾವಾಗಲೂ ಸನ್ನಿಹಿತರಾಗಿ ಇರುತ್ತಾರೆ.

**ಲಕ್ಷ್ಮೀಃ ಸರಸ್ವತೀ ಚೈವ ಗಾಯತ್ರೀ ಚಂಡಿಕಾ ತಥಾ ।**
**ಶಚೀ ಚಾಽನ್ಯಾ ದೇವಪತ್ನ್ಯಃ ತತ್ಪುಷ್ಪೇಷು ವಸಂತಿ ವೈ ॥**

ಲಕ್ಷ್ಮೀದೇವಿ, ಸರಸ್ವತೀದೇವಿ, ಗಾಯತ್ರೀದೇವಿ, ಉಮಾದೇವಿ, ಶಚೀದೇವಿ ಮತ್ತು ಉಳಿದ ದೇವತೆಗಳ ಪತ್ನಿಯರು ತುಲಸಿಯ ಪುಷ್ಪದಲ್ಲಿ ಸನ್ನಿಹಿತರಾಗಿ ಇರುತ್ತಾರೆ.

**ಇಂದ್ರೋಽಗ್ನಿಃ ಶಮನಶ್ಚೈವ ನೈರ್ಋತೋ ವರುಣಸ್ತಥಾ ।**
**ಪವನಶ್ಚ ಕುಬೇರಶ್ಚ ತಚ್ಛಾಖಾಯಾಂ ವಸಂತ್ಯಮೀ ॥**

ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಮತ್ತು ರುದ್ರ ಮೊದಲಾದ ದಿಗ್ದೇವತೆಗಳು ತುಲಸೀವೃಕ್ಷದ ಟೊಂಗೆಯಲ್ಲಿ ಸನ್ನಿಹಿತರಾಗಿ ಇರುತ್ತಾರೆ.

**ಆದಿತ್ಯಾದಿಗ್ರಹಾಃ ಸರ್ವೇ ವಿಶ್ವೇದೇವಾಶ್ಚ ಸರ್ವದಾ ।**
**ವಸವೋ ಮನವಶ್ಚೈವ ತಥಾ ದೇವರ್ಷಯೋಽಖಿಲಾಃ ॥**

**ವಿದ್ಯಾಧರಾಶ್ಚ ಗಂಧರ್ವಾಃ ಸಿದ್ಧಾಶ್ಚಾಪ್ಸರಸ್ತಥಾ ।**
**ತುಲಸೀಪತ್ರಮಾಶ್ರಿತ್ಯ ಸರ್ವದಾ ನಿವಸಂತಿ ವೈ ॥**

ಆದಿತ್ಯಾದಿಗ್ರಹದೇವತೆಗಳು, ವಿಶ್ವೇದೇವತೆಗಳು, ಅಷ್ಟವಸುಗಳು, ಚತುರ್ದಶಮನುಗಳು, ದೇವರ್ಷಿಗಳು, ವಿದ್ಯಾಧರರು, ಗಂಧರ್ವರು, ಸಿದ್ಧರು, ಅಪ್ಸರಾಸ್ತ್ರೀಯರು, ಇವರೆಲ್ಲರೂ ತುಲಸೀವೃಕ್ಷದ ಪತ್ರವನ್ನು ಆಶ್ರಯಿಸಿಕೊಂಡು ಯಾವಾಗಲೂ ಇರುತ್ತಾರೆ. ಹೀಗಾಗಿ ತುಲಸಿಯ ಸೇವೆಯಿಂದ ಗ್ರಹಗಳ ಪೀಡೆಯೂ ತೊಲಗುತ್ತದೆ.

**ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ ।**
**ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನಮಾಮ್ಯಹಮ್ ॥**

ತುಲಸೀವೃಕ್ಷದ ಮೂಲಭಾಗದಲ್ಲಿ ಎಲ್ಲ ತೀರ್ಥಗಳು, ಮಧ್ಯಭಾಗದಲ್ಲಿ ಸಕಲದೇವತೆಗಳು, ಮೇಲ್ಭಾಗದಲ್ಲಿ ಎಲ್ಲ ವೇದಗಳು ಸನ್ನಿಹಿತರಾಗಿರುತ್ತಾರೆ. ಇಂತಹ ತುಲಸಿಯನ್ನು ನಮಸ್ಕರಿಸುತ್ತೇನೆ.

ಸಾಮಾನ್ಯವಾಗಿ ಸಾಧನೆ ಮಾಡುವ ಮೊದಲ ಹಂತದಲ್ಲಿರುವವರಿಗೆ ಅನೇಕ ಸಮಸ್ಯೆಗಳು ಬರುತ್ತಲೇ ಇರುತ್ತವೆ. ಅಂಥವುಗಳಲ್ಲಿ ಇದೂ ಒಂದು ಸಮಸ್ಯೆ.

''ಪ್ರತಿನಿತ್ಯ ಎಲ್ಲ ದೇವತೆಗಳಿಗೆ ನಮಸ್ಕರಿಸಬೇಕು ಗಂಗಾದಿತೀರ್ಥಗಳಲ್ಲಿ ಮೀಯುತ್ತಿರಬೇಕು'' ಎಂದು ಹಿರಿಯರು ಹೇಳುತ್ತಾರೆ. ಆದರೇ ಆ ದೇವತೆಗಳ, ಆ ತೀರ್ಥಗಳ, ಆ ನದಿಗಳ ಹೆಸರನ್ನು ತಿಳಿಯುವುದೂ ನಮ್ಮಂಥವರಿಗೆ ಸಾಧ್ಯವಿಲ್ಲ. ಅವರಿಗೆಲ್ಲ ನಮಸ್ಕರಿಸುವುದು ಆಯಾ ತೀರ್ಥಗಳಲ್ಲಿ ಮೀಯುವುದು ಹೇಗೆ ತಾನೇ ಸಾಧ್ಯವಾದೀತು. ಅದು ಸಾಧ್ಯವಾಗುವುದಿಲ್ಲವೆಂದಾದರೇ ಮುಂದೆ ಏನು ಗತಿ ? ಹೇಗೆ ಇದನ್ನು ಪೂರ್ಣಮಾಡಿಕೊಳ್ಳಬೇಕು ?

ಇದು ಸರಿಯಾದ ಸಮಸ್ಯೆಯೇ... ಇದಕ್ಕೆ ಪರಿಹಾರ ಹೀಗಿದೆ.

ಈಗಾಗಲೇ ತಿಳಿದಂತೆ ತುಲಸಿಯಲ್ಲಿ ಎಲ್ಲ ದೇವತೆಗಳು, ಎಲ್ಲ ತೀರ್ಥಗಳು ಸನ್ನಿಹಿತರಾಗಿದ್ದಾರೆ. ಇಂತಹ ತುಲಸಿಗೆ ಪ್ರತಿನಿತ್ಯ ಪ್ರಾತಃಕಾಲದಲ್ಲಿ ಎರಗುವುದರಿಂದ ದೇವತೆಗಳಿಗೆಲ್ಲ ನಮಸ್ಕರಿಸಿದಂತೆ ಆಗುತ್ತದೆ. ತುಲಸೀಮೃತ್ತಿಕಾಜಲವನ್ನು ಪ್ರೋಕ್ಷಣೆಮಾಡಿಕೊಳ್ಳುವುದರಿಂದ ತೀರ್ಥಗಳ ಸ್ನಾನಮಾಡಿದಂತೆ ಆಗುತ್ತದೆ. ಆದ್ದರಿಂದ ಭಾವಶುದ್ಧರಾಗಿ ತುಲಸಿಯನ್ನು ಸೇವಿಸಬೇಕು.

**ತುಲಸೀಮೃತ್ತಿಕಾಸ್ನಾನ**

ಉತ್ಸರ್ಜನ ಮುಂತಾದ ಪ್ರಸಂಗಗಳಲ್ಲಿ ದಶವಿಧಸ್ನಾನವನ್ನು ಹೇಳಿದ್ದಾರೆ. ಆದರೆ ಪ್ರತಿನಿತ್ಯವೂ ತುಲಸೀಮೃತ್ತಿಕೆಯಿಂದ ಸ್ನಾನವನ್ನು ಮಾಡಬೇಕೆಂದು ಪದ್ಮಪುರಾಣದ ಈ ವಚನವು ತಿಳಿಸುತ್ತದೆ-

**ತನ್ಮೂಲಮೃತ್ತಿಕಾಂ ಚಾಂಗೇ ಕೃತ್ವಾ ಸ್ನಾತಿ ದಿನೇ ದಿನೇ ।**
**ದಶಾಶ್ವಮೇಧಾವಭೃತಸ್ನಾನಜಂ ಲಭತೇ ಫಲಮ್ ॥**

ಮೃತ್ತಿಕೆಯನ್ನು ಪ್ರಾತಃಕಾಲದಲ್ಲಿ ಊರ್ಧ್ವಪುಂಡ್ರಕ್ಕಾಗಿ ಉಪಯೋಗಿಸಬೇಕು. ಇದಲ್ಲದೇ ತುಲಸೀ ಇಲ್ಲದಿರುವಾಗ ಮೃತ್ತಿಕೆಯನ್ನು ದೇವರ ಅರ್ಚನೆಗಾಗಿ ಉಪಯೋಗಿಸಬೇಕು. ಇದಲ್ಲದೇ ಪ್ರತಿನಿತ್ಯ ಸ್ನಾನ ಮಾಡುವಾಗ ತುಲಸೀ ಮೃತ್ತಿಕೆಯನ್ನು ತನ್ನ ಅಂಗಾಂಗಗಳಲ್ಲಿ ಧರಿಸಿಕೊಂಡು ಸ್ನಾನಮಾಡಬೇಕು. ಹೀಗೆ ಮಾಡುವುದರಿಂದ ಹತ್ತು ಅಶ್ವಮೇಧಗಳ ಅವಭೃತಸ್ನಾನದಿಂದ ಬರುವ ಪುಣ್ಯವು ಒದಗಿಬರುತ್ತದೆ. ವಿಶಿಷ್ಟವಾದ ಪುಣ್ಯವು ಸಿದ್ಧಿಸಬೇಕಾದರೆ ಶ್ರದ್ಧೆಯೂ ವಿಶಿಷ್ಟವಾಗಿರಬೇಕು. ಈ ವಿಷಯದಲ್ಲಿ ಸಾಧಕರು ಎಚ್ಚರದಿಂದ ಇರಬೇಕು.

**ತುಲಸೀವಾರಿ ಗಂಗೆಗೆ ಸರಿ**

**ತುಲಸೀದಲಸಮ್ಮಿಶ್ರಂ ತೋಯಂ ಗಂಗಾಸಮಂ ವಿದುಃ ।**
**ಯೋ ವಹೇಚ್ಛಿರಸಾ ನಿತ್ಯಂ ಧೃತಾ ಭವತಿ ಜಾಹ್ನವೀ ॥**

ತುಲಸೀದಲದಿಂದ ಯುಕ್ತವಾಗಿರುವ ನೀರು ಗಂಗೆಗೆ ಸಮಾನವಾಗಿರುತ್ತದೆ. ಹೀಗೆಂದು ಜ್ಞಾನಿಗಳು ತಿಳಿದಿದ್ದಾರೆ. ಯಾರು ತುಲಸೀದಲದಲ್ಲಿಯ ಜಲವನ್ನು ಶಿರಸಾ ಧರಿಸುತ್ತಾರೆಯೋ ಅವರು ಗಂಗೆಯನ್ನೇ ಧರಿಸಿದವರಾಗುತ್ತಾರೆ. ಗಂಗಾಧಾರಣೆಯಿಂದ ಬರುವ ಪುಣ್ಯ ತುಲಸೀಜಲದ ಧಾರಣೆಯಿಂದ ಬರುತ್ತದೆ.

**ಸಕಲತೀರ್ಥಸ್ನಾನಫಲ**

ಈ ಕಾಲದಲ್ಲಿ ತೀರ್ಥಗಳೆಲ್ಲ ಕಾಣೆಯಾಗುತ್ತಿವೆ. ತೀರ್ಥಸ್ನಾನಗಳು ಅಸಾಧ್ಯವಾಗುತ್ತಿವೆ. ಸಕಲತೀರ್ಥಸ್ನಾನವಂತೂ ಅಸಾಧ್ಯವೇ ಸರಿ. ಸಕಲತೀರ್ಥಗಳ ಫಲವನ್ನು ನಮಗೆ ದೊರಕಿಸಿಕೊಡುವ ಉಪಾಯವನ್ನು ಪದ್ಮಪುರಾಣವು ಈ ರೀತಿಯಾಗಿ ತಿಳಿಸುತ್ತದೆ-

**ತುಲಸೀದಲಸಮ್ಮಿಶ್ರಂ ಯಸ್ತೋಯಂ ಶಿರಸಾ ವಹೇತ್ ।**
**ಸರ್ವತೀರ್ಥಾಭಿಷೇಕಸ್ತು ತೇನ ಪ್ರಾಪ್ತೋ ನ ಸಂಶಯಃ ॥**

ತುಲಸೀದಲದಲ್ಲಿಯ ಜಲವನ್ನು ಶಿರಸಾ ಧರಿಸಬೇಕು. ಸಕಲತೀರ್ಥಗಳಲ್ಲಿ ಸ್ನಾನಮಾಡಿದ ಫಲ ಅವನಿಗೆ ದೊರೆಯುತ್ತದೆ. ಕೇವಲ ಜಲಕ್ಕೆ ಈ ರೀತಿಯಾದ ಮಹಿಮೆ ಇರುವುದಿಲ್ಲ. ಕಿಂತು ಅದೇ ಜಲ ತುಲಸೀಲಗ್ನವಾದಾಗ ಅದ್ಭುತವಾದ ಈ ಮಹಿಮೆಯು ಪ್ರಾಪ್ತವಾಗುತ್ತದೆ. ಇದು ತುಲಸಿಯ ಮಹಿಮೆಯೇ ಸರಿ.

**ಅರ್ಧೋದಯೇ ಮಾಘಮಾಸೇ ಸ್ನಾಯಾತ್ತನ್ಮೂಲಪಾಂಸುಭಿಃ ।**
**ಕುಲತ್ರಯಂ ಸಮುದ್ಧಾರ್ಯ ವಿಷ್ಣುಲೋಕೇ ಮಹೀಯತೇ ॥**

ಮಾಘಮಾಸದಲ್ಲಿ ಅರ್ಧೋದಯಯೋಗವು ಪ್ರಾಪ್ತವಾದಾಗ ತುಲಸೀ ಮೃತ್ತಿಕೆಯಿಂದ ಸ್ನಾನಮಾಡಬೇಕು. ಇದರಿಂದ ಕುಲತ್ರಯದ ಉದ್ಧಾರವಾಗುತ್ತದೆ. ವೈಷ್ಣವನಾಗಿ ಮತ್ತೆ ಮತ್ತೆ ಜನಿಸಿ ಸಾಧನೆಯನ್ನು ಮಾಡಿಕೊಳ್ಳುತ್ತಾನೆ. ಕೊನೆಗೆ ವಿಷ್ಣುಲೋಕದಲ್ಲಿ ಯಾವಾಗಲೂ ಸುಖಿಸುತ್ತಾ ಇರುತ್ತಾನೆ.

ಪೌಷ ಅಥವಾ ಮಾಘಮಾಸ ಅಮಾವಾಸ್ಯಾ, ರವಿವಾರ, ಶ್ರವಣನಕ್ಷತ್ರ, ವ್ಯತೀಪಾತಯೋಗ ಇವುಗಳ ಸಮ್ಮಿಲನವೇ ಅರ್ಧೋದಯವೆನಿಸುತ್ತದೆ. ಈ

ಯೋಗವು ಅತಿ ಅಪರೂಪವಾದದ್ದು. ಕೋಟಿಸೂರ್ಯಗ್ರಹಗಳಿಗೆ ಸಮಾನವಾದ ಪರಮಪುಣ್ಯಕರವಾದ ಯೋಗವಿದು.

ನಿರ್ಣಯಸಿಂಧುವಿನಲ್ಲಿ ಉದಾಹೃತವಾದ ಮಹಾಭಾರತದ ವಚನವಿದು-

**ಅಮಾರ್ಕಪಾತಶ್ರವಣೈರ್ಯುಕ್ತಾ ಚೇತ್ಪೌಷಮಾಘಯೋಃ ।**
**ಅರ್ಧೋದಯಃ ಸ ವಿಜ್ಞೇಯಃ ಕೋಟಿಸೂರ್ಯಗ್ರಹೈಃ ಸಮಃ ॥**

**ಮೃತ್ತಿಕೆಯು ಮನೆಯಲ್ಲಿರಬೇಕು**

**ಯಸ್ಮಿನ್ ಗೃಹೇ ದ್ವಿಜಶ್ರೇಷ್ಠ ತುಲಸೀತಲಮೃತ್ತಿಕಾ ।**
**ತತ್ರೈವ ನೋಪಸರ್ಪಂತಿ ಭೂತಲೇ ಯಮಕಿಂಕರಾ : ॥**

ತುಲಸೀವೃಕ್ಷದ ಬುಡದಲ್ಲಿರುವ ಮೃತ್ತಿಕೆ ಶ್ರೇಷ್ಠವಾಗಿದೆ. ಇದನ್ನು ಮನೆಯಲ್ಲಿ ಇಟ್ಟುಕೊಳ್ಳಬೇಕು. ಇಂತಹ ಮನೆಯನ್ನು ಯಮನ ಕಿಂಕರರು ಪ್ರವೇಶಿಸುವುದಿಲ್ಲ.

**ಧಾತ್ರೀಫಲಂ ಚ ತುಲಸೀ ಮೃತ್ತಿಕಾ ದ್ವಾರಕೋದ್ಭವಾ ।**
**ಸಫಲಂ ಜೀವಿತಂ ತಸ್ಯ ತ್ರಿತಯಂ ತಸ್ಯ ವೇಶ್ಮನಿ ॥ಸ್ಕಾಂದೇ ॥**

ಮನೆಯಲ್ಲಿ ಏನಿದ್ದರೂ ಇಲ್ಲದಿದ್ದರೂ ಈ ಮೂರು ಮಾತ್ರ ಇರಬೇಕು. ಧಾತ್ರೀಫಲ, ತುಲಸೀ ಮತ್ತು ಗೋಪೀಚಂದನ. ಈ ಮೂರು ಯಾರ ಮನೆಯಲ್ಲಿವೆಯೋ ಅವನ ಜೀವನ ಸಫಲವಾಗುತ್ತದೆ.

**ತುಲಸೀಮೃತ್ತಿಕಾಲಿಪ್ತೋ ಯದಿ ಪ್ರಾಣಾನ್ ಪರಿತ್ಯಜೇತ್ ।**
**ಯಮೇನ ನೇಕ್ಷಿತುಂ ಶಕ್ಯೋ ಯುಕ್ತಃ ಪಾಪಶತೈರಪಿ ॥**

ಮರಣಕಾಲದಲ್ಲಿ ತುಲಸೀಮೃತ್ತಿಕೆಯನ್ನು ಧರಿಸಬೇಕು. ಹೀಗೆ ಧರಿಸಿ ಯಾವನು ಮೃತನಾಗುತ್ತಾನೋ ಅವನನ್ನು ಯಮನು ಕ್ರೂರದೃಷ್ಟಿಯಿಂದ ನೋಡುವುದಿಲ್ಲ. ಅನೇಕಪಾಪಗಳನ್ನು ಮಾಡಿದ ಮನುಷ್ಯನಿಗೆ ಇದು ಕೊನೆಯ ಕಾಲದಲ್ಲಿ ಆಚರಿಸಬೇಕಾದ ಪ್ರಾಯಶ್ಚಿತ್ತವಾಗಿದೆ.

**ಕಲಿನಿವಾರಕ**

**ತುಲಸೀಮೃತ್ತಿಕಾಲಿಪ್ತಂ ಲಲಾಟಂ ಯಸ್ಯ ದೃಶ್ಯತೇ ।**
**ಕುಲಂ ಸ್ಪೃಶತಿ ನೋ ತಸ್ಯ ಕಲಿರ್ಮುನಿವರೋತ್ತಮ ॥**

ಪ್ರಾತಃಕಾಲದಲ್ಲಿ ಸ್ನಾನಮಾಡುವುದಕ್ಕಿಂತಲೂ ಪೂರ್ವದಲ್ಲಿ ತುಲಸೀಮೃತ್ತಿಕೆಯನ್ನು ಲಲಾಟದಲ್ಲಿ ಧರಿಸಬೇಕು. ಇದನ್ನು ನಿಯಮವಾಗಿ ಪಾಲಿಸುತ್ತಿರುವವರ ಮನೆಯಲ್ಲಿ ಕಲಿಯ ಪ್ರವೇಶವಾಗುವುದಿಲ್ಲ.

ಸಾಮಾನ್ಯವಾಗಿ ಮೈಲಿಗೆ ಏನಾದರೂ ಆಗಿದೆ ಎಂದು ಅನಿಸಿದಾಗ ತುಲಸೀಮೃತ್ತಿಕಾಜಲವನ್ನು ಪ್ರೋಕ್ಷಣೆ ಮಾಡಿಕೊಳ್ಳುವ ರೂಢಿ ಈಗಲೂ ಇದೆ. ಇದರಿಂದಲೇ ಇದರ ಮಹತ್ತ್ವವೇನು ಎಂದು ನಮಗೆ ತಿಳಿದು ಬರುತ್ತದೆ.

ಅಂದಹಾಗೆ, ಪ್ರಧಾನರಾದ ದೇವತೆಗಳಿಗೆ ಪ್ರತ್ಯೇಕವಾಗಿ ನಮಸ್ಕಾರಗಳನ್ನು ಸಲ್ಲಿಸಲು ಮರಿಯಬಾರದು.

ಆಕಳಿಗೆ ನಮಸ್ಕರಿಸುವುದು, ಜ್ಞಾನಿಗಳಿಗೆ ನಮಸ್ಕರಿಸುವುದು ಕೂಡಾ ದೇವತೆಗಳಿಗೆ ಮಾಡಿದ ಸನ್ಮಾನವೇ ಆಗುತ್ತದೆಂದು ಎಂದಿಗೂ ಮರೆಯಬಾರದು.

ತುಲಸಿ ಇದ್ದಲ್ಲಿ ದೇವರು ಸನ್ನಿಹಿತನಾಗಿರುತ್ತಾನೆಂದು ತಿಳಿಸುವ ಮತ್ತೊಂದು ಮಹತ್ತ್ವದ ಮಾತು ಇದಾಗಿದೆ-

**ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ ।**
**ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ॥**

ತುಲಸೀವೃಕ್ಷದ ವನ ಎಲ್ಲಿರುತ್ತದೋ, ಎಲ್ಲಿ ಪದ್ಮವನವಿರುತ್ತದೋ ವೈಷ್ಣವರು ಎಲ್ಲಿ ವಾಸಮಾಡಿರುತ್ತಾರೊ, ಅಲ್ಲಿಯೇ ಪಾಪಪರಿಹಾರಕನಾದ ಪರಮಾತ್ಮ ಸನ್ನಿಹಿತನಾಗಿರುತ್ತಾನೆ. ಆದ್ದರಿಂದ ಪ್ರತಿಯೊಬ್ಬರ ಮನೆಯಲ್ಲಿಯೂ ತುಲಸೀ-ವನವಿರಬೇಕು. ಒಂದಾದರೂ ತುಲಸೀವೃಕ್ಷ ಮನೆಯಲ್ಲಿರಬೇಕು.

**ಗಂಗಾದಿತೀರ್ಥಗಳೂ ಅಲ್ಲಿಯೇ**

ದೇವತೆಗಳು ಮಾತ್ರವಲ್ಲ. ಗಂಗಾದಿನದಿಗಳು ಕೂಡಾ ತುಲಸಿಯ ವನದಲ್ಲಿ ಸನ್ನಿಹಿತವಾಗಿರುತ್ತವೆ ಎಂದು ಈ ಮಾತು ನೇರವಾಗಿಯೇ ತಿಳಿಸುತ್ತದೆ-

**ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।**
**ವಾಸುದೇವಾದಯೋ ದೇವಾಃ ವಸಂತಿ ತುಲಸೀವನೇ (ತುಲಸೀದಲೇ) ॥**

ಪುಷ್ಕರ ಮೊದಲಾದ ತೀರ್ಥಗಳು, ಗಂಗಾದಿನದಿಗಳು, ವಾಸುದೇವಾದಿ ದೇವತೆಗಳು ತುಲಸೀವನದಲ್ಲಿ ಮತ್ತು ತುಲಸೀದಲದಲ್ಲಿ ಸನ್ನಿಹಿತರಾಗಿ ಇರುತ್ತಾರೆ.

ಹೀಗಾಗಿ ತುಲಸಿಯನ್ನು ಮನೆಯಲ್ಲಿ ಬೆಳಿಸುವುದರಿಂದ ಆ ಎಲ್ಲ ಪುಣ್ಯಪ್ರದವಾದ ನದಿಗಳ, ದೇವತೆಗಳ, ತೀರ್ಥಗಳ ಸನ್ನಿಧಾನ ತನ್ನ ಮನೆಯಲ್ಲಿಯೇ ಪ್ರಾಪ್ತವಾಗುತ್ತದೆ. ಮತ್ತು ತುಲಸಿಯ ಸನ್ನಿಧಾನದಲ್ಲಿ ಮಾಡಿದ ದೇವರಪೂಜೆ, ಜಪ, ಯಜ್ಞ-ಯಾಗ, ಶ್ರಾದ್ಧ ಮೊದಲಾದ ಕರ್ಮಗಳೆಲ್ಲ ಸಾಂಗವಾಗುತ್ತವೆ ಎಂದು

ಭಾವಿಸಬೇಕು. ತುಲಸಿಯನ್ನು ಗೌರವಿಸುವುದರಿಂದ ಈ ಎಲ್ಲರಿಗೂ ಗೌರವವನ್ನು ಮಾಡಿದಂತೆ ಆಗುತ್ತದೆ ಎಂದು ಭಾವಿಸಬೇಕು.

ತುಲಸೀದಲದಲ್ಲಿ ತೀರ್ಥಗಳೆಲ್ಲ ಸನ್ನಿಹಿತವಾಗಿರುವುದರಿಂದ ತುಲಸೀದಲದಿಂದ ಪ್ರೋಕ್ಷಣೆ ಮಾಡಿಕೊಂಡರೇ ಪುಷ್ಕರ-ಗಂಗಾದಿತೀರ್ಥಗಳ ಸ್ನಾನ ಅನಾಯಾಸವಾಗಿ ಸಂಪನ್ನವಾಗುತ್ತದೆ. ಆದ್ದರಿಂದ ಈ ನಿಯಮವನ್ನು ರೂಢಿಯಲ್ಲಿ ತಂದುಕೊಳ್ಳಬೇಕು.

ಒಂದು ಮಾತಿನಲ್ಲಿ ತಿಳಿಯುವುದಾದರೇ ತುಲಸಿಗೆ ಮಾಡುವ ಆವುದೇ ಉಪಚಾರವಿರಲಿ ಅದು ಸಾಮೂಹಿಕವಾಗಿ ಎಲ್ಲರಿಗೂ ಮಾಡಿದಂತೆ ಆಗುತ್ತದೆ.

**ಮನೆಯಲ್ಲಿಯೇ ತುಲಸೀವನ**

**ತುಲಸೀಕಾನನಂ ಚೈವ ಗೃಹೇ ಯಸ್ಯಾಽವತಿಷ್ಠತೇ ।**
**ತದ್‌ಗೃಹಂ ತೀರ್ಥಭೂತಂ ಹಿ ನಾಽಯಾಂತಿ ಯಮಕಿಂಕರಾಃ ॥**

ತುಲಸಿಯ ವನ ಯಾರ ಮನೆಯಲ್ಲಿರುತ್ತದೋ ಆ ಮನೆ ತೀರ್ಥಕ್ಕೆ ಸಮಾನವಾಗಿದೆ. ಅಂತಹ ಮನೆಗೆ ಯಮನ ಕಿಂಕರರು ಪೀಡಿಸಲು ಬರುವುದಿಲ್ಲ.

**ತುಲಸೀದ್ರುಮರೂಪಸ್ತು ಭಗವಾನ್ ಪುರುಷೋತ್ತಮಃ ।**
**ಸರ್ವಲೋಕಪರಿತ್ರಾತಾ ವಿಶ್ವಾತ್ಮಾ ವಿಶ್ವಪಾಲಕಃ ॥**

ಸಮಸ್ತವಿಶ್ವಕ್ಕೆ ಸ್ವಾಮಿಯಾಗಿದ್ದಾನೆ ಪರಮಾತ್ಮ. ಸಮಸ್ತವಿಶ್ವವನ್ನು ಪಾಲಿಸುತ್ತಾನೆ. ಪುರುಷೋತ್ತಮನಾದ ಪರಮಾತ್ಮನೇ ತುಲಸೀವೃಕ್ಷದ ರೂಪದಲ್ಲಿ ಇರುತ್ತಾನೆ. ಆ ತುಲಸೀವೃಕ್ಷದಲ್ಲಿ ಸೇವಿತನಾಗಿಯೇ ಪರಮಾತ್ಮ ಸರ್ವಲೋಕವನ್ನು ಸಂರಕ್ಷಿಸುತ್ತಾನೆ. ಆದ್ದರಿಂದ ಪುರುಷರು, ಸ್ತ್ರೀಯರು, ವೃದ್ಧರು, ಬಾಲಕರು, ಬಾಲಕಿಯರು ಎಲ್ಲರೂ ತುಲಸಿಯ ಪೂಜೆಯನ್ನು ಮಾಡಬೇಕು.

**ದರ್ಶನಂ ನರ್ಮದಾಯಾಸ್ತು ಗಂಗಾಸ್ನಾನಂ ತಥೈವ ಚ ।**
**ತುಲಸೀವನಸಂಸರ್ಗಃ ಸಮಮೇತತ್ ತ್ರಯಂ ಸ್ಮೃತಮ್ ॥**

ನರ್ಮದಾನದಿಯ ದರ್ಶನದಿಂದ ಬರುವ ಪುಣ್ಯ, ಗಂಗಾಸ್ನಾನದಿಂದ ಪ್ರಾಪ್ತವಾಗುವ ಸುಕೃತ ಮತ್ತು ತುಲಸೀವನದ ಸಂಸರ್ಗದಿಂದ ಲಭ್ಯವಾಗುವ ಪುಣ್ಯ ಇದೆಲ್ಲವೂ ಸಮಾನವಾಗಿರುತ್ತದೆ.

## ತುಲಸೀರೋಪಣಮ್

**ನಾರದ ಉವಾಚ**

**ರೋಪ್ಯತೇ ಯೇನ ವಿಧಿನಾ ತುಲಸೀ ಪೂಜ್ಯತೇ ಸದಾ ।**
**ತಮಾಚಕ್ಷ್ವ ಮಹಾದೇವ ಮದನುಗ್ರಹಕಾರಣಾತ್ ॥**

ತುಲಸಿಯ ರೋಪಣಕ್ಕೆ ಯಾವುದಾದರೂ ವಿಧಾನವಿದ್ದರೆ ಆ ವಿಧಾನವನ್ನು ನನಗೆ ತಿಳಿಸಬೇಕು. ನನ್ನಲ್ಲಿ ನಿಮಗೆ ವಿಶಿಷ್ಟವಾದ ಅನುಗ್ರಹ. ಆದ್ದರಿಂದ ಆ ವಿಧಿ -ವಿಧಾನಗಳನ್ನು ನನಗೆ ತಿಳಿಸಬೇಕೆಂದು ನಾರದರು ರುದ್ರದೇವರಿಗೆ ಕೇಳುತ್ತಾರೆ.

**ಶ್ರೀಮಹಾದೇವಃ**

**ಶುಭೇ ಪಕ್ಷೇ ಶುಭೇ ವಾರೇ ಶುಭೇ ಋಕ್ಷೇ ಶುಭೋದಯೇ ।**
**ಕೇಶವಾರ್ಥೇ ಶುಭಾಂಶೇ ಚ ರೋಪಯೇತ್ತುಲಸೀಂ ಮುನೇ ॥**

**ಗೃಹಸ್ಯಾಂಗಣಮಧ್ಯೇ ವಾ ಗೃಹಸ್ಯೋಪವನೇಽಪಿ ವಾ ।**
**ಶುಚೌ ದೇಶೇ ಚ ತುಲಸೀಮರ್ಚಯೇತ್ ಬುದ್ಧಿಮಾನ್ನರಃ ।**
**ಮೂಲೇ ಚ ವೇದಿಕಾಂ ಕುರ್ಯಾದಾಲವಾಲಸಮನ್ವಿತಾಮ್ ॥**

ನಾರದರಿಗೆ ಉತ್ತರಿಸುತ್ತಾ ರುದ್ರದೇವರು ಹೇಳುತ್ತಾರೆ. ಕಂಡ ಕಂಡ ದಿನಗಳಲ್ಲಿ ತುಲಸಿಯ ರೋಪಣವನ್ನು ಮಾಡಬಾರದು. ಅದಕ್ಕೆ ಪಂಚಾಂಗಶುದ್ಧಿಯೂ ಅವಶ್ಯಕ. ಶುಭಪಕ್ಷದಲ್ಲಿ, ಶುಭವಾರದಲ್ಲಿ, ಶುಭನಕ್ಷತ್ರದಲ್ಲಿ ಶುಭೋದಯದಲ್ಲಿಯೇ ತುಲಸಿಯ ರೋಪಣವನ್ನು ಮಾಡಬೇಕು.

ತುಲಸಿಯ ರೋಪಣಕ್ಕೆ ಅಂಶವೂ ಶುಭವಾಗಿರಬೇಕು. ಇವುಗಳನ್ನೆಲ್ಲ ಗಮನದಲ್ಲಿಟ್ಟುಕೊಂಡು ದೇವರ ಪೂಜೆಗಾಗಿ ತುಲಸೀರೋಪಣವನ್ನು ಮಾಡಬೇಕು. ಮನೆಯ ಅಂಗಳದಲ್ಲಿ, ಮನೆಯ ಉಪವನದಲ್ಲಿ ಅಥವಾ ಪರಿಶುದ್ಧವಾದ ಪ್ರದೇಶದಲ್ಲಿ ತುಲಸಿಯನ್ನು ಬೆಳೆಸಬೇಕು. ಒಟ್ಟಾರೆ ತುಲಸಿಯನ್ನು ಅರ್ಚಿಸಲು ಅನುಕೂಲಕರವಾದ ಪ್ರದೇಶದಲ್ಲಿ ಬೆಳೆಸಬೇಕು. ಮೂಲದಲ್ಲಿ ವೇದಿಕೆಯನ್ನು ನಿರ್ಮಿಸಬೇಕು. ನೀರು ತುಂಬಲು ಕಟ್ಟೆಯನ್ನು ಕಟ್ಟಬೇಕು.

**ತುಲಸೀರೋಪಣಫಲ**

ವಿಹಿತವಾದ ವೃಕ್ಷಗಳನ್ನು ಬೆಳೆಸುವುದು ಅತಿ ಪುಣ್ಯಪ್ರದವಾದ ಕಾರ್ಯವೆಂದು ಪುರಾಣಗಳು ತಿಳಿಸುತ್ತವೆ. 'ದಶಪುತ್ರಸಮೋ ವೃಕ್ಷಃ' 'ಹತ್ತು ಮಕ್ಕಳಿಗೆ ಸಮವಾದುದು ಒಂದು ವೃಕ್ಷ' ಎಂಬ ವಚನವಂತೂ ವೃಕ್ಷಾರೋಪಣದ ಮಹತ್ತ್ವವನ್ನು ಬಹಳ

ಸ್ಪಷ್ಟವಾಗಿ ತಿಳಿಸುತ್ತದೆ. ಎಲ್ಲ ವೃಕ್ಷಗಳಿಗಿಂತಲೂ ಅಧಿಕವಾದ ತುಲಸಿಯನ್ನು ಬೆಳೆಸುವುದು ಅತಿವಿಶಿಷ್ಟವಾದ ಪುಣ್ಯದ ಕಾರ್ಯ. ಹೀಗಾಗಿ ತುಲಸಿಯನ್ನು ಶ್ರದ್ಧೆಯಿಂದ ಬೆಳೆಸಬೇಕು. ಉದ್ದೇಶಪೂರ್ವಕವಾಗಿ, ಪ್ರಯತ್ನಪೂರ್ವಕವಾಗಿ ತುಲಸಿಯನ್ನು ಮನೆಯಲ್ಲಿ ಬೆಳೆಸಬೇಕು. ಇದರಿಂದ ಪ್ರಾಪ್ತವಾಗುವ ಪುಣ್ಯವನ್ನು ಪುರಾಣಗಳು ಈ ರೀತಿಯಾಗಿ ಸಾರುತ್ತವೆ-

**ರೋಪಿತಾ ತುಲಸೀ ಯಾವತ್ಕುರುತೇ ಮೂಲವಿಸ್ತೃತಿಮ್ ।**
**ತಾವದ್ಯುಗಸಹಸ್ರಾಣಿ ತನೋತಿ ಸುಕೃತಂ ಹರಿಃ ॥**

**ರೋಪಿತಾ ತುಲಸೀ ಯಾವದ್ವರ್ಧತೇ ವಸುಧಾತಲೇ ।**
**ತಾವತ್ಕಲ್ಪಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ।**

ತುಲಸಿಯನ್ನು ಬೆಳೆಸಬೇಕು. ಇದು ಪುಣ್ಯಪ್ರದವಾದ ಕಾರ್ಯ. ರೋಪಿತವಾದ ಆ ವೃಕ್ಷವು ತನ್ನ ಬೇರನ್ನು ಎಷ್ಟು ವಿಸ್ತಾರಗೊಳಿಸುತ್ತದೋ ಅವನ ಪುಣ್ಯವು ಅಷ್ಟು ವಿಸ್ತಾರವಾಗುವಂತೆ ಪರಮಾತ್ಮ ಮಾಡುತ್ತಾನೆ.

ರೋಪಿತವಾದ ತುಲಸಿಯು ವಿಸ್ತಾರವಾಗಿ ಬೆಳೆಯಬೇಕು. ಬೆಳೆದ ತುಲಸಿಯಿಂದ ಪ್ರತಿನಿತ್ಯ ದೇವರನ್ನು ಅರ್ಚಿಸಬೇಕು. ದೇವರ ಅರ್ಚನೆಯಿಂದ ಪರಿಶುದ್ಧನಾಗುತ್ತಾನೆ. ಪರಿಶುದ್ಧವಾದ ಮನದಲ್ಲಿ ತತ್ತ್ವವು ಸ್ಥಿರವಾಗಿ ನಿಲ್ಲುತ್ತದೆ. ಅಪರೋಕ್ಷಜ್ಞಾನವನ್ನು ಪಡೆದು ಮುಕ್ತನಾಗುತ್ತಾನೆ. ವಿಷ್ಣುಲೋಕದಲ್ಲಿ ಸುಖಿಸುತ್ತಾನೆ.

**ಸಹಸ್ರಾಮ್ರಾರೋಪಣತಃ ಪಿಪ್ಪಲಾನಾಂ ಶತೇನ ಚ ।**
**ಯತ್ಫಲಂ ಸ್ಯಾತ್ತದೈಕೇನ ತುಲಸೀವಿಟಪೇನ ತು ॥**

ಸಾವಿರ ಮಾವಿನ ವೃಕ್ಷಗಳ, ನೂರು ಅರಳಿಮರಗಳ ರೋಪಣದಿಂದ ಬರುವ ಫಲ ಒಂದು ತುಲಸಿಯ ರೋಪಣದಿಂದ ಪ್ರಾಪ್ಯವಾಗುತ್ತದೆ.

**ದೇವರ ಅರ್ಚನೆಗಾಗಿ ತುಲಸಿಯನ್ನು ಬೆಳೆಸಬೇಕು**

ಶ್ರೀತುಲಸಿ ಆರೋಗ್ಯಪ್ರದವಾಗಿದೆ. ಮಾತ್ರವಲ್ಲ. ಪುಣ್ಯಪ್ರದವೂ ಆಗಿದೆ. ಆದ್ದರಿಂದ ಇದು ವಿಶಿಷ್ಟವಾದ ವೃಕ್ಷ. ಆದರೆ ಆರೋಗ್ಯಕ್ಕೆ ಉಪಯುಕ್ತವಾಗುತ್ತದೆಂಬ ಭಾವನೆಯಿಂದ ಈ ವೃಕ್ಷವನ್ನು ಬೆಳೆಸುವುದು ಪುಣ್ಯದ ಕೆಲಸವಲ್ಲ. ಇದು ಮನುಷ್ಯನ ಸ್ವಾರ್ಥವೆನಿಸುತ್ತದೆ. ಈ ಭಾವನೆ ಮನುಷ್ಯನಿಗೆ ತಾರಕವಾಗುವುದಿಲ್ಲ. ಈಗಾಗಲೇ ತಿಳಿದಂತೆ ಇದು ಸಾಮಾನ್ಯವಾದ ವನಸ್ಪತಿಮಾತ್ರವಲ್ಲ. ಕಿಂತು ಇದು ವೈಷ್ಣವವೃಕ್ಷ.

ಹೀಗಾಗಿ ವಿಷ್ಣುವಿನ ಪೂಜೆಗೆ ಉಪಯುಕ್ತವಾಗುತ್ತದೆ ಎಂಬ ಭಾವನೆಯಿಂದಲೇ ಈ ವೃಕ್ಷವನ್ನು ಬೆಳೆಸಬೇಕು. ಈ ವಿಷಯವನ್ನು ಸ್ಪಷ್ಟಪಡಿಸುವ ವಚನವಿದು-

**ಕೇಶವಾರ್ಥೇ ಕಲೌ ಯೇ ಚ ರೋಪಯಂತಿ ಹಿ ಭೂತಲೇ ।**
**ಕಿಂ ಕರಿಷ್ಯತಿ ತಾನ್ ದೃಷ್ಟ್ವಾ ಯಮೋಽಪಿ ಸಹ ಕಿಂಕರೈಃ ॥**

ಬ್ರಹ್ಮರುದ್ರನಿಯಾಮಕನಾಗಿದ್ದಾನೆ ಕೇಶವ. ಅವನ ಅರ್ಚನೆಗೆ ಉಪಯುಕ್ತ-ವಾಗುತ್ತದೆ ಎಂಬ ಭಾವನೆಯಿಂದ ತುಲಸಿಯನ್ನು ಬೆಳೆಸಬೇಕು. ದೇವರಿಗಾಗಿ ತುಲಸಿಯನ್ನು ಬೆಳೆಸಿದವರನ್ನು ಯಮನಾಗಲೀ ಯಮನ ದೂತರಾಗಲೀ ಪೀಡಿಸುವುದಿಲ್ಲ.

**ವಿಷ್ಣುಪೂಜನಸಂಸಕ್ತಃ ತುಲಸೀಂ ಯಸ್ತು ರೋಪಯೇತ್ ।**
**ಸ ರೋಪಕೋ ವಿಷ್ಣುಗೃಹೇ ಮೋದತೇ ದೇವವಚ್ಚಿರಮ್ ॥**

ದೇವರ ಪೂಜೆಯಲ್ಲಿ ಆಸಕ್ತನಾಗಬೇಕು. ದೇವರ ಅರ್ಚನೆಗಾಗಿಯೇ ತುಲಸಿಯನ್ನು ಬೆಳೆಸಬೇಕು. ಅವನು ವಿಷ್ಣುವಿನ ಮನೆಯಲ್ಲಿ ದೇವತೆಗಳಂತೆಯೇ ಸಂತೋಷವನ್ನು ಅನುಭವಿಸುತ್ತಾನೆ.

**ಶ್ರೀಕೃಷ್ಣನಿಂದ ತುಲಸೀರೋಪಣ**

**ರೋಪಿತಾ ಗೋಮತೀತೀರೇ ಸ್ವಯಂ ಕೃಷ್ಣೇನ ಪಾಲಿತಾ ।**
**ಜಗದ್ಧಿತಾಯ ತುಲಸೀ ಗೋಪೀನಾಂ ರತಿಹೇತವೇ ॥**

ಗೋಮತೀನದಿಯ ತೀರದಲ್ಲಿ ಸ್ವಯಂ ಶ್ರೀಕೃಷ್ಣಪರಮಾತ್ಮ ಜಗತ್ತಿನ ಹಿತದ ಉದ್ದೇಶದಿಂದ ತುಲಸಿಯನ್ನು ಬೆಳೆಸಿದ್ದಾನೆ. ಮತ್ತು ಗೋಪಿಕಾಸ್ತ್ರೀಯರನ್ನು ಸಂತೋಷಪಡಿಸುವುದಕ್ಕಾಗಿ ಅದನ್ನು ಪಾಲಿಸಿದ್ದಾನೆ.

**ವೃಂದಾವನೇ ರತಾ ನಿತ್ಯಂ ಸೇವಿತಾ ವಿಷ್ಣುನಾ ಸ್ವಯಮ್ ।**
**ಗೋಕುಲಸ್ಯ ಚ ವೃದ್ಧ್ಯರ್ಥಂ ಕಂಸಸ್ಯ ನಿಧನಾಯ ಚ ॥**

ವೃಂದಾವನದಲ್ಲಿ ಸಂತೋಷದಿಂದ ತುಲಸಿಯು ಬೆಳೆದಿದೆ. ಗೋಕುಲದ ವೃದ್ಧಿಗಾಗಿ, ಕಂಸನ ಸಂಹಾರದ ಉದ್ದೇಶದಿಂದ ಶ್ರೀಕೃಷ್ಣಪರಮಾತ್ಮ ತುಲಸಿಯನ್ನು ಸೇವಿಸಿದ್ದಾನೆ.

**ಶ್ರೀರಾಮನಿಂದಲೂ ತುಲಸೀರೋಪಣ**

**ವಸಿಷ್ಠವಚನಾಚ್ಚೈವ ರಾಮೇಣ ಸರಯೂತಟೇ ।**
**ರಾಕ್ಷಸಾನಾಂ ವಧಾರ್ಥಾಯ ರೋಪಿತಾ ತ್ವಂ ಜಗತ್ಪ್ರಿಯೇ ॥**

ತುಲಸಿಯ ರೋಪಣಮಾಡಿದವರು ಶತ್ರುಗಳನ್ನು ಗೆಲ್ಲುತ್ತಾರೆ. ಆದ್ದರಿಂದ ತುಲಸಿಯ ರೋಪಣ ಮಾಡು ಎಂದು ವಸಿಷ್ಠರು ರಾಮಚಂದ್ರನಿಗೆ ಆಜ್ಞಾಪಿಸಿದರು. ವಸಿಷ್ಠರ ಆಜ್ಞೆಯ ಮೇರೆಗೆ ಶ್ರೀರಾಮಚಂದ್ರನು ಸರಯೂನದಿಯ ತೀರದಲ್ಲಿ ಜಗತ್ತಿಯಳಾಗಿರುವ ತುಲಸಿಯನ್ನು ಬೆಳೆಸಿದ್ದಾನೆ.

ಶತ್ರುಸಂಹಾರಕ್ಕಾಗಿ ಯಾರ ಸಹಾಯವೂ ರಾಮನಿಗೆ ಬೇಕಾಗಿಲ್ಲ. ಆದರೂ ತುಲಸಿಯನ್ನು ಬೆಳೆಸುವ ಮೂಲಕ ವಸಿಷ್ಠರ ವಚನವನ್ನು ಪಾಲಿಸಿದ. ಮಂದಜನರಿಗಾಗಿ ಈ ವಿಧವಾದ ಆಚರಣೆಯನ್ನು ಮಾಡಿ ತೋರಿಸಿದ. ಶತ್ರುಜಯಕ್ಕಾಗಿ ತುಲಸಿಯ ರೋಪಣ ಮಾಡಬೇಕೆಂಬುದನ್ನು ಮಂದಜನರಿಗೆ ತಿಳಿಸುವುದಕ್ಕಾಗಿ ಈ ರೀತಿ ಮಾಡಿದ ಎಂದು ತಿಳಿಯಬೇಕು.

**ಉಮೆಯಿಂದ ತುಲಸೀರೋಪಣ**

ವಿವಾಹಿತರಾದವರು ಸರಸವಾದ ಸರಾಗವಾದ ದಾಂಪತ್ಯಕ್ಕಾಗಿ ತುಲಸಿಯ ಪೂಜೆಯನ್ನು ಮಾಡಬೇಕು. ಅವಿವಾಹಿತರು ಕೂಡಾ ಉತ್ತಮನಾದ ಪತಿಯ ಪ್ರಾಪ್ತಿಗಾಗಿ ತುಲಸಿಯ ಪೂಜೆಯನ್ನು ನಿತ್ಯದಲ್ಲಿಯೂ ಮಾಡಬೇಕು. ಈ ವಿಷಯವನ್ನು ಉಮೆಯ ಇತಿಹಾಸದಿಂದ ಸ್ಪಷ್ಟಪಡಿಸುವ ಪುರಾಣವಚನವಿದು-

**ಶಂಕರಾರ್ಥಂ ಪುರಾ ದೇವ್ಯಾ ಉಮಯಾ ಚ ಹಿಮಾಲಯೇ ।**
**ರೋಪಿತಾ ಭವವೃದ್ಧ್ಯರ್ಥಂ ತುಲಸಿ ತ್ವಾಂ ನಮಾಮ್ಯಹಮ್ ॥**

ರುದ್ರದೇವರ ಪ್ರಾಪ್ತಿಗಾಗಿ ಮತ್ತು ರುದ್ರದೇವರ ಅಭಿವೃದ್ಧಿಗಾಗಿ ಉಮಾದೇವಿಯು ಹಿಮಾಲಯದಲ್ಲಿ ನಿನ್ನನ್ನು ಬೆಳೆಸಿದ್ದಾಳೆ. ಅಂತಹ ನಿನಗೆ ನನ್ನ ನಮಸ್ಕಾರಗಳು.

**ದೇವತಾಸ್ತ್ರೀಯರಿಂದ ತುಲಸೀರೋಪಣ**

**ಸರ್ವಾಭಿರ್ದೇವಪತ್ನೀಭಿಃ ರೋಪಿತೇ ನಂದನೇ ವನೇ ।**
**ಸ್ವರ್ಗೇ ತು ಮಂಗಲಾರ್ಥಂ ಹಿ ಸೇವಿತಾ ತ್ವಾಂ ನಮೋಽಸ್ತು ತೇ ॥**

ದೇವತಾಸ್ತ್ರೀಯರೆಲ್ಲರೂ ನಿನ್ನನ್ನು ಸ್ವರ್ಗದ ನಂದನವನದಲ್ಲಿ ಬೆಳೆಸಿದ್ದಾರೆ. ತಮಗೆಲ್ಲ ಮಂಗಲವಾಗಬೇಕೆಂದು ನಿನ್ನನ್ನು ಸೇವಿಸಿದ್ದಾರೆ. ಅಂತಹ ನಿನಗೆ ನಮಸ್ಕಾರಗಳು.

**ಯೋ ನರಸ್ತುಲಸೀಸಸ್ಯಂ ಸಂಸ್ಥಾಪ್ಯಾಽಪಿ ಪ್ರವರ್ಧತೇ ।**
**ಸ ಸಪ್ತಕುಲಸಂಯುಕ್ತೋ ವಿಷ್ಣುಸಾಯುಜ್ಯಮಾಪ್ನುಯಾತ್ ॥**

ತುಲಸೀಸಸ್ಯವನ್ನು ನಾಟಬೇಕು. ಅದರ ಬೆಳವಣಿಗೆಗೆ ಬೇಕಾದ ಎಲ್ಲ ಉಪಾಯಗಳನ್ನು ಪಾಲಿಸಬೇಕು. ಚೆನ್ನಾಗಿ ಬೆಳೆಯುವಂತೆ ಮಾಡಬೇಕು. ಅವನ ವಂಶದಲ್ಲಿ ಏಳು ತಲೆಯ ತನಕ ವೈಷ್ಣವರಾಗುತ್ತಾರೆ.

**ತುಲಸೀ ವೃಂದಾವನ**

ತುಲಸಿಯನ್ನು ಬೆಳೆಸಲು ಸುಂದರವಾದ ವೃಂದಾವನವನ್ನು ನಿರ್ಮಿಸಬೇಕು. ವೃಂದಾದೇವಿಯೇ ಸ್ವಯಂ ವೃಂದಾವನವಾಗಿದ್ದಾಳೆ ಎಂಬುದನ್ನು ಪುರಾಣಗಳು ನಿರೂಪಿಸುತ್ತವೆ. ಜಗನ್ನಾಥದಾಸರೂ ತತ್ತ್ವಸುವ್ವಾಲಿಯಲ್ಲಿ ಈ ವಿಷಯವನ್ನು ತಿಳಿಸಿದ್ದಾರೆ. ಪ್ರಕೃತ ವೃಂದಾವನ ಮಾಡುವುದರಿಂದ ಲಭ್ಯವಾಗುವ ಪ್ರಯೋಜನವನ್ನು ಈ ವಚನಗಳು ತಿಳಿಸುತ್ತವೆ-

**ವೃಂದಾವನಂ ಚ ಕುರುತೇ ರೋಪಣಾರ್ಥಂ ಮಹಾಮುನೇ ।**
**ತಾವತ್ಯೈವ ವಿಮುಕ್ತಾಘೋ ಬ್ರಹ್ಮಭೂಯಾಯ ಕಲ್ಪತೇ ॥ ಸ್ಕಂ.ಪು.॥**

ತುಲಸಿ ಬೆಳೆಯುವುದಕ್ಕಾಗಿ ಒಂದು ವೃಂದಾವನವನ್ನು ನಿರ್ಮಿಸಬೇಕು. ಇದರಿಂದಲೂ ಪಾಪಗಳು ತೊಲಗಿಹೋಗುತ್ತವೆ. ಭಗವಂತನ ಜ್ಞಾನವು ವಿಕಸಿತವಾಗುತ್ತದೆ. ತದ್ದ್ವಾರಾ ಮುಕ್ತಿಯು ದೊರೆಯುತ್ತದೆ. ಆದ್ದರಿಂದ ಕನಿಷ್ಠಪಕ್ಷ ತಮ್ಮ ತಮ್ಮ ಮನೆಯಲ್ಲಿಯಾದರೂ ತುಲಸಿಯನ್ನು ಬೆಳೆಸಲು ಒಂದು ವೃಂದಾವನವನ್ನು ನಿರ್ಮಿಸಿಕೊಳ್ಳುವುದು ಅವರವರ ಸಾಧನೆಗೆ ಅನುಕೂಲವಾಗುತ್ತದೆ.

**ವೃಂದಾವನಂ ಯಃ ಕುರುತೇ ತುಲಸ್ಯಾ ಭಕ್ತಿಸಂಯುತಃ ।**
**ಅಥವಾ ಕಾರಯೇದನ್ಯೈಃ ತನ್ಮೇ ನಿಗದತಃ ಶ್ರುಣು ॥**

**ತುಲಸೀಸ್ಥಾನಸಂಕಲ್ಪಮಾತ್ರಾದೇವ ಚ ಮಾನವಃ ।**
**ಜನ್ಮತ್ರಯಾರ್ಜಿತೈಃ ಪಾಪೈಃ ತತ್‌ಕ್ಷಣಾದೇವ ಮುಚ್ಯತೇ ॥**

ತುಲಸಿಯ ಸಂರಕ್ಷಣೆಗೆ ಭದ್ರವಾದ ವೃಂದಾವನವನ್ನು ನಿರ್ಮಿಸಬೇಕು. ಅಥವಾ ಮತ್ತೊಬ್ಬರಿಂದ ಮಾಡಿಸಬೇಕು. ಅದರಿಂದ ವಿಶಿಷ್ಟವಾದ ಫಲವು ದೊರೆಯುತ್ತದೆ.

ತುಲಸಿಯನ್ನು ಬೆಳೆಸಲು ಇದು ಯೋಗ್ಯವಾದ ಸ್ಥಳವಾಗಿದೆ. ಇಲ್ಲಿ ತುಲಸೀರೋಪಣ ಮಾಡುತ್ತೇನೆ ಎಂದು ಸಂಕಲ್ಪ ಮಾಡಿದರೆ ಸಾಕು. ಮೂರು ಜನ್ಮಗಳಿಂದ ಸಂಚಿತವಾದ ಪಾಪಗಳೆಲ್ಲ ಭಸ್ಮವಾಗಿಹೋಗುತ್ತವೆ.

**ತುಲಸೀಕಾನನಸ್ಯಾರ್ಥಂ ಪ್ರಾಕಾರಂ ಯಸ್ತು ಕಾರಯೇತ್ ।**
**ಕಂಟಕಾವರಣಂ ಚಾಽಪಿ ತನ್ಮೇ ನಿಗದತಃ ಶ್ರುಣು ॥**

**ಯಾವದ್ದಿನಾನಿ ತದ್ವಿಪ್ರ ತಿಷ್ಠೇತ್ಸಮ್ಯಕ್ ದೃಢಂ ಭುವಿ ।**
**ತಾವದ್ಯುಗಸಹಸ್ರಾಣಿ ವಿಷ್ಣುಲೋಕೇ ಸ ಪೂಜ್ಯತೇ ॥**

ತುಲಸೀವನದ ಸಂರಕ್ಷಣೆಗೆ ಪ್ರಾಕಾರವನ್ನು ಕಟ್ಟಿಸಬೇಕು. ಅಥವಾ ಮುಳ್ಳಿನ ಬೇಲಿಯನ್ನು ಸುತ್ತಲೂ ಹಾಕಬೇಕು. ಆ ಬೇಲಿ ಅಥವಾ ಪ್ರಾಕಾರ ಎಷ್ಟು ದಿನಗಳ ವರೆಗೆ ದೃಢವಾಗಿರುತ್ತದೋ ಅಷ್ಟು ಸಾವಿರ ಯುಗಗಳ ತನಕ ಸುಖವನ್ನು ಅನುಭವಿಸುತ್ತಾನೆ.

**ತುಲಸಿಯ ಸಂರಕ್ಷಣೆ**

ತುಲಸಿಯ ಸುತ್ತುಮುತ್ತ ಅನಾವಶ್ಯಕವಾಗಿ ಹುಲ್ಲು ಇತ್ಯಾದಿ ಸಸ್ಯಗಳು ಬೆಳೆಯುತ್ತವೆ. ಅದು ತುಲಸಿಯ ಬೆಳವಣೆಗೆಗೆ ಬಾಧಕವಾಗುತ್ತದೆ. ಹೀಗಾಗಿ ಆ ಹುಲ್ಲನ್ನು ಮೇಲಿಂದ ಮೇಲೆ ಕಿತ್ತಿಹಾಕುತ್ತಾ ತುಲಸಿಯು ಚೆನ್ನಾಗಿ ಬೆಳೆಯುವಂತೆ ಮಾಡಬೇಕು. ಪ್ರಾಣಿಗಳಿಂದಲೂ ತುಲಸಿಯ ಬೆಳವಣೆಗೆಗೆ ತೊಂದರೆಯಾಗುತ್ತದೆ. ಆದ್ದರಿಂದ ಸರ್ವದಾ ತುಲಸಿಯನ್ನು ಸಂರಕ್ಷಿಸುತ್ತಿರಬೇಕು.

ತುಲಸಿಯ ಅಭಿವೃದ್ಧಿಗೆ ಬೇಕಾದ ಉಪಾಯಗಳನ್ನೆಲ್ಲ ಪಾಲಿಸಬೇಕು ಎಂಬುದನ್ನು ಈ ಮಾತು ಚೆನ್ನಾಗಿ ಬೋಧಿಸುತ್ತದೆ-

**ಚಿನ್ದಂತಿ ತೃಣಜಾತೀನಿ ತುಲಸೀಮೂಲಜಾನಿ ವೈ ।**
**ತದ್ದೇಹಸ್ಥಾಃ ಬ್ರಹ್ಮಹತ್ಯಾಶ್ಛಿನೋತಿ ತತ್ಕ್ಷಣಾತ್ ಹರಿಃ ॥**

ತುಲಸೀ ವೃಕ್ಷದ ಜೊತೆಗೆ ಬೆಳೆದಿರುವ ಹುಲ್ಲು ಮೊದಲಾದವುಗಳನ್ನು ತೆಗೆಯುತ್ತಿರಬೇಕು. ಹೀಗೆ ಮಾಡುವುದರಿಂದ ಆ ವ್ಯಕ್ತಿಯ ದೇಹದಲ್ಲಿರುವ ಬ್ರಹ್ಮಹತ್ಯಾದಿಪಾಪಗಳನ್ನು ಪರಮಾತ್ಮ ಕಿತ್ತಿ ಎಸೆಯುತ್ತಾನೆ.

**ಗೋಭ್ಯಃ ಶ್ವಭ್ಯಃ ಖರೇಭ್ಯಶ್ಚ ಮನುಷ್ಯೇಭ್ಯಶ್ಚ ರಕ್ಷತಿ ।**
**ಶಿಶುಭ್ಯಃ ತುಲಸೀಂ ಯಸ್ತು ತಂ ರಕ್ಷೇತ್ ಕೇಶವಃ ಸದಾ ॥ಪ.ಪು॥**

ಹಸುಗಳು, ನಾಯಿಗಳು, ಕತ್ತೆಗಳು, ಮನುಷ್ಯರು ಮತ್ತು ಮಕ್ಕಳು ತುಲಸಿಗೆ ಮಾರಕರಾಗಿರುತ್ತಾರೆ. ಇವರಿಂದ ಸದಾ ತುಲಸಿಯನ್ನು ಸಂರಕ್ಷಿಸಬೇಕು. ದೇವರಿಗೆಂದು ಬೆಳೆಸಿದ ತುಲಸಿಯು ದೇವರಿಗೆ ಉಪಯುಕ್ತವಾಗುವಂತೆ ನೋಡಿಕೊಳ್ಳುವುದು ಕೂಡಾ ತುಲಸಿಯ ಪೂಜೆಯೇ ಆಗಿದೆ. ಇದರಿಂದ ಪರಮಾತ್ಮ ಸಂತುಷ್ಟನಾಗುತ್ತಾನೆ. ಹೀಗೆ ತುಲಸಿಯನ್ನು ಸೇವಿಸಿದವರನ್ನು ಪರಮಾತ್ಮ ಸಂರಕ್ಷಿಸುತ್ತಾನೆ.

**ತುಲಸಿಗೆ ಸೇಚನ**

**ಕದಾಚಿತ್ತುಲಸೀಂ ದುಗ್ಧೈಃ ಸೇಚಯೇದ್ಯೋ ನರೋತ್ತಮಃ ।**
**ತಸ್ಯ ವೇಶ್ಮನಿ ವಿಪ್ರರ್ಷೇ ಲಕ್ಷ್ಮೀರ್ಭವತಿ ನಿಶ್ಚಲಾ ॥**

ತುಲಸಿಯನ್ನು ಜಲದಿಂದ ಸೇಚನ ಮಾಡುತ್ತಿರಬೇಕು. ಇದಲ್ಲದೇ ಆವಾಗ ಆವಾಗ ತುಲಸಿಗೆ ಹಾಲನ್ನೂ ಹಾಕುತ್ತಿರಬೇಕು. ಹೀಗೆ ಮಾಡಿದವರ ಮನೆಯಲ್ಲಿ ಲಕ್ಷ್ಮಿಯು ಸ್ಥಿರವಾಗಿ ಇರುತ್ತಾಳೆ. ಹಾಲಿನಿಂದ ಮಾತ್ರವಲ್ಲ. ಎಳೆನೀರಿನಿಂದ, ಜೇನುತುಪ್ಪದಿಂದ, ಕಬ್ಬಿನರಸದಿಂದ ತುಲಸಿಯ ಸೇಚನ ಮಾಡಬೇಕೆಂದೂ ಪುರಾಣಗಳು ತಿಳಿಸುತ್ತವೆ. (ಆ ವಿಷಯವನ್ನು ಕಥಾ ಭಾಗದಲ್ಲಿ ನೀವು ನೋಡಿರಿ)

**ಏಕಂ ಕುಂಭೋದಕಂ ವಾಽಪಿ ಪ್ರೋಕ್ಷಯೇತ್ತುಲಸೀವನೇ ।**
**ತಸ್ಯ ಸರ್ವೇಽಪಿ ಪಿತರಃ ಸಾನಂದಾತ್ಸ್ವರ್ಗಮಾಪ್ನುಯುಃ ॥**

ಜವಾಬ್ದಾರಿಯನ್ನು ಸ್ವೀಕರಿಸಿ ತುಲಸಿಯನ್ನು ಬೆಳೆಸಲು ಎಲ್ಲರಿಗೆ ಸಾಧ್ಯವಾಗಲಿಕ್ಕಿಲ್ಲ. ಒಂದು ಕುಂಭದಷ್ಟಾದರೂ ನೀರನ್ನು ತುಲಸಿಗೆ ಹಾಕಬೇಕು. ಈ ಕರ್ಮದಿಂದ ಅವರ ಪಿತೃಗಳೆಲ್ಲ ಸಂತುಷ್ಟರಾಗುತ್ತಾರೆ. ಆನಂದದಿಂದ ಸ್ವರ್ಗವನ್ನು ಸೇರಿ ಸುಖಿಸುತ್ತಾರೆ.

**ಹದಿನಾರು ಹಸ್ತದವರೆಗೆ ಮಹಾತೀರ್ಥ**

**ತುಲಸೀಮೂಲಮಾರಭ್ಯ ಯಾವದ್ಧಸ್ತಾಸ್ತು ಷೋಡಶ ।**
**ದಶದಿಕ್ಷು ಮಹಾತೀರ್ಥಂ ತದೇವ ಸುರವಂದಿತಮ್ ॥ -ಬೃಹದ್ಧರ್ಮ**

ತುಲಸೀಮೂಲವನ್ನು ಪ್ರಾರಂಭಿಸಿ ಹತ್ತೂ ದಿಕ್ಕಿನಲ್ಲಿ ಹದಿನಾರು ಹಸ್ತಗಳಷ್ಟು ಪರಿಮಾಣದ ದೇಶ ಮಹಾತೀರ್ಥವೆನಿಸುತ್ತದೆ. ಈ ಹದಿನಾರು ಹಸ್ತಪ್ರದೇಶ ರೂಪವಾದ ಮಹಾತೀರ್ಥದಲ್ಲಿಯೇ ದೇವತೆಗಳೆಲ್ಲರೂ ವಾಸವಾಗಿರುತ್ತಾರೆ. ಕಾರಣ ಅಷ್ಟೆಲ್ಲ ಪ್ರದೇಶ ಪವಿತ್ರವಾಗಿರುವ ಹಾಗೆ ನೋಡಿಕೊಳ್ಳಬೇಕು.

**ತುಲಸೀಮೂಲದಲ್ಲಿ ಉಪಲೇಪನ**

**ಗೋಮಯೈಸ್ತುಲಸೀಮೂಲೇ ಯಃ ಕುರ್ಯಾದನುಲೇಪನಮ್ ।**
**ಸಮ್ಮಾರ್ಜನಂ ಚ ಕುರುತೇ ತಸ್ಯ ಪುಣ್ಯಫಲಂ ಶ್ರುಣು ॥**

**ರಜಾಂಸಿ ತತ್ರ ಯಾವಂತಿ ದೂರೀಭೂತಾನಿ ಜೈಮಿನೇ ।**
**ತಾವತ್ಕಲ್ಪಸಹಸ್ರಾಣಿ ಮೋದತೇ ಬ್ರಹ್ಮಣಾ ಸಹ ॥**

ತುಲಸಿಯ ಬುಡದಲ್ಲಿ ಗೋಮಯದಿಂದ ಅನುಲೇಪನವನ್ನು ಪುರುಷರಾಗಲೀ ಸ್ತ್ರೀಯರಾಗಲೀ ಮಾಡುತ್ತಿರಬೇಕು. ಇದರಿಂದ ಜನ್ಯವಾಗುವ ಫಲ ಈ ರೀತಿಯಾಗಿದೆ. ಅಲ್ಲಿ ಎಷ್ಟು ಧೂಳು ದೂರಹೋಗಿದೆಯೋ ಅಷ್ಟು ಸಾವಿರ ಕಲ್ಪದ ವರೆಗೆ ಪರಬ್ರಹ್ಮನ ಲೋಕದಲ್ಲಿ ಸುಖಿಯಾಗಿ ಇರುತ್ತಾನೆ.

**ಸ್ನಾನಮಾಡಿಯೇ ಮಾರ್ಜನ**

**ಸ್ನಾತ್ವಾ ಪ್ರಮಾರ್ಜಯೇದ್ಯಸ್ತು ತತ್ಕ್ಷೇತ್ರಂ ಪಾಪನಾಶನಮ್ ।**
**ಸೋಽಪಿ ಪಾಪವಿನಿರ್ಮುಕ್ತಃ ಸ್ವರ್ಗಲೋಕಮವಾಪ್ನುಯಾತ್ ॥**

ಸ್ನಾನಮಾಡಿಯೇ ತುಲಸಿಯ ಸುತ್ತ ಮುತ್ತ ಪ್ರದೇಶವನ್ನು ಸಾರಿಸಬೇಕು. ರಂಗವಲ್ಯಾದಿಗಳನ್ನು ಹಾಕಬೇಕು. ತುಲಸಿಯ ಸೇಚನವನ್ನು ಮಾಡಬೇಕು. ತುಲಸಿಇರುವ ಪ್ರದೇಶ ಪರಮಪಾವನವಾದ ಕ್ಷೇತ್ರ. ತುಲಸಿಗೆ ಒಂದು ಕಲಶ ನೀರು ಹಾಕಿದರೂ ಸಾಕು. ಅವನ ಪುಣ್ಯವು ಅಭಿವೃದ್ಧವಾಗುತ್ತದೆ.

ತುಲಸಿಯ ಸುತ್ತಮುತ್ತ ಪ್ರದೇಶವನ್ನು ಮಾರ್ಜನ ಮಾಡುವಾಗ ಈ ಮಂತ್ರವನ್ನು ಹೇಳಿಕೊಳ್ಳಬೇಕು-

**ಮಾತಸ್ತುಲಸಿ ಕಲ್ಯಾಣಿ ಸ್ಥಲಂ ತೇ ಸುಮನೋಹರಮ್ ।**
**ಕ್ರೀಡಂತ್ಯಾಗತ್ಯ ವಿಬುಧಾ ಮಾರ್ಜಯೇ ತತ್ಪ್ರಸೀದ ಮೇ ॥ -ಬೃಹದ್ಧರ್ಮ**

ಪರಮಕಲ್ಯಾಣಿಯಾಗಿದ್ದಾಳೆ ಶ್ರೀತುಳಸಿ. ಎಲ್ಲರ ತಾಯಿಯಾಗಿದ್ದಾಳೆ. ಅವಳ ಸ್ಥಾನ ಪರಮಪವಿತ್ರ. ಆ ಸ್ಥಳದಲ್ಲಿ ದೇವತೆಗಳು ಬಂದು ಕ್ರೀಡಿಸುತ್ತಾರೆ. ಆದ್ದರಿಂದ ಆ ಸ್ಥಳವನ್ನು ನಾನು ಮಾರ್ಜನಮಾಡುತ್ತೇನೆ.

**ಮಂತ್ರೇಣಾನೇನ ತುಲಸೀಸ್ಥಾನಂ ಹಸ್ತಚತುಷ್ಟಯಮ್ ।**
**ಸಮ್ಮಾರ್ಜಯೇಚ್ಚತುರ್ದಿಕ್ಷು ಸಗೋಮಯಜಲೈರ್ಮುದಾ ॥ -ಬೃಹದ್ಧರ್ಮ**

ಈ ಮಂತ್ರವನ್ನು ಪಠಿಸಬೇಕು. ಯದ್ಯಪಿ ಹದಿನಾರು ಹಸ್ತದ ವರೆಗಿನ ಪ್ರದೇಶ ಮಹಾತೀರ್ಥವಾಗಿದೆ. ಅಷ್ಟೆಲ್ಲ ಪ್ರದೇಶವನ್ನು ಸ್ವಚ್ಛಗೊಳಿಸಬೇಕು. ತುಲಸಿಯ ಸುತ್ತಮುತ್ತ ನಾಲ್ಕು ಹಸ್ತದವರೆಗಿನ ಪ್ರದೇಶವನ್ನು ಮಾತ್ರ ಗೋಮಯಜಲದಿಂದ ಭಕ್ತಿಪೂರ್ವಕವಾಗಿ ಸಾರಿಸಬೇಕು.

**ಪರೇಣಾಲಂಕೃತಂ ಪುಣ್ಯಂ ತುಲಸೀಕಾನನಂ ನರಃ ।**
**ದೃಷ್ಟ್ವಾತು ಮೋದತೇ ವಿಷ್ಣೋಃ ಸಾರೂಪ್ಯಂ ಪ್ರಾಪ್ಯತೇ ನರಃ ॥**

ತುಲಸೀವನವನ್ನು ಮನೆಯಲ್ಲಿಯೇ ಬೆಳೆಸಬೇಕು. ಆ ವನವನ್ನು ರಂಗವಲ್ಲೀ, ದೀಪಾದಿಗಳಿಂದ ಅಲಂಕರಿಸಬೇಕು. ಅಥವಾ ಮತ್ತೊಬ್ಬರಿಂದ ಅಲಂಕೃತವಾದ ತುಲಸೀವನದ ದರ್ಶನ ಮಾಡಿಕೊಳ್ಳಬೇಕು. ಸಂತೋಷಪಡಬೇಕು. ಅಲಂಕಾರ-ಮಾಡಿದವರನ್ನು ಸ್ತುತಿಸಬೇಕು. ಹೀಗೆ ಮಾಡುವುದರಿಂದಲೂ ಸದ್ಗತಿಯು ದೊರೆಯುತ್ತದೆ.

**ತುಲಸೀದರ್ಶನ**

ಪ್ರತಿನಿತ್ಯ ಪ್ರಾತಃಕಾಲದಲ್ಲಿ ಶ್ರೀತುಲಸಿಯ ದರ್ಶನವನ್ನು ಮಾಡಿಕೊಳ್ಳಬೇಕು. ಇದರಿಂದ ದುಸ್ವಪ್ನಗಳು ನಷ್ಟವಾಗುತ್ತವೆ. ಪುಣ್ಯವು ಪ್ರಾಪ್ತವಾಗುತ್ತದೆ. ಪಾಪಗಳೆಲ್ಲ ದೂರವಾಗುತ್ತವೆ. ಈ ವಿಷಯವನ್ನು ತಿಳಿಸುವ ಅತಿಪ್ರಸಿದ್ಧವಾದ ವಚನವಿದು-

**ಪಾಪಾನಿ ಯಾನಿ ರವಿಸೂನುಪಟಸ್ಥಿತಾನಿ**
**ಗೋಬ್ರಹ್ಮಬಾಲಪಿತೃಮಾತೃವಧಾದಿಕಾನಿ ।**
**ನಶ್ಯಂತಿ ತಾನಿ ತುಲಸೀವನದರ್ಶನೇನ**
**ಗೋಕೋಟಿದಾನಸದೃಶಂ ಫಲಮಾಪ್ನುವಂತಿ ॥**

ನಮ್ಮ ಪಾಪಗಳನ್ನು ಯಮನು ಚಿತ್ರಗುಪ್ತನಿಂದ ಬರೆಸುತ್ತಾನೆ. ನಮ್ಮ ಪಾಪದ ಪುಸ್ತಕ ಪ್ರತಿನಿತ್ಯವೂ ತುಂಬಿ ತುಳುಕುತ್ತದೆ. ಗೋಹತ್ಯಾ, ಬ್ರಹ್ಮಹತ್ಯಾ, ಬಾಲಹತ್ಯಾ, ಪಿತೃಹತ್ಯಾ, ಮಾತೃಹತ್ಯಾ ಮೊದಲಾದ ಪಾಪಗಳೇ ಅಲ್ಲಿ ತುಂಬಿವೆ. ಅತಿ ಸಣ್ಣದಾದ ಪುಣ್ಯಕ್ಕೆ ಅಲ್ಲಿ ಅವಕಾಶವೇ ಇಲ್ಲ.

ನಿಜ. ಆದರೆ ನಿತ್ಯವೂ ಪ್ರಾತಃ ಕಾಲದಲ್ಲಿ ಎದ್ದು ಭಕ್ತಿಯಿಂದ ತುಲಸಿಯನ್ನು ನಮಸ್ಕರಿಸಬೇಕು. ನಮ್ಮ ಈ ಅತಿ ಸಣ್ಣದಾದ ಪುಣ್ಯಕಾರ್ಯ ಎಲ್ಲ ಪಾಪಗಳನ್ನು ಅಳಿಸಿಹಾಕುತ್ತದೆ. ಇದು ತುಲಸೀದರ್ಶನದಿಂದ ಲಭ್ಯವಾಗುತ್ತದೆ. ಕೋಟಿ ಆಕಳುಗಳನ್ನು ದಾನ ಮಾಡಿದ ಫಲವು ಲಭ್ಯವಾಗುತ್ತದೆ. ಆದ್ದರಿಂದ ಶ್ರದ್ಧಾ-ಭಕ್ತಿಗಳಿಂದ ತುಲಸಿಯ ದರ್ಶನವನ್ನು ಮಾಡಿಕೊಳ್ಳಬೇಕು. ಅಲ್ಲಿ ಸನ್ನಿಹಿತನಾದ ಪರಮಾತ್ಮನನ್ನು, ರಮಾದೇವಿಯನ್ನು, ಬ್ರಹ್ಮ-ರುದ್ರಾದಿದೇವತೆಗಳನ್ನು ಸ್ಮರಿಸಬೇಕು. ಸರ್ವನಿಯಾಮಕ ಪರಮಾತ್ಮ ಎಂಬುದನ್ನು ಚಿಂತಿಸಬೇಕು.

**ದರ್ಶನಾತ್ ಪಾಪನಾಶಿನೀಂ, ಅಭಿವಂದನಾದ್ರೋಗನಾಶಿನೀಂ, ಪ್ರಾದಕ್ಷಿಣ್ಯಾತ್ ದಾರಿದ್ರ್ಯನಾಶಿನೀಮ್ ॥**

ತುಲಸಿಯ ದರ್ಶನದಿಂದ ಪಾಪಗಳು ದೂರವಾಗುತ್ತವೆ. ತುಲಸಿಗೆ ಅಭಿವಂದಿಸುವುದರಿಂದ ರೋಗಗಳು ಉಪಶಮನವಾಗುತ್ತವೆ. ಪ್ರದಕ್ಷಿಣೆ ಹಾಕುವುದರಿಂದ ದಾರಿದ್ರ್ಯ ದೂರವಾಗುತ್ತದೆ.

**ದಿನಂ ತಚ್ಚ ಶುಭಂ ಪ್ರೋಕ್ತಂ ತುಲಸೀ ಯತ್ರ ದೃಶ್ಯತೇ ।**
**ನ ತತ್ರ ಜಾಯತೇ ತಸ್ಯ ವಿಪತ್ತಿಃ ಕುತ್ರಚಿನ್ಮುನೇ ॥**

ಪ್ರತಿನಿತ್ಯವೂ ತುಲಸಿಯ ದರ್ಶನವನ್ನು ಮಾಡಿಕೊಳ್ಳಬೇಕು. ತುಲಸಿಯ ದರ್ಶನವಾದ ದಿನವೇ ಶುಭದಿನ. ಆ ದಿನದಲ್ಲಿ ಯಾವುದೇ ವಿಪತ್ತುಗಳು ಸಂಭವಿಸುವುದಿಲ್ಲ.

**ಅಪಿ ಜನ್ಮಾಂತರಕೃತಂ ಪಾಪಮತ್ಯಂತಗರ್ಹಿತಮ್ ।**
**ವಿನಶ್ಯತಿ ಮುನಿಶ್ರೇಷ್ಠ ತುಲಸೀವೃಕ್ಷದರ್ಶನಾತ್ ॥**

ಬ್ರಹ್ಮಹತ್ಯಾದಿಪಾಪಗಳು ಅತ್ಯಂತನಿಂದ್ಯವಾಗಿವೆ. ಆ ಎಲ್ಲ ಪಾಪಗಳು ತುಲಸೀವೃಕ್ಷದ ದರ್ಶನದಿಂದ ದೂರವಾಗುತ್ತವೆ. ಈ ಜನ್ಮದಲ್ಲಿ ಮಾತ್ರವಲ್ಲ. ಜನ್ಮ-ಜನ್ಮಾಂತರದಲ್ಲಿ ಮಾಡಿರುವ ಪಾಪಗಳೆಲ್ಲ ತುಲಸೀದರ್ಶನದಿಂದ ದೂರವಾಗುತ್ತವೆ.

**ತುಲಸೀಸ್ಪರ್ಶ**

**ಅಶುಚಿರ್ವಾ ಶುಚಿರ್ವಾಽಪಿ ಯಃ ಸ್ಪೃಶೇತ್ ತುಲಸೀದಲಮ್ ।**
**ಸರ್ವಪಾಪವಿನಿರ್ಮುಕ್ತಃ ತತ್ ಕ್ಷಣಾತ್ ಶುದ್ಧತಾಮಿಯಾತ್ ।**
**ಪ್ರಯಾತಿ ಚ ಪದಂ ವಿಷ್ಣೋರಂತೇ ದೇವಸುದುರ್ಲಭಮ್ ॥**

ಅಶುಚಿಯಾದಾಗ ತೀರ್ಥವನ್ನು ಪ್ರೋಕ್ಷಣೆಮಾಡಿಕೊಳ್ಳುವ ರೂಢಿ ಇದೆ. ನಿರ್ಮಾಲ್ಯವಾದ ತುಲಸಿಯನ್ನು ಸ್ಪರ್ಶಮಾಡಿದರೂ ಅಶೌಚವು ದೂರವಾಗುತ್ತದೆ. ಅತಿದುರ್ಲಭವಾದ ಮುಕ್ತಿಗೆ ತುಲಸಿಯ ಸ್ಪರ್ಶವು ಕಾರಣವಾಗಿದೆ.

**ತುಲಸೀಸ್ಪರ್ಶನಂ ಸ್ನಾನಂ ತುಲಸೀಸ್ಪರ್ಶನಂ ತಪಃ ।**
**ತುಲಸೀಸ್ಪರ್ಶನಂ ಮುಕ್ತಿಃ ತುಲಸೀಸ್ಪರ್ಶನಂ ವ್ರತಮ್ ॥**

ತುಲಸಿಯನ್ನು ಮುಟ್ಟುವುದೇ ಸ್ನಾನ. ತುಲಸಿಯನ್ನು ಮುಟ್ಟುವುದೇ ತಪಸ್ಸು. ತುಲಸಿಯನ್ನು ಮುಟ್ಟುವುದೇ ಪಾಪಗಳಿಂದ ಮುಕ್ತಿ. ತುಲಸಿಯನ್ನು ಮುಟ್ಟುವುದೇ ವ್ರತವೆಂದು ತಿಳಿಯಬೇಕು. ಪ್ರತಿನಿತ್ಯವೂ ತುಲಸಿಯನ್ನು ಮುಟ್ಟಿ ಪೂಜೆಯನ್ನು ಮಾಡಬೇಕು.

**ತುಲಸಿಯ ಸೇವೆ**

ಪ್ರಸಂಗ ಎಂಥದೇ ಇರಲಿ. ತುಲಸಿಯ ಪೂಜೆಯನ್ನು ಮಹಿಳೆಯರು ಪರಿತ್ಯಜಿಸಬಾರದು. ಇದನ್ನು ತಿಳಿಸುವುದಕ್ಕಾಗಿ ಮಹಾಮಾತೆಯಾದ ಸೀತಾದೇವಿ ವನವಾಸದ ಪ್ರಸಂಗದಲ್ಲಿಯೂ ದಂಡಕಾರಣ್ಯದಲ್ಲಿ ತುಲಸಿಯ ಸೇವೆ ಮಾಡಿದ ಇತಿಹಾಸವನ್ನು ಈ ವಚನವು ತಿಳಿಸುತ್ತದೆ-

**ಸೀತಯಾ ಸೇವಿತಾ ಭಕ್ತ್ಯಾ ತುಲಸೀ ದಂಡಕಾನನೇ ।**
**ತ್ರೈಲೋಕ್ಯಪಾವನೀ ಗಂಗಾ ಯಥಾ ಶಾಸ್ತ್ರೇಷು ಗೀಯತೇ ॥**

ದಂಡಕಾರಣ್ಯದಲ್ಲಿ ಸೀತಾದೇವಿಯು ನಿನ್ನನ್ನು ಭಕ್ತಿಯಿಂದ ಸೇವಿಸಿದ್ದಾಳೆ. ಮೂರುಲೋಕವನ್ನು ಪವಿತ್ರಗೊಳಿಸುವ ಗಂಗೆಯಂತೆ ನಿನ್ನ ಮಹಿಮೆ ಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿದೆ.

**ಹನುಮಂತನಿಂದ ತುಲಸಿಯ ಸೇವೆ**

**ಋಷ್ಯಮೂಕೇ ತು ವಸತಾ ಕಪಿರಾಜೇನ ಸೇವಿತಾ ॥**

ಋಷ್ಯಮೂಕದಲ್ಲಿ ವಾಸಮಾಡುವ ಕಪಿರಾಜನಾದ ಹನುಮಂತನೂ ತುಲಸಿಯನ್ನು ಸೇವಿಸಿದ್ದಾನೆ.

**ಪಿತೃದೇವತೆಗಳಿಂದಲೂ ತುಲಸಿಯ ಸೇವೆ**

**ಧರ್ಮಾರಣ್ಯೇ ಗಯಾಯಾಂ ಚ ಸೇವಿತಾ ಪಿತೃಭಿಃ ಸ್ವಯಮ್ ।**
**ಸೇವಿತಾ ತುಲಸೀ ಪುಣ್ಯಾ ಆತ್ಮನೋ ಹಿತಕಾಮ್ಯಯಾ ॥**

ನೀನು ಪುಣ್ಯಪ್ರದಳಾಗಿರುವಿ. ಧರ್ಮಾರಣ್ಯದಲ್ಲಿ, ಗಯಾಕ್ಷೇತ್ರದಲ್ಲಿ ಪಿತೃದೇವತೆಗಳು ತಮಗೆ ಹಿತವನ್ನು ಬಯಸಿ ನಿನ್ನನ್ನು ಸೇವಿಸಿದ್ದಾರೆ.

ಹೀಗೆ ಎಲ್ಲರೂ ತುಲಸಿಯನ್ನು ರೋಪಣಮಾಡಿ ತುಲಸಿಯನ್ನು ಸೇವಿಸಿದ್ದಾರೆ. ಇಂತಹ ಘಟನೆಗಳು ಪುರಾಣಗಳಲ್ಲಿ ಹೇರಳವಾಗಿ ದೊರಕುತ್ತವೆ. ಆದ್ದರಿಂದ ತುಲಸಿಯ ರೋಪಣ ಅತಿಪುಣ್ಯಪ್ರದವೆಂದು ಇದರಿಂದ ತಿಳಿದು ಬರುತ್ತದೆ.

**ದೇವತೆಗಳಿಂದಲೂ ತುಲಸೀಸೇವೆ**

**ತುಲಸೀಸೇವನಾದೇವ ಹೇರಂಬೋ ವಿಜಿತೇಂದ್ರಿಯಃ ।**
**ತಾರಕಂ ಸಮರೇ ಹತ್ವಾ ದೇವಸೇನಾಧಿಪೋಽಭವತ್ ॥**

ಗಣಪತಿಯು ತುಲಸಿಯನ್ನು ವಿಶಿಷ್ಟವಾದ ರೀತಿಯಲ್ಲಿ ಸೇವಿಸಿದ. ತುಲಸೀಸೇವೆಯಿಂದ ಇಂದ್ರಿಯಗಳನ್ನು ನಿಗ್ರಹಿಸಿಕೊಂಡ. ಸ್ಕಂದನೂ ಕೂಡಾ ತುಲಸಿಯನ್ನು ಸೇವಿಸಿಯೇ ತುಲಸೀಕವಚವನ್ನು ಪಠಿಸಿಯೇ ತಾರಕನನ್ನು ಸಮರದಲ್ಲಿ ಸಂಹರಿಸಿದ. ದೇವತೆಗಳ ಸೈನ್ಯಕ್ಕೆ ಅಧಿನಾಯಕನಾದ.

**ತುಲಸೀಸೇವನಾದೇವ ಪಕ್ಷಿರಾಜೋ ಮಹಾಬಲಃ ।**
**ವಿಷ್ಣುವಾಹನತಾಂ ಪ್ರಾಪ್ತೋ ಜಹಾರಾಮೃತಮುತ್ತಮಮ್ ॥**

ಗರುಡನೂ ತುಲಸಿಯ ಸೇವೆಯನ್ನು ಮಾಡಿದ. ಮಹಾಬಲಸಂಪನ್ನನಾದ. ದೇವರಿಗೆ ವಾಹನವಾಗುವ ಸೌಭಾಗ್ಯವನ್ನು ಪಡೆದುಕೊಂಡ. ಯಾರಿಂದಲೂ ತರಲು ಅಸಾಧ್ಯವಾದ ಅಮೃತವನ್ನು ಭೂಮಿಗೆ ತಂದ. ತನ್ನ ತಾಯಿಯ ಸೆರೆಯನ್ನು ಬಿಡಿಸಿದ.

ನಿಜವಾದ ತುಲಸೀಪೂಜೆ ಎಂದರೆ ತುಲಸಿಯಿಂದ ದೇವರನ್ನು ಅರ್ಚಿಸುವುದೇ ಆಗಿದೆ. ದೇವರ ಪೂಜೆಗಾಗಿ ತುಲಸಿಯನ್ನು ಬೆಳೆಸುವುದು, ತುಲಸಿಗೆ ಸೇಚನ ಮಾಡುವುದು ಇದೆಲ್ಲವೂ ದೇವರ ಪೂಜೆಯೇ ಆಗಿದೆ. ಇಷ್ಟೇ ಅಲ್ಲದೇ ತುಲಸಿಯಲ್ಲಿ ಸ್ವಯಂ ಪರಮಾತ್ಮ ಸನ್ನಿಹಿತನಾಗಿದ್ದಾನೆ. ರಮಾದೇವಿಯ ಸನ್ನಿಧಾನವೂ ಅತಿವಿಶಿಷ್ಟವಾಗಿ ತುಲಸಿಯಲ್ಲಿದೆ. ಆದ್ದರಿಂದ ಉತ್ತಮದೇವತೆಗಳಾದ ಗರುಡಾದಿಗಳೂ ತುಲಸಿಯ ಪೂಜೆ ಮಾಡಿದ್ದು ಯುಕ್ತವೇ ಆಗಿದೆ.

**ಆರಾಧ್ಯ ನಂದೀ ದೇವೇಶೀಂ ಶಂಭೋರಾರಾಧನಕ್ಷಮಃ ।**
**ಅಚಲಾ ಚಲಾಶ್ಚ ದಿಗ್ಭಾಗಾಃ ತುಲಸೀಸೇವಯಾಽನಘ ।**
**ಬಭೂವುರ್ಭೂಮಿಧರಣೇ ಪಟೀಯಾಂಸಃ ಸುರಾಯುಷಃ ॥**

ನಂದಿಯೂ ತುಲಸಿಯ ಸೇವೆಯನ್ನು ಮಾಡಿದ. ರುದ್ರದೇವರ ಆರಾಧನೆ ಮಾಡಲು ಸಮರ್ಥನಾದ. ಪರ್ವತಾಭಿಮಾನಿಗಳಾದ ದೇವತೆಗಳೆಲ್ಲರೂ ತುಲಸೀಸೇವೆಯನ್ನು ಮಾಡಿದರು. ಭೂಮಿಯನ್ನು ಧರಿಸಲು ಸಮರ್ಥರಾದರು. ದೀರ್ಘವಾದ ಆಯುಷ್ಯವು ಅವರಿಗೆ ಸಂಪನ್ನವಾಯಿತು.

**ಸರ್ವೇಷಾಮಪಿ ಜಂತೂನಾಂ ಋಷೀಣಾಮಪಿ ಯೋಗಿನಾಮ್ ।**
**ಪತಿವ್ರತಾನಾಂ ನಾರೀಣಾಂ ಸಾ ಪೂಜ್ಯಾ ಕಾರ್ಯಸಿದ್ಧಯೇ ॥**

ಋಷಿಗಳು, ಯೋಗಿಗಳು, ಪತಿವ್ರತಾಸ್ತ್ರೀಯರು ಎಲ್ಲರೂ ಸ್ವಕಾರ್ಯಸಿದ್ಧಿಗಾಗಿ ತುಲಸಿಯನ್ನು ಪೂಜಿಸಲು ಬೇಕು. ತುಲಸೀಪೂಜೆಯಿಂದ ಎಲ್ಲರ ಎಲ್ಲ ಅಭೀಷ್ಟಗಳು ಸುಸಂಪನ್ನವಾಗುತ್ತವೆ.

**ರಂಭಾ ವಾಽಪ್ಸರಸಾಂ ಮಧ್ಯೇ ತುಲಸೀಸೇವಯಾ ಪುರಾ ।**
**ದೇವೈರ್ದತ್ತಂ ವರಂ ಲಬ್ಧ್ವಾ ದೇವೇಂದ್ರಪ್ರಿಯತಾಮಗಾತ್ ।**
**ಅತಶ್ಚ ತುಲಸೀ ಪೂಜ್ಯಾ ವಿಶೇಷೇಣ ಹರೇರ್ದಿನೇ ॥**

ಅಪ್ಸರೆಯಾದ ರಂಭೆಯು ತುಲಸಿಯನ್ನು ವಿಶಿಷ್ಟವಾಗಿ ಸೇವಿಸಿದಳು. ಅದರ ಫಲವಾಗಿ ಅಪ್ಸರಾಸ್ತ್ರೀಯರಲ್ಲಿ ಉತ್ತಮಳಾದಳು. ದೇವತೆಗಳಿಂದ ವರಗಳನ್ನು ಪಡೆದಳು. ದೇವೇಂದ್ರನಿಗೆ ಪ್ರಿಯಳಾದಳು. ಆದ್ದರಿಂದ ತುಲಸಿಯನ್ನು ವಿಶೇಷವಾಗಿ ಪ್ರತಿನಿತ್ಯವೂ ಮೂರು ಕಾಲದಲ್ಲಿ ಪೂಜಿಸಬೇಕು. ದ್ವಾದಶಿಯ ದಿನದಲ್ಲಿ ಮತ್ತಿಷ್ಟು ಹೆಚ್ಚಿನ ಸಾಧನೆಗಳಿಂದ ತುಲಸಿಯನ್ನು ಪೂಜಿಸಬೇಕು.

**ತುಲಸೀಸೇವೆ**

ಆರು ರೀತಿಯಾಗಿ ತುಲಸಿಯ ಸೇವೆಯನ್ನು, ಆಯಾ ಸೇವೆಗೆ ವಿಶಿಷ್ಟವಾದ ಫಲವನ್ನು ವಾಯುಪುರಾಣದಲ್ಲಿ ಹೇಳಿದ್ದಾರೆ-

**ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃ ಪಾವನೀ**
**ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ।**
**ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ**
**ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥**

೧. ತುಲಸಿಯ ದರ್ಶನದಿಂದ ಹಿಂಡು ಪಾಪಗಳೆಲ್ಲ ತುಂಡಾಗಿ ಹೋಗುತ್ತವೆ.

೨. ತುಲಸಿಯ ಸ್ಪರ್ಶದಿಂದ ತನುವೆಲ್ಲ ಪುನೀತವಾಗುತ್ತದೆ.

೩. ಅಭಿವಂದನೆ ಮಾಡುವುದರಿಂದ ಅಂದರೆ ತುಲಸಿಗೆ ಅಭಿಮುಖವಾಗಿ ನಿಂತು ನಮಸ್ಕರಿಸುವುದರಿಂದ ರೋಗ-ರುಜಿನಗಳೆಲ್ಲ ದೂರವಾಗುತ್ತವೆ.

೪. ತುಲಸಿಯನ್ನು ನೀರಿನಿಂದ ಸೇಚನ ಮಾಡಿದರೇ ಯಮಭಯವು ಸರ್ವಥಾ ಇರುವುದಿಲ್ಲ.

೫. ತುಲಸಿಯನ್ನು ಬೆಳೆಸುವುದರಿಂದ ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಲ್ಲಿ ಭಕ್ತಿಯು ಬೆಳೆಯುತ್ತದೆ.

೬. ತುಲಸಿಯನ್ನು ಪರಮಾತ್ಮನ ಪಾದಗಳಲ್ಲಿ ಹಾಕಿ ದೇವರ ಚರಣಗಳನ್ನು ಅರ್ಚಿಸುವುದರಿಂದ ಮುಕ್ತಿಯೇ ಲಭ್ಯವಾಗುತ್ತದೆ.

ಈ ರೀತಿಯಾದ ಅತಿವಿಶಿಷ್ಟವಾದ ಫಲಗಳನ್ನು ನೀಡಿ ಸಾಧಕರನ್ನು ಉದ್ಧಾರಮಾಡುತ್ತಾಳೆ ತುಳಸಿ. ಅಂತಹ ತುಳಸಿಗೆ ನಾವು ಮಾಡುವುದು ನಮಸ್ಕಾರ ಮಾತ್ರ. ಹೀಗಾಗಿ ಈ ನಮಸ್ಕಾರ ಅತಿಶುದ್ಧವಾಗಿರಬೇಕು. ಕಾಮನೆಗಳಿಂದ ಅಶುದ್ಧವಾಗಿರಬಾರದು.

**ಅಷ್ಟವಿಧವಾದ ತುಲಸೀಸೇವೆ**

ಸಾಧ್ಯವಾದಷ್ಟು ತುಲಸಿಯ ಸೇವೆಯನ್ನು ಮಾಡುತ್ತ ಇರಬೇಕು. ಆದ್ದರಿಂದ ಹಿಂದೆ ಆರುವಿಧವಾದ ಸೇವೆಯನ್ನು ತಿಳಿಸಿದ್ದಾರೆ. ನವಧಾ ಭಕ್ತಿಯನ್ನು ಮಾಡಬೇಕೆಂದು ಮತ್ತೊಂದು ಸ್ಮೃತಿಯಲ್ಲಿ ತಿಳಿಸುತ್ತಾರೆ. ಸ್ಮೃತ್ಯಂತರದಲ್ಲಿ ಅಷ್ಟವಿಧವಾದ ಸೇವೆಯನ್ನು ಈ ರೀತಿಯಾಗಿ ತಿಳಿಸಿದ್ದಾರೆ.

**ದೃಷ್ಟಾ ಸ್ಪೃಷ್ಟಾ ತಥಾ ಧ್ಯಾತಾ ಕೀರ್ತಿತಾ ನಮಿತಾಽರ್ಚಿತಾ ।**
**ರೋಪಿತಾ ಸೇವಿತಾ ನಿತ್ಯಂ ಪಾಪಂ ಹಂತಿ ಯುಗಾರ್ಜಿತಮ್ ॥**

**ಅಷ್ಟಧಾ ತುಲಸೀ ಯೈಸ್ತು ಸೇವಿತಾ ದ್ವಿಜಸತ್ತಮ ।**
**ಯುಗಕೋಟಿಸಹಸ್ರಾಣಿ ತೇ ವಸಂತಿ ಹರೇಃ ಗೃಹೇ ॥**

೧. ತುಲಸಿಯನ್ನು ಭಕ್ತಿಯಿಂದ ನೋಡಬೇಕು. ೨. ತುಲಸಿಯ ಸ್ಪರ್ಶನ ಮಾಡಬೇಕು. ೩. ತುಲಸಿಯ ಧ್ಯಾನ ಮಾಡಬೇಕು. ೪. ತುಲಸೀನಾಮವನ್ನು ಭಕ್ತಿಪೂರ್ವಕವಾಗಿ ಕೀರ್ತಿಸಬೇಕು. ೫. ತುಲಸಿಗೆ ನಮಸ್ಕರಿಸಬೇಕು. ೬. ತುಲಸಿಯನ್ನು ಪುಷ್ಪಾದಿಗಳಿಂದ ಅರ್ಚಿಸಬೇಕು. (ತುಲಸಿಯಿಂದ ದೇವರನ್ನು ಅರ್ಚಿಸಬೇಕು) ೭. ತುಲಸಿಯನ್ನು ಬೆಳೆಸಬೇಕು. ೮. ತುಲಸಿಯನ್ನು ನಿತ್ಯವೂ ಸ್ವೀಕರಿಸಬೇಕು. ಹೀಗೆ ಪ್ರತಿನಿತ್ಯ ತುಲಸಿಯ ಸೇವೆಯನ್ನು ಮಾಡುವುದರಿಂದ ಯುಗ-ಯುಗಗಳಿಂದ ಸಂಪಾದಿಸಿದ ಪಾಪಗಳೆಲ್ಲ ತೊಲಗಿಹೋಗುತ್ತವೆ.

**ನವವಿಧ ತುಲಸೀಭಕ್ತಿ**

**ದೃಷ್ಟಾ ಸ್ಪೃಷ್ಟಾಽಥವಾ ಧ್ಯಾತಾ ನಮಿತಾ ಕೀರ್ತಿತಾ ಶ್ರುತಾ ।**
**ರೋಪಿತಾ ಸೇಚಿತಾ ನಿತ್ಯಂ ತುಲಸೀ ಪೂಜಿತಾ ಶುಭಾ ॥**

**ನವಧಾ ತುಲಸೀಭಕ್ತಿಂ ಯೇ ಕುರ್ವಂತಿ ದಿನೇ ದಿನೇ ।**
**ಯುಗಕೋಟಿಸಹಸ್ರಾಣಿ ತೇ ವಸಂತಿ ಹರೇಃ ಗೃಹೇ ॥**

೧. ಪ್ರತಿನಿತ್ಯ ಪ್ರಾತಃಕಾಲ, ಸಾಯಂಕಾಲ ಮತ್ತು ಪ್ರಯಾಣದಲ್ಲಿ, ಸತ್ಕರ್ಮಾಚರಣೆ ಮೊದಲಾದ ವಿಶಿಷ್ಟವಾದ ಪ್ರಸಂಗಗಳಲ್ಲಿ ತುಲಸಿಯ ದರ್ಶನ

ಮಾಡಿಕೊಳ್ಳಬೇಕು. ೨. ತುಲಸಿಯ ಸ್ಪರ್ಶವನ್ನು ಮಾಡಬೇಕು. ೩. ತುಲಸಿಯ ಧ್ಯಾನವನ್ನು ಮಾಡಬೇಕು. ೪. ತುಲಸಿಗೆ ನಮಸ್ಕರಿಸಬೇಕು. ೫. ತುಲಸಿಯ ನಾಮಗಳನ್ನು ಉಚ್ಚರಿಸುತ್ತಾ ನಿತ್ಯವೂ ತುಲಸಿಯನ್ನು ಸ್ತುತಿಸಬೇಕು. ೬. ತುಲಸಿಯ ಮಹಿಮೆಯನ್ನು ಕೇಳಬೇಕು. ೭. ತುಲಸಿಯನ್ನು ದೇವರಿಗಾಗಿ ಬೆಳೆಸಬೇಕು. ೮. ತುಲಸಿಗೆ ಯಥಾಯೋಗ್ಯವಾಗಿ ನೀರನ್ನು ಹಾಕಬೇಕು. ೯. ಧೂಪ-ದೀಪ-ನೈವೇದ್ಯ-ಪ್ರದಕ್ಷಿಣ-ನಮಸ್ಕಾರಗಳನ್ನು ಸಮರ್ಪಿಸುವ ಮೂಲಕ ಪುರುಷರು ಮತ್ತು ಸ್ತ್ರೀಯರು ಪ್ರತಿನಿತ್ಯ ಪ್ರಾತಃಕಾಲ ಮತ್ತು ಸಾಯಂಕಾಲ ತುಲಸಿಯ ಪೂಜೆಯನ್ನು ತಪ್ಪದೇ ಮಾಡಬೇಕು.

ಹೀಗೆ ಪ್ರತಿನಿತ್ಯ ನವವಿಧವಾಗಿ ತುಲಸಿಯ ಭಕ್ತಿಯನ್ನು ಮಾಡುವವರು ಹರಿಯ ಮಂದಿರವನ್ನು ಸೇರಿ ಚಿರಕಾಲ ಸುಖಿಸುತ್ತಾರೆ.

ಇವುಗಳಲ್ಲಿ ಸ್ತ್ರೀ-ಪುರುಷಭೇದದಿಂದ, ಬ್ರಾಹ್ಮಣಾದಿವರ್ಣಭೇದದಿಂದ ಯೋಗ್ಯವಾದ ಉಪಚಾರಗಳನ್ನೇ ಮಾಡಬೇಕು. ಇದನ್ನು ತಿಳಿಯದೇ ಮಾಡಿದ ಉಪಚಾರ ಅಪಚಾರವೇ ಆಗುತ್ತದೆ. ಇದನ್ನು ಸರ್ವದಾ ಗಮನದಲ್ಲಿರಿಸಿಕೊಳ್ಳಬೇಕು. ತುಲಸಿಯಿಂದ ದೇವರನ್ನು ಅರ್ಚಿಸುವ ಅಧಿಕಾರ ಸ್ತ್ರೀಯರಿಗೆ ಮತ್ತು ಶೂದ್ರರಿಗೆ ಇರುವುದಿಲ್ಲ. ಮತ್ತು ಚಯನ (ತುಲಸಿಯನ್ನು ಬಿಡಿಸುವುದು) ಮಾಡುವ ಅಧಿಕಾರವೂ ಇರುವುದಿಲ್ಲ. ಈ ವಿಷಯದಲ್ಲಿ ಎಲ್ಲರೂ ಜಾಗರೂಕರಾಗಿ ಇರಬೇಕು.

**ತುಲಸೀಪೂಜಾ**

**ಪ್ರಾತಃ ಸಂಧ್ಯಾವಿಧಿಂ ಕೃತ್ವಾ ಸ್ನಾನಪೂರ್ವಂ ದಿನೇ ದಿನೇ ।**
**ಗಾಯತ್ರ್ಯಷ್ಟಶತಂ ಜಪ್ತ್ವಾ ತುಲಸೀಂ ಪೂಜಯೇತ್ತತಃ ।**
**ಪ್ರಾಙ್ಮುಖೋದಙ್ಮುಖೋ ವಾಽಪಿ ಸ್ಥಿತ್ವಾ ಪ್ರಯತಮಾನಸಃ ॥**

ಪ್ರತಿನಿತ್ಯ ಪ್ರಾತಃಕಾಲದಲ್ಲಿ ಸ್ನಾನ ಮಾಡಿ ಸಂಧ್ಯಾವಂದನವನ್ನು ಮುಗಿಸಬೇಕು. ನೂರೆಂಟು ಗಾಯತ್ರಿಯನ್ನು ಜಪಿಸಬೇಕು. ನಂತರ ತುಲಸೀಪೂಜೆಯನ್ನು ಮಾಡಬೇಕು. ಪೂರ್ವಕ್ಕೆ ಅಥವಾ ಉತ್ತರಕ್ಕೆ ಅಭಿಮುಖವಾಗಿರಬೇಕು. ಪೂಜೆ ಮಾಡುವಾಗ ಮನಸ್ಸನ್ನು ನಿಯಂತ್ರಣದಲ್ಲಿಟ್ಟುಕೊಂಡಿರಬೇಕು. ತುಲಸಿಗೆ ಧ್ಯಾನಾವಾಹನಾದಿ ಷೋಡಶೋಪಚಾರಗಳನ್ನು ಸಮರ್ಪಿಸಬೇಕು. ಧ್ಯಾನಾದಿಗಳನ್ನು ಸಮರ್ಪಿಸುವಾಗ ಈ ಮಂತ್ರಗಳನ್ನು ಹೇಳುತ್ತಾ ಅರ್ಥವನ್ನು ಚಿಂತಿಸಬೇಕು.

**ಧ್ಯಾಯೇಚ್ಚ ತುಲಸೀಂ ದೇವೀಂ ಶುಭಾಂ ಕಮಲಲೋಚನಾಮ್ ।**
**ಪ್ರಸನ್ನಾಂ ಪದ್ಮಕಲ್ಹಾರವರಾಭಯಚತುರ್ಭುಜಾಮ್ ॥೬॥**

**ಕಿರೀಟಹಾರಕೇಯೂರಕುಂಡಲಾದಿವಿಭೂಷಿತಾಮ್ ।**
**ಧವಲಾಂಶುಕಸಂಯುಕ್ತಾಂ ಪದ್ಮಾಸನನಿಷೇದುಷೀಮ್ ॥೭॥**

**ಧ್ಯಾನಂ ಸಮರ್ಪಯಾಮಿ ।**

ಕಮಲದಂತೆ ವಿಶಾಲವಾದ ನೇತ್ರಗಳುಳ್ಳವಳು, ಪರಮಮಂಗಳ ಸ್ವರೂಪಿಣಿ ಶ್ರೀತುಲಸಿ. ಪದ್ಮ,ಕಲ್ಹಾರಗಳನ್ನು ಎರಡು ಕೈಯಲ್ಲಿ ಧರಿಸಿದ್ದಾಳೆ. ವರ, ಅಭಯ ಮುದ್ರೆಗಳನ್ನು ಮತ್ತೆರಡು ಕೈಗಳಿಂದ ಧರಿಸಿದ್ದಾಳೆ. ಶುಭ್ರವಾದ ವಸ್ತ್ರಗಳನ್ನು ಧರಿಸಿದ್ದಾಳೆ. ಪದ್ಮಾಸನದಲ್ಲಿ ವಿರಾಜಮಾನಳಾಗಿದ್ದಾಳೆ. ಇಂತಹ ಶ್ರೀತುಲಸೀದೇವಿಯನ್ನು ಧ್ಯಾನ ಮಾಡುತ್ತೇನೆ. ಎಂಬುದಾಗಿ ಚಿಂತಿಸುತ್ತಾ ತುಲಸಿಯ ಧ್ಯಾನವನ್ನು ಮಾಡಬೇಕು.

**ದೇವಿ ತ್ರೈಲೋಕ್ಯಜನನಿ ಸರ್ವಲೋಕೈಕಪಾವನಿ ।**
**ಆಗಚ್ಛ ಭಗವತ್ಪ್ರೀತೇ ಪ್ರಸೀದ ತುಲಸಿ ಪ್ರಿಯೇ ॥**

**ಆವಾಹನಂ ಸಮರ್ಪಯಾಮಿ ।**

ತುಲಸಿ ಮೂರು ಲೋಕದ ಮಾತೆ. ಎಲ್ಲ ಲೋಕಗಳನ್ನು ಪಾವನಗೊಳಿಸುವವಳು. ಶ್ರೀಹರಿಯ ಪ್ರೀತಿಗೆ ಪಾತ್ರಳು. ಶ್ರೀಹರಿಯ ಭಕ್ತಳು ನೀನು. ನಾನು ನಿನ್ನ ಭಕ್ತ. ಈ ವೃಕ್ಷದಲ್ಲಿ ನೀನು ಸನ್ನಿಹಿತಳಾಗು. ಇಲ್ಲಿಗೆ ಬಾ. ನನ್ನನ್ನು ಅನುಗ್ರಹಿಸು. ಆವಾಹನವನ್ನು ನಾನು ನಿನಗೆ ಸಮರ್ಪಿಸುತ್ತಿದ್ದೇನೆ.

**ಸರ್ವಲೋಕಮಯೀ ದೇವಿ ಸರ್ವದಾ ವಿಷ್ಣುವಲ್ಲಭೇ ।**
**ದೇವಿ ಸ್ವರ್ಣಮಯಂ ದಿವ್ಯಂ ಗೃಹಾಣಾಸನಮವ್ಯಯೇ ॥**

**ಆಸನಂ ಸಮರ್ಪಯಾಮಿ ।**

ಎಲ್ಲ ಲೋಕದ ಜನರಿಂದ ಪೂಜೆಗೊಳ್ಳುತ್ತಾ ಎಲ್ಲ ಲೋಕಗಳಲ್ಲಿಯೂ ನೀನು ವಾಸವಾಗಿರುವಿ. ಯಾವಾಗಲೂ ಶ್ರೀಹರಿಯ ಪ್ರೀತಿಗೆ ಪಾತ್ರಳು. ಶ್ರೀಹರಿಯ ಕೊರಳಲ್ಲಿ ಸ್ಥಾನವನ್ನು ಸಂಪಾದಿಸಿದವಳು. ಇರಲು ನಿನಗೆ ಶ್ರೀಹರಿಯೇ ತನ್ನ ಕೊರಳನ್ನು ಆಸನವನ್ನಾಗಿ ನೀಡಿದ್ದಾನೆ. ನಿನಗೆ ನಾಶವಿಲ್ಲ. ಸುವರ್ಣದ ಆಸನವನ್ನು ನಿನಗೆ ನಾನು ಸಮರ್ಪಿಸುತ್ತಿದ್ದೇನೆ. ನಾನು ನೀಡಿದ ಈ ದರ್ಭಾಸನವೇ ಸುವರ್ಣದ

ಆಸನವೆಂದು ಭಾವಿಸು. ಮಾನಸಿಕವಾಗಿ ನಿರ್ಮಿಸಿದ ಸುವರ್ಣಮಯವಾದ ಆಸನವಿದು. ಇದು ಅತಿ ದಿವ್ಯವಾದುದು. ಈ ಆಸನವನ್ನು ಸ್ವೀಕರಿಸು. ಇಲ್ಲಿ ಆಸೀನಳಾಗು. ನಿನಗೆ ಆಸನವನ್ನು ಸಮರ್ಪಿಸುತ್ತೇನೆ.

**ಸರ್ವದೇವಮಯಾಕಾರೇ ಸರ್ವದೇವನಮಸ್ಕೃತೇ ।**
**ದತ್ತಂ ಪಾದ್ಯಂ ಗೃಹಾಣೇದಂ ತುಲಸಿ ತ್ವಂ ಪ್ರಸೀದ ಮೇ ॥**

**ಪಾದ್ಯಂ ಸಮರ್ಪಯಾಮಿ ।**

ನಿನ್ನಲ್ಲಿ ಎಲ್ಲ ದೇವತೆಗಳು ಸನ್ನಿಹಿತರಾಗಿದ್ದಾರೆ. ಎಲ್ಲ ದೇವತೆಗಳೂ ನಿನ್ನಡಿಯಲ್ಲಿ ಮುಡಿ ಇಟ್ಟು ನಮಸ್ಕರಿಸುತ್ತಾರೆ. ಹೇ ತುಲಸಿದೇವಿ ! ನಿನಗೆ ಈ ಪಾದ್ಯವನ್ನು ಸಮರ್ಪಿಸುತ್ತೇನೆ. ಇದನ್ನು ಸ್ವೀಕರಿಸು. ನನ್ನಲ್ಲಿ ಪ್ರಸನ್ನಳಾಗು.

**ಸರ್ವತೀರ್ಥಮಯಾಕಾರೇ ಸರ್ವಾಗಮನಿಷೇವಿತೇ ।**
**ಇದಮರ್ಘ್ಯಂ ಗೃಹಾಣ ತ್ವಂ ದೇವಿ ದೈತ್ಯಾಂತಕಪ್ರಿಯೇ ॥**

**ಅರ್ಘ್ಯಂ ಸಮರ್ಪಯಾಮಿ ।**

ಗಂಗಾದಿ ಎಲ್ಲ ತೀರ್ಥಗಳು ನಿನ್ನಲ್ಲಿ ಸನ್ನಿಹಿತವಾಗಿವೆ. ಎಲ್ಲ ಆಗಮಗಳು ನಿನ್ನನ್ನು ಹೊಗಳುವ ಮೂಲಕ ನಿನ್ನ ಸೇವೆಯನ್ನು ಮಾಡುತ್ತವೆ. ದೈತ್ಯರನ್ನು ನಾಶಮಾಡುವ ಶ್ರೀಹರಿಯ ಪ್ರೀತಿಗೆ ನೀನು ಪಾತ್ರಳಾಗಿರುವಿ. ಈ ಅರ್ಘ್ಯವನ್ನು ನೀನು ಸ್ವೀಕರಿಸು.

**ಸರ್ವಲೋಕಸ್ಯ ರಕ್ಷಾರ್ಥಂ ಸದಾ ಸನ್ನಿಧಿಕಾರಿಣೆ ।**
**ಗೃಹಾಣ ತುಲಸಿ ಪ್ರೀತ್ಯಾ ಇದಮಾಚಮನೀಯಕಮ್ ॥**

**ಆಚಮನೀಯಂ ಸಮರ್ಪಯಾಮಿ ।**

ಎಲ್ಲ ಲೋಕಗಳಲ್ಲಿಯ ಜನರನ್ನು ಸಂರಕ್ಷಿಸುವುದಕ್ಕಾಗಿ ಎಲ್ಲ ಲೋಕಗಳಲ್ಲಿ ನೀನು ಸನ್ನಿಹಿತಳಾಗಿರುವಿ. ಈ ಜನ ಅಲ್ಪ. ಈ ಜಲವೂ ಅಲ್ಪ. ಪ್ರೀತಿಯಿಂದ ಆಚಮನಕ್ಕಾಗಿ ಈ ಜಲವನ್ನು ಸ್ವೀಕರಿಸು. ಆಚಮನವನ್ನು ಸಮರ್ಪಿಸುತ್ತೇನೆ.

**ಗಂಗಾದಿಭ್ಯೋ ನದೀಭ್ಯಶ್ಚ ಸಮಾನೀತಮಿದಂ ಜಲಮ್ ।**
**ಸ್ನಾನಾರ್ಥಂ ತುಲಸಿ ಸ್ವಚ್ಛಂ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥**

**ಸ್ನಾನಂ ಸಮರ್ಪಯಾಮಿ ।**

ಗಂಗಾದಿನದಿಗಳಿಂದ ಈ ಜಲವನ್ನು ನಿನಗಾಗಿ ನಾನು ತಂದಿದ್ದೇನೆ. ನಾನು ತಂದ ಈ ಜಲದಲ್ಲಿ ಗಂಗಾದಿ ಎಲ್ಲ ನದಿಗಳನ್ನು ಸ್ಮರಿಸಿದ್ದೇನೆ. ಜಲಗತವಾದ

ಶ್ರೀಹರಿಯ ಮೂರ್ತಿಗಳನ್ನು ಚಿಂತಿಸಿದ್ದೇನೆ. ಶ್ರೀಹರಿಯ ಸನ್ನಿಧಿಯಿಂದ ಈ ಜಲ ಅತ್ಯಂತಸ್ವಚ್ಛವಾಗಿದೆ. ಈ ಜಲವನ್ನು ಸ್ನಾನಕ್ಕಾಗಿ ಸ್ವೀಕರಿಸು. ನನ್ನಲ್ಲಿಯ ಪ್ರೀತಿಯಿಂದ ಈ ಜಲವನ್ನು ಸ್ವೀಕರಿಸು. ನನ್ನನ್ನು ಅನುಗ್ರಹಿಸು.

**ಕ್ಷೀರೋದಮಥನೋದ್ಭೂತೇ ಚಂದ್ರಲಕ್ಷ್ಮೀಸಹೋದರಿ ।**
**ಗೃಹ್ಯತಾಂ ಪರಿಧಾನಾರ್ಥಮಿದಂ ಕ್ಷೌಮಾಂಬರಂ ಶುಭಮ್ ॥**

**ವಸ್ತ್ರಂ ಸಮರ್ಪಯಾಮಿ ।**

ಕ್ಷೀರಸಾಗರದ ಮಥನಪ್ರಸಂಗದಲ್ಲಿ ನೀನು ಜನಿಸಿರುವಿ. ಅತಿಧವಲನಾದ ಚಂದ್ರ ಮತ್ತು ಅತ್ಯಂತ ಧವಲಳಾದ ಲಕ್ಷ್ಮೀದೇವಿಯರು ನಿನ್ನ ಸಹೋದರ ಸಹೋದರಿಯರು. ನಿನಗಾಗಿ ಈ ರೇಶ್ಮೆಯ ವಸ್ತ್ರವನ್ನು ಸಮರ್ಪಿಸುತ್ತೇನೆ. ದೇವರಿಗೆ ಸಮರ್ಪಿತವಾದ ವಸ್ತ್ರವಿದು. ಹೀಗಾಗಿ ಪರಮಶುಭ್ರವಾಗಿದೆ. ಉಡುವುದಕ್ಕಾಗಿ ಈ ವಸ್ತ್ರವನ್ನು ಸ್ವೀಕರಿಸು.

**ಶ್ರೀಗಂಧಂ ಕುಂಕುಮಂ ದಿವ್ಯಂ ಕರ್ಪೂರಾಗರುಸಂಯುತಮ್ ।**
**ಕಲ್ಪಿತಂ ತೇ ಮಹಾದೇವಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥**

**ಗಂಧಂ ಸಮರ್ಪಯಾಮಿ ।**

ಕೇಸರ, ಕರ್ಪೂರ, ಅಗರುಗಳ ಜೊತೆ ಶ್ರೀಗಂಧವನ್ನು ತೇಯ್ದಿದ್ದೇನೆ. ಶ್ರೀಹರಿಯ ನಿರ್ಮಾಲ್ಯವಿದು. ಅತಿದಿವ್ಯವಾಗಿದೆ. ನಿನಗಾಗಿ ಈ ಶ್ರೀಗಂಧವನ್ನು ಕಲ್ಪಿಸಿದ್ದೇನೆ. ನನ್ನಲ್ಲಿಯ ವಾತ್ಸಲ್ಯದಿಂದ ಈ ಶ್ರೀಗಂಧವನ್ನು ಸ್ವೀಕರಿಸು.

**ನೀಲೋತ್ಪಲಸುಕಲ್ಹಾರಮಾಲತ್ಯಾದೀನಿ ಶೋಭನೇ ।**
**ಪದ್ಮಾದಿಗಂಧವಂತೀಶೇ ಪುಷ್ಪಾಣಿ ಪ್ರತಿಗೃಹ್ಯತಾಮ್ ॥**

**ಪುಷ್ಪಂ ಸಮರ್ಪಯಾಮಿ ।**

ಸರ್ವಸಮರ್ಥಳು ನೀನು. ಶುಭಸ್ವರೂಪಳಾಗಿರುವಿ. ನೀಲಕಮಲ, ಕಲ್ಹಾರ, ಮಾಲತೀ ಮೊದಲಾದ ಸುಗಂಧಭರಿತವಾದ ಪುಷ್ಪಗಳನ್ನು ನಿನಗಾಗಿ ತಂದಿಟ್ಟಿದ್ದೇನೆ. ಇವುಗಳನ್ನು ಸ್ವೀಕರಿಸು.

**ಧೂಪಂ ಗೃಹಾಣ ದೇವೇಶಿ ಮನೋಹಾರಿ ಸುಮಂಗಲಮ್ ।**
**ಆಜ್ಯಮಿಶ್ರಂ ತು ತುಲಸಿ ಭಕ್ತಸ್ಯಾಭೀಷ್ಟದಾಯಿನಿ ॥**

**ಧೂಪಂ ಸಮರ್ಪಯಾಮಿ ।**

ಭಕ್ತರ ಅಭೀಷ್ಟಗಳನ್ನು ಪೂರೈಸುವವಳು ನೀನು. ಹೀಗಾಗಿ ದೇವತೆಗಳಿಗೆ ಪೂಜ್ಯಳಾಗಿರುವಿ. ಮನೋಹರವಾದ ಧೂಪವನ್ನು ನಿನಗಾಗಿ ಸಂಪಾದಿಸಿದ್ದೇನೆ. ಈ ಧೂಪವು ಅತ್ಯಂತ ಮನೋಹಾರಿಯಾಗಿದೆ. ಪರಮಮಂಗಳದಾಯಕವಾಗಿದೆ. ಆಜ್ಯಮಿಶ್ರವಾದ ಈ ಧೂಪವನ್ನು ನಿನಗೆ ಸಮರ್ಪಿಸುತ್ತೇನೆ. ಇದನ್ನು ಸ್ವೀಕರಿಸು.

**ಅಜ್ಞಾನತಿಮಿರಾಂಧಸ್ಯ ಜ್ಞಾನದೀಪಪ್ರದಾಯಿನಿ ।**
**ತ್ವಯಾ ತುಲಸಿ ಪ್ರೀತ್ಯರ್ಥಂ ದೀಪೋಽಯಂ ಪ್ರತಿಗೃಹ್ಯತಾಮ್ ॥**

**ದೀಪಂ ಸಮರ್ಪಯಾಮಿ ।**

ಅತಿನಿಬಿಡವಾದ ಅಜ್ಞಾನಾಂಧಕಾರದಲ್ಲಿದ್ದವನು ನಾನು. ಜ್ಞಾನವೆಂಬ ದೀಪವನ್ನು ಬೆಳಗಿಸುವವಳು ನೀನು. ನಿನಗೆ ಈ ದೀಪವನ್ನು ನೀಡುತ್ತೇನೆ. ಪ್ರೀತಿಯಿಂದ ಈ ದೀಪವನ್ನು ಸ್ವೀಕರಿಸು. ಜ್ಞಾನದೀಪವನ್ನು ನನ್ನಲ್ಲಿ ಬೆಳಗಿಸು.

**ನಮಸ್ತೇ ಜಗತಾಂ ನಾಥೇ ಪ್ರಾಣಿನಾಂ ಪ್ರಿಯದರ್ಶನೇ ।**
**ಯಥಾಶಕ್ತಿ ಮಯಾ ದತ್ತಂ ನೈವೇದ್ಯಂ ಪ್ರತಿಗೃಹ್ಯತಾಮ್ ॥**

**ನೈವೇದ್ಯಂ ಸಮರ್ಪಯಾಮಿ ।**

ಎಲ್ಲ ಪ್ರಾಣಿಗಳಿಗೂ ನೀನು ಪ್ರಿಯಳಾಗಿರುವಿ. ಜಗತ್ತಿಗೆಲ್ಲ ನೀನು ಒಡತಿಯಾಗಿರುವಿ. ನನ್ನ ಶಕ್ತಿಗೆ ಅನುಗುಣವಾಗಿ ನಿನಗೆ ನೈವೇದ್ಯವನ್ನು ಸಂಪಾದಿಸಿದ್ದೇನೆ. ಅದನ್ನು ಸ್ವೀಕರಿಸು.

**ನಮೋ ಭಗವತಿ ಶ್ರೇಷ್ಠೇ ನಾರಾಯಣಿ ಜಗನ್ಮಯಿ ।**
**ತುಲಸಿ ತ್ವರಯಾ ದೇವಿ ಪಾನೀಯಂ ಪ್ರತಿಗೃಹ್ಯತಾಮ್ ॥**

**ಪಾನೀಯಂ ಸಮರ್ಪಯಾಮಿ ।**

ಜಗದೀಶ್ವರನಾಗಿದ್ದಾನೆ ಪರಮಾತ್ಮ. ಐಶ್ವರ್ಯ, ವೀರ್ಯ, ಯಶಸ್ಸು, ಸಂಪತ್ತು, ಜ್ಞಾನ, ವೈರಾಗ್ಯ ಎಂಬ ಆರು ಐಶ್ವರ್ಯಗಳನ್ನು ನಿನಗೆ ನೀಡಿದ್ದಾನೆ. ಜಗತ್ತಿನಲ್ಲಿ ಎಲ್ಲಕಡೆಗೆ ನೀನು ವ್ಯಾಪ್ತಳಾಗಿರುವಿ. ನಾರಾಯಣ ನಿನ್ನನ್ನು ಪ್ರೀತಿಯಿಂದ ಪರಿಗ್ರಹಿಸಿದ್ದಾನೆ. ಅರ್ಚನೆಸಾಧನಗಳಲ್ಲಿ ನೀನು ಉತ್ತಮಳಾಗಿರುವಿ. ನಾನು ನೀಡಿರುವ ಈ ಪಾನೀಯವನ್ನು ಆನಂದದಿಂದ ಸ್ವೀಕರಿಸು.

**ಅಮೃತೇಽಮೃತಸಂಭೂತೇ ತುಲಸ್ಯಮೃತರೂಪಿಣಿ ।**
**ಕರ್ಪೂರಾದಿಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥**

**ತಾಂಬೂಲಂ ಸಮರ್ಪಯಾಮಿ ।**

ಹೇ ತುಲಸಿ ಮಾತೆ ! ಅಮೃತವೇ ನಿನ್ನ ತವರು ಮನೆ. ಅಮೃತಸ್ವರೂಪಿಣಿ ನೀನು. ಹೀಗಾಗಿ ನಿನ್ನ ನಾಮ ಅಮೃತಾ. ಕರ್ಪೂರಾದಿಸಾಧನಗಳಿಂದ ಈ ತಾಂಬೂಲವನ್ನು ಸಿದ್ಧಪಡಿಸಿದ್ದೇನೆ. ಇದನ್ನು ಸ್ವೀಕರಿಸು.

**ದಕ್ಷಿಣೇ ದಕ್ಷಿಣಕರೇ ತ್ವದ್ಭಕ್ತಾನಾಂ ಪ್ರಿಯಂಕರಿ ।**
**ಕರೋಮಿ ತೇ ಸದಾ ಭಕ್ತ್ಯಾ ವಿಷ್ಣುಕಾಂತೇ ಸದಕ್ಷಿಣಾಮ್ ॥**

**ದಕ್ಷಿಣಾಂ ಸಮರ್ಪಯಾಮಿ ।**

ಸರ್ವಸಮರ್ಥಳಾಗಿರುವಿ ನೀನು. ನಿನ್ನ ಭಕ್ತರಿಗೆ ಪ್ರಿಯಕರಳಾಗಿದ್ದಿ. ಎಲ್ಲರಿಗೂ ದಕ್ಷಿಣಕರಳಾಗಿದ್ದೀ. ವಿಷ್ಣುವಿನ ಮಡದಿ ನೀನು. ಭಕ್ತಿಯಿಂದ ನಿನಗೆ ದಕ್ಷಿಣೆಯನ್ನು ಸಮರ್ಪಿಸುತ್ತೇನೆ. ಅದನ್ನು ಸ್ವೀಕರಿಸು.

**ಪ್ರದಕ್ಷಿಣಾಂ ಕರೋಮಿ ತ್ವಾಂ ವೃಂದಾವನವಿಹಾರಿಣಿ ।**
**ವೃಂದಾರಕಪ್ರಿಯೇ ದೇವಿ ತುಲಸಿ ಭಕ್ತವತ್ಸಲೇ ॥**

**ಪ್ರದಕ್ಷಿಣಾಂ ಸಮರ್ಪಯಾಮಿ ।**

ಯಾವಾಗಲೂ ವೃಂದಾವನದಲ್ಲಿ ವಿಹರಿಸುವವಳು ನೀನು. ವೃಂದಾರಕರೆನಿಸಿದ ದೇವತೆಗಳಿಗೆ ಪ್ರಿಯಳಾಗಿರುವಿ. ಭಕ್ತರಲ್ಲಿ ನೀನು ತೋರುವ ವಾತ್ಸಲ್ಯ ಅಪರೂಪವಾದದ್ದು. ನಿನಗೆ ಪ್ರದಕ್ಷಿಣೆಗಳನ್ನು ಹಾಕುತ್ತೇನೆ. ಅವುಗಳನ್ನು ಸ್ವೀಕರಿಸು.

**ನಮೋ ನಮೋ ಜಗದ್ಧಾತ್ರ್ಯೈ ಜಗದಾದ್ಯೈ ನಮೋ ನಮಃ ।**
**ನಮೋ ನಮೋ ಜಗದ್ಭೂತ್ಯೈ ನಮಸ್ತೇ ಪರಮೇಶ್ವರಿ ॥**

**ನಮಸ್ಕಾರಾನ್ ಸಮರ್ಪಯಾಮಿ ।**

ಜಗತ್ತಿನಲ್ಲಿಯ ಜನರನ್ನು ಧರಿಸುವವಳು ನೀನು. ಜಗತ್ತಿನಲ್ಲಿ ಆದ್ಯಳಾಗಿ ಪೂಜೆಗೊಂಬುವವಳು. ಜಗತ್ತಿನ ಜನರ ಐಶ್ವರ್ಯಕ್ಕಾಗಿಯೇ ನೀನಿರುವಿ. ಪರಮಾತ್ಮನಿಂದ ಐಶ್ವರ್ಯವನ್ನು ಪಡೆದವಳು ನೀನು. ನಿನಗೆ ಮತ್ತೆ ಮತ್ತೆ ನಮಸ್ಕರಿಸುತ್ತೇನೆ. ನಿನಗೆ ವಿನೀತನಾಗಿರುತ್ತೇನೆ.

**ಪ್ರಸಾದಂ ಮಮ ದೇವೇಶಿ ಕೃಪಯಾ ಪರಯಾ ಸದಾ ।**
**ಅಭೀಷ್ಟಫಲಸಿದ್ಧ್ಯರ್ಥಂ ಕುರು ಮೇ ಮಾಧವಪ್ರಿಯೇ ॥**

**ಪ್ರಾರ್ಥನಾಂ ಸಮರ್ಪಯಾಮಿ ।**

ಮಾ ರಮಾ ಆವಳಿಗೆ ಧವ ನಾಥ ಪರಮಾತ್ಮ. ಮಾಧವನಾದ ಪರಮಾತ್ಮನಿಗೆ ಪ್ರಿಯಳು ನೀನಾಗಿರುವಿ. ದೇವತೆಗಳಿಗೆ ಒಡತಿ ನೀನು. ನಿನ್ನನ್ನು ಪ್ರಾರ್ಥಿಸುತ್ತೇನೆ. ಪರಕೃಪೆಯನ್ನು ನನ್ನಲ್ಲಿ ತೋರು. ಅಭೀಷ್ಟಫಲ ನನಗೆ ಸಿದ್ಧಿಸಲಿ. ನನ್ನನ್ನು ಅನುಗ್ರಹಿಸು.

**ಇತ್ಯೇವಮರ್ಚಯೇನ್ನಿತ್ಯಂ ಪ್ರಾತರೇವ ಶುಚಿರ್ನರಃ ।**
**ಮಧ್ಯಾಹ್ನೇ ವಾಽಥ ಸಾಯಾಹ್ನೇ ಪೂಜಯೇತ್ತ್ರಯತೋ ನರಃ ॥**

**ಸರ್ವೋಪಚಾರೈರಥವಾ ಚಾತುರ್ಮಾಸ್ಯೇ ವಿಶೇಷತಃ ।**
**ಪೂಜಯೇತ್ತುಲಸೀಂ ದೇವೀಂ ಅಪೂಪಫಲಪಾಯಸೈಃ ॥**

ಈ ರೀತಿಯಾಗಿ ಮಂತ್ರಗಳನ್ನು ಹೇಳುತ್ತಾ ಪ್ರಾತಃಕಾಲದಲ್ಲಿಯೇ ಶುದ್ಧನಾಗಿ ತುಲಸಿಯ ಪೂಜೆಯನ್ನು ಮಾಡಬೇಕು. ಮಧ್ಯಾಹ್ನದಲ್ಲಿ ಅಥವಾ ಸಾಯಂಕಾಲದಲ್ಲಿ ಅಥವಾ ಮೂರುಹೊತ್ತಿನಲ್ಲಿಯೂ ತುಲಸಿಯ ಪೂಜೆಯನ್ನು ಮಾಡಬೇಕು. ಈ ಎಲ್ಲ ಉಪಚಾರಗಳನ್ನು ತುಲಸಿಗೆ ಸಮರ್ಪಿಸಬೇಕು. ಚಾತುರ್ಮಾಸ್ಯಕಾಲದಲ್ಲಿ ವಿಶೇಷವಾಗಿ ಪೂಜೆಗೆ ಯೋಗ್ಯವಾದ ಪದಾರ್ಥಗಳನ್ನೆಲ್ಲ ಸಂಗ್ರಹಿಸಿ ತುಲಸಿಯ ಈ ವಿಶಿಷ್ಟವಾದ ಪೂಜೆಯನ್ನು ಮಾಡಬೇಕು. ಅಪೂಪಗಳು, ನಾನಾವಿಧವಾದ ಫಲಗಳು, ಪಾಯಸಗಳನ್ನು ತುಲಸಿಗೆ ನಿವೇದಿಸಬೇಕು.

**ಇತಿ ಶ್ರೀತುಲಸೀಪೂಜಾಮಾಹಾತ್ಮ್ಯಂ ಶೃಣುಯಾನ್ನರಃ ।**
**ಸಕೃದ್ವಾಽಪಿ ಪಠೇನ್ನಿತ್ಯಂ ಸ ಗಚ್ಛೇದ್ವೈಷ್ಣವಂ ಪದಮ್ ॥**

ಯಾರು ಈ ವಿಧವಾದ ತುಲಸೀಪೂಜೆಯನ್ನು ಮಾಡುವರೋ ತುಲಸೀಪೂಜಾ ವಿಧಾನವನ್ನು ಕೇಳುವರೋ, ಒಂದು ಬಾರಿಯಾದರೂ ಪಠಿಸುವರೋ ಅವರಿಗೆ ವಿಷ್ಣುಪದವು ಪ್ರಾಪ್ತವಾಗುತ್ತದೆ. ವಾಯುಪುರಾಣೋಕ್ತವಾದ ತುಲಸೀಮಹಿಮೆ ಇದಾಗಿದೆ. ವಾಯುಪುರಾಣದಲ್ಲಿ ಬಂದಿರುವ ತುಲಸೀಪೂಜಾವಿಧಾನವಿದು.

**॥ ಇತಿ ಶ್ರೀವಾಯುಪುರಾಣೇ ತುಲಸೀಮಾಹಾತ್ಮ್ಯೇ**
**ತುಲಸೀಪೂಜಾವಿಧಾನಂ ನಾಮ ಷಷ್ಠೋಽಧ್ಯಾಯಃ ॥**

★★★★★

**ವಿಯುಕ್ತರಾದ ದಂಪತಿಗಳನ್ನು ಸೇರಿಸುತ್ತದೆ**

ಸೀತಾಮಾತೆ ಮಾಡಿದ ತುಲಸೀಸೇವೆಯ ಪರಿಯನ್ನು ಈ ಮಾತು ಸ್ಪಷ್ಟವಾಗಿ ತಿಳಿಸುತ್ತದೆ-

**ವಿಯೋಗಾದ್ರಾಮದೇವಸ್ಯ ಧ್ಯಾತ್ವಾ ತ್ವಾಂ ಜನಕಾತ್ಮಜಾ ।**
**ಅಶೋಕವನಮಧ್ಯೇ ತು ಪ್ರಿಯೇಣ ಸಹ ಸಾಽಗಮತ್ ॥**

ರಾಮಚಂದ್ರದೇವರ ವಿಯೋಗವನ್ನು ಸಹಿಸಲಾರದ ಸೀತೆಯು ಅಶೋಕವನದ ಮಧ್ಯದಲ್ಲಿರುವಾಗ ನಿನ್ನನ್ನು ಧ್ಯಾನಮಾಡಿದಳು. ನಿನ್ನ ಧ್ಯಾನದ ಫಲವಾಗಿ ಮತ್ತೆ ರಾಮನ ಜೊತೆಗೆ ಕೂಡಿಕೊಂಡಳು.

ರಾಮ-ಸೀತೆಯರಿಗೆ ಸರ್ವಥಾ ವಿಯೋಗವಿರುವುದಿಲ್ಲ. ಆದರೆ ಪತಿಯ ವಿಯೋಗದಿಂದ ಬಳಲಿರುವ ಸತಿಯರು ತುಲಸಿಯ ಧ್ಯಾನದಿಂದ ಸುಖವನ್ನು ಪಡೆಯುತ್ತಾರೆ ಎಂಬುದನ್ನು ಜಗತ್ತಿಗೆ ತಿಳಿಸಲು ಸೀತಾದೇವಿಯು ಈ ರೀತಿಯಾಗಿ ಆಚರಿಸಿದ್ದಾಳೆ ಎಂದು ತಿಳಿಯಬೇಕು. ಮತ್ತು ನಿತ್ಯವೂ ತುಲಸಿಯ ಪೂಜೆಯನ್ನು ಮಾಡುವವರ ದಾಂಪತ್ಯ ಸರಾಗವಾಗಿ ಸಾಗುತ್ತದೆ ಎಂಬುದು ಈ ವೃತ್ತಾಂತದಿಂದ ನಾವು ತಿಳಿಯಬಹುದಾಗಿದೆ. ಮತ್ತು ತುಲಸಿಯ ಪೂಜೆ ಮಾಡಲು ಸರ್ವಥಾ ಸಾಧ್ಯವಾಗದಿರುವಾಗ ತುಲಸಿಯ ಧ್ಯಾನವನ್ನಾದರೂ ಮಾಡಬೇಕು. ತುಲಸಿಯ ಸ್ಮರಣೆ ಇಲ್ಲದೇ ಸರ್ವಥಾ ಮಹಿಳೆಯರು ಇರಬಾರದು ಎಂಬ ವಿಶೇಷವಾದ ವಿಧಿಯು ಕೂಡಾ ಇದರಿಂದ ಸೂಚಿತವಾಗುತ್ತದೆ.

ತುಲಸಿಯ ಸೇವೆ ಅತಿವಿಶಿಷ್ಟವಾದ ಫಲಗಳನ್ನು ನೀಡುತ್ತದೆ. ದಂಪತಿಗಳು ವಿಯುಕ್ತರಾಗುವುದಕ್ಕೆ ನೂರಾರು ಕಾರಣಗಳಿರುತ್ತವೆ. ಆ ಎಲ್ಲ ಕಾರಣಗಳನ್ನು ತಡೆದು ಪ್ರಿಯನ ಸಮಾಗಮವಾಗುವಂತೆ ಮಾಡುತ್ತದೆ. ಶ್ರೀತುಲಸೀ. ಆದ್ದರಿಂದ ವಿಯುಕ್ತರಾದ ದಂಪತಿಗಳು ಶ್ರೀತುಲಸಿಯ ವಿಶಿಷ್ಟವಾದ ಸೇವೆಯನ್ನು ಮಾಡಬೇಕು. ದಾಂಪತ್ಯವಿಯೋಗ ಸರ್ವಥಾ ಬರಬಾರದೆಂದೇ ಸ್ತ್ರೀಯರಿಗೆ ಪ್ರತಿನಿತ್ಯ ತುಲಸಿಯ ಸೇವೆಯನ್ನು ಶಾಸ್ತ್ರ ವಿಧಾನ ಮಾಡಿದೆ. ಆದ್ದರಿಂದ ಶ್ರದ್ಧೆಯಿಂದ ತಮಗೆ ವಿಹಿತವಾದ ತುಲಸೀಪೂಜೆಯನ್ನು ಮಹಿಳೆಯರು ಆಚರಿಸಬೇಕು. ಪುರುಷರು ಕೂಡಾ ಶ್ರೀತುಲಸಿಯ ಸೇವೆಯನ್ನು ವಿಶಿಷ್ಟವಾಗಿ ಮಾಡಬೇಕು.

**ಸ್ನಾನಮಾಡದೇ ತುಲಸಿಯ ಚಯನ ನಿಷಿದ್ಧ**

ತುಲಸಿಯನ್ನು ಹೇಗೆಂದರೆ ಹಾಗೆ ತೆಗೆಯಬಾರದು. ಅದಕ್ಕಾಗಿ ಹಲವು ವಿಧಿಗಳು ಶಾಸ್ತ್ರಗಳಲ್ಲಿ ಇವೆ. ಇವತ್ತು ನಾವೆಲ್ಲರೂ ಸ್ನಾನ ಮಾಡದೇ ತುಲಸಿಯನ್ನು ತೆಗೆಯುವ ಅಭ್ಯಾಸವನ್ನು ಮಾಡಿಕೊಂಡಿದ್ದೇವೆ. ಆದರೆ ಇದು ಎಷ್ಟರ ಮಟ್ಟಿಗೆ ಸರಿ ಎಂಬುದನ್ನು ತಿಳಿಸುವ ಪದ್ಮಪುರಾಣದ ವಚನವಿದು-

**ಅಸ್ನಾತ್ವಾ ತುಲಸೀಂ ಛಿತ್ವಾ ದೇವತಾಪಿತೃಕರ್ಮಣಿ ।**
**ತತ್ಸರ್ವಂ ನಿಷ್ಫಲಂ ಯಾತಿ ಪಂಚಗವ್ಯೇನ ಶುದ್ಧ್ಯತಿ ॥ -ಪಾದ್ಮೇ**

ಸ್ನಾನ ಮಾಡದೇ ಪುಷ್ಪಗಳನ್ನು ಸಂಗ್ರಹಿಸಬೇಕು. ಸ್ನಾನ ಮಾಡಿದ ನಂತರವೇ ತುಲಸಿಯನ್ನು ಸಂಗ್ರಹಿಸಬೇಕು. ದೇವತಾಕರ್ಮದಲ್ಲಿಯಾಗಲಿ ಪಿತೃಕರ್ಮದಲ್ಲಿಯಾಗಲಿ ಸ್ನಾನಮಾಡದೇ ತುಲಸೀಚಯನ ಮಾಡಿದರೆ ತಾನು ಮುಂದೆ ಆಚರಿಸುವ ಕರ್ಮವು ನಿಷ್ಫಲವಾಗುತ್ತದೆ. ಇಷ್ಟಲ್ಲದೇ ಹೀಗೆ ಮಾಡುವುದು ಒಂದು ಅಪರಾಧವಾಗಿದೆ. ಈ ಅಪರಾಧದ ಶಾಂತಿಗಾಗಿ ಪಂಚಗವ್ಯವನ್ನು ಪ್ರಾಶನಮಾಡಬೇಕು. ಈ ಸಣ್ಣ ಅಪರಾಧದಿಂದ ತನ್ನಲ್ಲಿ ಉಂಟಾದ ಅಶುದ್ಧಿಯು ಪಂಚಗವ್ಯಪ್ರಾಶನದಿಂದ ಪರಿಹೃತವಾಗುತ್ತದೆ. ಎರಡು-ಮೂರು ಬಾರಿ ಸ್ನಾನ ಮಾಡುವುದು ಸಾಧ್ಯವಾಗದಿರುವಾಗ ಸ್ನಾನ ಮಾಡಿದವರಿಂದ ತುಲಸಿಯನ್ನು ತೆಗಿಸಬೇಕು. ಅನುಪನೀತರು ಮತ್ತು ಸ್ತ್ರೀಯರು ತುಲಸಿಯನ್ನು ತೆಗೆಯಬಾರದು.

ಮತ್ತೊಂದು ವಿಷಯವನ್ನು ಗಮನಿಸಬೇಕು.

ಶ್ರಾದ್ಧದಲ್ಲಿ ಹಲವರು ತುಲಸಿಯನ್ನು ಉಪಯೋಗಿಸುವುದಿಲ್ಲ. ತುಲಸಿಯನ್ನು ಶ್ರಾದ್ಧದಲ್ಲಿ ಉಪಯೋಗಿಸಿದರೇ ಶ್ರಾದ್ಧಘಾತವಾಗುತ್ತದೆಂದು ಆ ಹಲವರು ತಿಳಿದಿದ್ದಾರೆ. ಅದು ಸರಿಯಾದ ನಿಲುವಲ್ಲ. ಶ್ರಾದ್ಧದಲ್ಲಿ ದೇವರ ನಿರ್ಮಾಲ್ಯವಾದ ತುಲಸಿಯನ್ನು ಅವಶ್ಯವಾಗಿ ಉಪಯೋಗಿಸಬೇಕು. ಪ್ರಕೃತ 'ಪಿತೃಕರ್ಮಣಿ' ಎಂಬ ವಚನದಿಂದ ಶ್ರಾದ್ಧದಲ್ಲಿಯೂ ತುಲಸಿಯನ್ನು ಉಪಯೋಗಿಸಬೇಕೆಂದು ಸಿದ್ಧವಾಗುತ್ತದೆ.

**ತುಲಸ್ಯವಚಯವಿಧಿ**

ತುಲಸೀಚಯನ ಮಾಡುವಾಗ ಮೊದಲು ತುಲಸಿಗೆ ಪ್ರದಕ್ಷಿಣ-ನಮಸ್ಕಾರಗಳನ್ನು ಮಾಡಬೇಕು. ಪ್ರದಕ್ಷಿಣ ಮಾಡುವಾಗ ಈ ಶ್ಲೋಕವನ್ನು ಹೇಳಿಕೊಳ್ಳಬೇಕು-

**ಪ್ರದಕ್ಷಿಣಾಂ ಕರೋಮಿ ತ್ವಾಂ ವೃಂದಾವನವಿಹಾರಿಣಿ ।**
**ವೃಂದಾರಕಪ್ರಿಯೇ ದೇವಿ ತುಲಸಿ ಭಕ್ತವತ್ಸಲೇ ॥**

ತುಲಸಿಗೆ ಹಾಕುವ ಪ್ರದಕ್ಷಿಣ ವಿಶಿಷ್ಟಫಲಪ್ರದವಾಗಿದೆ. ದೇವರಿಗೆ ಪ್ರದಕ್ಷಿಣ ಹಾಕಿದಂತೆಯೇ ಎಂದು ಈ ವಚನ ತಿಳಿಸುತ್ತದೆ-

**ಪ್ರದಕ್ಷಿಣಂ ಕೃತಂ ಯೇನ ತುಲಸೀ ಮುನಿಸತ್ತಮ ।**
**ಕೃತಪ್ರದಕ್ಷಿಣಸ್ತೇನ ವಿಷ್ಣುಸ್ಸಾಕ್ಷಾನ್ನ ಸಂಶಯಃ ॥**

ತುಲಸಿಗೆ ಭಕ್ತಿಯಿಂದ ಪ್ರದಕ್ಷಿಣೆ ಮಾಡಬೇಕು. ತುಲಸಿಯಲ್ಲಿ ಪರಮಾತ್ಮ ಸನ್ನಿಹಿತನಾಗಿರುತ್ತಾನೆ. ಆದ್ದರಿಂದ ದೇವರಿಗೆ ಪ್ರದಕ್ಷಿಣೆ ಹಾಕಿದ ಪುಣ್ಯವು ಬರುತ್ತದೆ.

**ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃ ಪಾವನೀ**
**ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ।**
**ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ**
**ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥**

ಈ ಮಂತ್ರದಿಂದ ತುಲಸಿಯನ್ನು ಸ್ತುತಿಸಬೇಕು. ಪ್ರಾತಃಕಾಲದಲ್ಲಿ ಎದ್ದನಂತರ ಈ ಎರಡು ಶ್ಲೋಕಗಳಿಂದ ತುಲಸಿಗೆ ಪ್ರದಕ್ಷಿಣ-ನಮಸ್ಕಾರಗಳನ್ನು ಹಾಕಿ ತುಲಸೀಮೃತ್ತಿಕೆಯನ್ನು ಧರಿಸಬೇಕು.

ತುಲಸಿಯನ್ನು ಸ್ತುತಿಸುವಾಗ ಶ್ರೀಕೃಷ್ಣನನ್ನು ಸ್ಮರಿಸಬೇಕು. ಈ ವಿಷಯವನ್ನು ಗರುಡಪುರಾಣದ ಬ್ರಹ್ಮಕಾಂಡವು ಈ ರೀತಿಯಾಗಿ ತಿಳಿಸುತ್ತದೆ-

**ತುಲಸೀವಂದನೇ ಕಾಲೇ ಶ್ರೀಕೃಷ್ಣಂ ಸಂಸ್ಮರೇತ್ ಖಗ ॥ -ಗ.ಪು**

**ತುಲಸಿಗೆ ಅರ್ಘ್ಯ**

**ಶ್ರಿಯಃಪ್ರಿಯೇ ಶ್ರಿಯಾವಾಸೇ ನಿತ್ಯಂ ಸತ್ಕೃತಶೋಭಿತೇ ।**
**ಭಕ್ತ್ಯಾ ದತ್ತಂ ಮಯಾ ದೇವಿ ಗ್ರಹಾಣಾಽರ್ಘ್ಯಂ ನಮೋಽಸ್ತು ತೇ ॥**

ಮೊದಲು ತುಲಸಿಗೆ ಸ್ವಚ್ಛವಾದ, ಶುದ್ಧವಾದ ಜಲದಿಂದ ಅರ್ಘ್ಯವನ್ನು ನೀಡಬೇಕು. ನಂತರ ತುಲಸೀಚಯನವನ್ನು ಮಾಡಬೇಕು. ಈ ಅರ್ಘ್ಯವನ್ನು ತಾನು ಸ್ನಾನ ಮಾಡಿಯೇ ನೀಡಬೇಕು. ಆದ್ದರಿಂದ ಸ್ನಾನಮಾಡಿಯೇ ತುಲಸೀಚಯನವನ್ನು ವಿಧಿಸಿದ್ದಾರೆ. ತುಲಸಿಗೆ ಅರ್ಘ್ಯವನ್ನು ನೀಡುವಾಗ ಈ ಶ್ಲೋಕವನ್ನು ಪಠಿಸಬೇಕು.

ತುಲಸಿಯು ಸಾಕ್ಷಾತ್ ಲಕ್ಷ್ಮೀದೇವಿಯಲ್ಲ. ಹಲವರು ಹಾಗೆ ತಿಳಿದಿದ್ದಾರೆ. ಅದು ಸರ್ವಥಾ ಸರಿಯಲ್ಲ. ತುಲಸಿ ಸಾಕ್ಷಾತ್ ಲಕ್ಷ್ಮಿಯಲ್ಲದಿರುವಾಗ ದೇವರ ಕೈಹಿಡಿಯುವ ಸೌಭಾಗ್ಯ ಅವಳಿಗೆ ಬಂದದ್ದು ಎಲ್ಲಿಂದ? ಎಂಬ ಪ್ರಶ್ನೆ ಸಹಜವಾಗಿಯೇ ಬರುತ್ತದೆ. ಅದಕ್ಕೆ ಉತ್ತರ ಈ ಪ್ರಮಾಣವಚನದಲ್ಲಿದೆ. ತುಲಸಿಯು ಸ್ವಯಂ ಲಕ್ಷ್ಮಿಯಾಗದಿದ್ದರೂ ಲಕ್ಷ್ಮೀದೇವಿಗೆ ಪ್ರಿಯಳಾಗಿದ್ದಾಳೆ. ಪ್ರಿಯರಾದವರೆಲ್ಲರೂ ದೇವರ ಕೈಹಿಡಿಯುವುದೂ ಸಾಧ್ಯವಿಲ್ಲ. ಲಕ್ಷ್ಮೀದೇವಿಯ ವಿಶೇಷವಾದ ಸನ್ನಿಧಾನಕ್ಕೆ ಪಾತ್ರರಾಗಿರಬೇಕು. ಅಂತಹ ಪಾತ್ರತೆ ಇವಳಲ್ಲಿ ಇದೆ. ಈ ವಿಷಯವನ್ನು **ಶ್ರಿಯಾವಾಸೇ** ಎಂಬ ಶಬ್ದವು ತಿಳಿಸುತ್ತದೆ. ಇಲ್ಲಿಯ ಆ-ವಾಸ ಎಂಬಲ್ಲಿಯ ಆ ಎಂಬ ಶಬ್ದ ಈ ವಿಷಯವನ್ನು ತಿಳಿಸುತ್ತದೆ. ದೇವರ ಕೈ ಹಿಡಿಯುವಂತಹ ಸೌಭಾಗ್ಯವನ್ನು ಪಡೆಯುವುದಕ್ಕಾಗಿ ಆವಶ್ಯಕವಾದ ರಮಾದೇವಿಯ ಸಾನ್ನಿಧ್ಯವನ್ನು ಪಡೆದವಳು ತುಲಸಿ ಎಂದು ಈ ಮಾತು ಸ್ಪಷ್ಟಪಡಿಸುತ್ತದೆ. ನಿತ್ಯವೂ ಎಲ್ಲರಿಂದ ಸತ್ಕೃತಳಾದವಳು ತುಳಸಿ. ಮತ್ತು ನಿತ್ಯವೂ ಶೋಭಾಯಮಾನಳಾಗಿ ಇದ್ದವಳು. ಅಥವಾ ದೇವಾರ್ಚನಾದಿ ಸತ್ಕಾರ್ಯಗಳಿಗಾಗಿ ತನ್ನನ್ನು ತೊಡಗಿಸಿಕೊಳ್ಳುವ ಮೂಲಕ ಶೋಭೆಯನ್ನು ಪಡೆದುಕೊಂಡವಳು ಎಂದು ಅರ್ಥ. ಇಂತಹ ನಿನಗೆ ನಾನು ಅರ್ಘ್ಯವನ್ನು ಭಕ್ತಿಯಿಂದ ನೀಡುತ್ತಿದ್ದೇನೆ. ನಾನು ಸಮರ್ಪಿಸಿದ ಈ ಅರ್ಘ್ಯವನ್ನು ನೀನು ಸ್ವೀಕರಿಸು. ಹೀಗೆ ಶ್ಲೋಕಾರ್ಥವನ್ನು ಚಿಂತಿಸಬೇಕು.

**ತುಲಸೀಗ್ರಹಣಮಂತ್ರ:**

ತುಲಸಿ ಇದೊಂದು ವೃಕ್ಷ. ಇದಕ್ಕೆ ಪ್ರಾಣವಿರುತ್ತದೆ. ನಡೆಯಲು ಬಾರದ ಜೀವವಿದು. ತುಲಸಿಯನ್ನು ಕೀಳುವಾಗ ಆ ಜಿವಕ್ಕೆ ನೋವಾಗುತ್ತದೆ. ಆದ್ದರಿಂದ ತುಲಸಿಯ ಚಯನಕ್ಕೂ ಮೊದಲು ಕ್ಷಮಾಯಾಚನ ಮಾಡಬೇಕು. ಆ ತುಲಸಿಯನ್ನು ಈ ರೀತಿಯಾಗಿ ಪ್ರಾರ್ಥಿಸಬೇಕು. ಅರ್ಘ್ಯಾದಿಗಳಿಂದ ಪೂಜಿಸಬೇಕು. ಅವುಗಳನ್ನು ತಿಳಿಸುವ ವಚನಗಳು ಈ ರೀತಿಯಾಗಿವೆ-

**ತುಲಸ್ಯಮೃತಜನ್ಮಾऽಸಿ ಸದಾ ತ್ವಂ ಕೇಶವಪ್ರಿಯೇ ।**
**ಕೇಶವಾರ್ಥಂ ವಿಚಿನ್ವಾಮಿ ವರದಾ ಭವ ಶೋಭನೇ ॥**

ಹೇ ತುಲಸಿ ! ನೀನು ಸಮುದ್ರಮಥನದ ಸಂದರ್ಭದಲ್ಲಿ ಅಮೃತಕಲಶದಲ್ಲಿ ಜನಿಸಿರುವಿ. ನೀನು ಯಾವಾಗಲೂ ಪರಮಾತ್ಮನಿಗೆ ಪ್ರಿಯಳಾಗಿರುವಿ. ಕೇಶವನ ಅರ್ಚನೆಗಾಗಿ ನಿನ್ನನ್ನು ನಾನು ಸಂಗ್ರಹಿಸುತ್ತಿದ್ದೇನೆ. ವರಗಳನ್ನು ನೀಡಿ ನನ್ನನ್ನು ಉದ್ಧರಿಸು.

**ಪ್ರದಕ್ಷಿಣಾಂ ಕರೋಮಿ ತ್ವಾಂ ವೃಂದಾವನವಿಹಾರಿಣಿ ।**
**ವೃಂದಾರಕಪ್ರಿಯೇ ದೇವಿ ತುಲಸಿ ಭಕ್ತವತ್ಸಲೇ ॥**

ತುಲಸಿಗೆ ಹಾಕುವ ಪ್ರದಕ್ಷಿಣ ವಿಶಿಷ್ಟಫಲಪ್ರದವಾಗಿದೆ. ದೇವರಿಗೆ ಪ್ರದಕ್ಷಿಣ ಹಾಕಿದಂತೆಯೇ ಎಂದು ಈ ವಚನ ತಿಳಿಸುತ್ತದೆ-

**ಪ್ರದಕ್ಷಿಣಂ ಕೃತಂ ಯೇನ ತುಲಸೀ ಮುನಿಸತ್ತಮ ।**
**ಕೃತಪ್ರದಕ್ಷಿಣಸ್ತೇನ ವಿಷ್ಣುಸ್ಸಾಕ್ಷಾನ್ನ ಸಂಶಯಃ ॥**

ತುಲಸಿಗೆ ಭಕ್ತಿಯಿಂದ ಪ್ರದಕ್ಷಿಣೆ ಮಾಡಬೇಕು. ತುಲಸಿಯಲ್ಲಿ ಪರಮಾತ್ಮ ಸನ್ನಿಹಿತನಾಗಿರುತ್ತಾನೆ. ಆದ್ದರಿಂದ ದೇವರಿಗೆ ಪ್ರದಕ್ಷಿಣೆ ಹಾಕಿದ ಪುಣ್ಯವು ಬರುತ್ತದೆ.

**ಯಾ ದೃಷ್ಟ್ವಾ ನಿಖಿಲಾಘಸಂಘಶಮನೀ ಸ್ಪೃಷ್ಟ್ವಾ ವಪುಃ ಪಾವನೀ**
**ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ।**
**ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ**
**ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥**

ಈ ಮಂತ್ರದಿಂದ ತುಲಸಿಯನ್ನು ಸ್ತುತಿಸಬೇಕು. ಪ್ರಾತಃಕಾಲದಲ್ಲಿ ಎದ್ದನಂತರ ಈ ಎರಡು ಶ್ಲೋಕಗಳಿಂದ ತುಲಸಿಗೆ ಪ್ರದಕ್ಷಿಣ-ನಮಸ್ಕಾರಗಳನ್ನು ಹಾಕಿ ತುಲಸೀಮೃತ್ತಿಕೆಯನ್ನು ಧರಿಸಬೇಕು.

ತುಲಸಿಯನ್ನು ಸ್ತುತಿಸುವಾಗ ಶ್ರೀಕೃಷ್ಣನನ್ನು ಸ್ಮರಿಸಬೇಕು. ಈ ವಿಷಯವನ್ನು ಗರುಡಪುರಾಣದ ಬ್ರಹ್ಮಕಾಂಡವು ಈ ರೀತಿಯಾಗಿ ತಿಳಿಸುತ್ತದೆ-

**ತುಲಸೀವಂದನೇ ಕಾಲೇ ಶ್ರೀಕೃಷ್ಣಂ ಸಂಸ್ಮರೇತ್ ಖಗ ॥ -ಗ.ಪು**

**ತುಲಸಿಗೆ ಅರ್ಘ್ಯ**

**ಶ್ರಿಯಃಪ್ರಿಯೇ ಶ್ರಿಯಾವಾಸೇ ನಿತ್ಯಂ ಸತ್ಕೃತಶೋಭಿತೇ ।**
**ಭಕ್ತ್ಯಾ ದತ್ತಂ ಮಯಾ ದೇವಿ ಗ್ರಹಾಣಾಽರ್ಘ್ಯಂ ನಮೋಽಸ್ತು ತೇ ॥**

ಮೊದಲು ತುಲಸಿಗೆ ಸ್ವಚ್ಛವಾದ, ಶುದ್ಧವಾದ ಜಲದಿಂದ ಅರ್ಘ್ಯವನ್ನು ನೀಡಬೇಕು. ನಂತರ ತುಲಸೀಚಯನವನ್ನು ಮಾಡಬೇಕು. ಈ ಅರ್ಘ್ಯವನ್ನು ತಾನು ಸ್ನಾನ ಮಾಡಿಯೇ ನೀಡಬೇಕು. ಆದ್ದರಿಂದ ಸ್ನಾನಮಾಡಿಯೇ ತುಲಸೀಚಯನವನ್ನು ವಿಧಿಸಿದ್ದಾರೆ. ತುಲಸಿಗೆ ಅರ್ಘ್ಯವನ್ನು ನೀಡುವಾಗ ಈ ಶ್ಲೋಕವನ್ನು ಪಠಿಸಬೇಕು.

ತುಲಸಿಯು ಸಾಕ್ಷಾತ್ ಲಕ್ಷ್ಮೀದೇವಿಯಲ್ಲ. ಹಲವರು ಹಾಗೆ ತಿಳಿದಿದ್ದಾರೆ. ಅದು ಸರ್ವಥಾ ಸರಿಯಲ್ಲ. ತುಲಸಿ ಸಾಕ್ಷಾತ್ ಲಕ್ಷ್ಮಿಯಲ್ಲದಿರುವಾಗ ದೇವರ ಕೈಹಿಡಿಯುವ ಸೌಭಾಗ್ಯ ಅವಳಿಗೆ ಬಂದದ್ದು ಎಲ್ಲಿಂದ? ಎಂಬ ಪ್ರಶ್ನೆ ಸಹಜವಾಗಿಯೇ ಬರುತ್ತದೆ. ಅದಕ್ಕೆ ಉತ್ತರ ಈ ಪ್ರಮಾಣವಚನದಲ್ಲಿದೆ. ತುಲಸಿಯು ಸ್ವಯಂ ಲಕ್ಷ್ಮಿಯಾಗದಿದ್ದರೂ ಲಕ್ಷ್ಮೀದೇವಿಗೆ ಪ್ರಿಯಳಾಗಿದ್ದಾಳೆ. ಪ್ರಿಯರಾದವರೆಲ್ಲರೂ ದೇವರ ಕೈಹಿಡಿಯುವುದೂ ಸಾಧ್ಯವಿಲ್ಲ. ಲಕ್ಷ್ಮೀದೇವಿಯ ವಿಶೇಷವಾದ ಸನ್ನಿಧಾನಕ್ಕೆ ಪಾತ್ರರಾಗಿರಬೇಕು. ಅಂತಹ ಪಾತ್ರತೆ ಇವಳಲ್ಲಿ ಇದೆ. ಈ ವಿಷಯವನ್ನು **ಶ್ರಿಯಾವಾಸೇ** ಎಂಬ ಶಬ್ದವು ತಿಳಿಸುತ್ತದೆ. ಇಲ್ಲಿಯ ಆ-ವಾಸ ಎಂಬಲ್ಲಿಯ ಆ ಎಂಬ ಶಬ್ದ ಈ ವಿಷಯವನ್ನು ತಿಳಿಸುತ್ತದೆ. ದೇವರ ಕೈ ಹಿಡಿಯುವಂತಹ ಸೌಭಾಗ್ಯವನ್ನು ಪಡೆಯುವುದಕ್ಕಾಗಿ ಆವಶ್ಯಕವಾದ ರಮಾದೇವಿಯ ಸಾನ್ನಿಧ್ಯವನ್ನು ಪಡೆದವಳು ತುಲಸಿ ಎಂದು ಈ ಮಾತು ಸ್ಪಷ್ಟಪಡಿಸುತ್ತದೆ. ನಿತ್ಯವೂ ಎಲ್ಲರಿಂದ ಸತ್ಕೃತಳಾದವಳು ತುಳಸಿ. ಮತ್ತು ನಿತ್ಯವೂ ಶೋಭಾಯಮಾನಳಾಗಿ ಇದ್ದವಳು. ಅಥವಾ ದೇವಾರ್ಚನಾದಿ ಸತ್ಕಾರ್ಯಗಳಿಗಾಗಿ ತನ್ನನ್ನು ತೊಡಗಿಸಿಕೊಳ್ಳುವ ಮೂಲಕ ಶೋಭೆಯನ್ನು ಪಡೆದುಕೊಂಡವಳು ಎಂದು ಅರ್ಥ. ಇಂತಹ ನಿನಗೆ ನಾನು ಅರ್ಘ್ಯವನ್ನು ಭಕ್ತಿಯಿಂದ ನೀಡುತ್ತಿದ್ದೇನೆ. ನಾನು ಸಮರ್ಪಿಸಿದ ಈ ಅರ್ಘ್ಯವನ್ನು ನೀನು ಸ್ವೀಕರಿಸು. ಹೀಗೆ ಶ್ಲೋಕಾರ್ಥವನ್ನು ಚಿಂತಿಸಬೇಕು.

**ತುಲಸೀಗ್ರಹಣಮಂತ್ರಃ**

ತುಲಸಿ ಇದೊಂದು ವೃಕ್ಷ. ಇದಕ್ಕೆ ಪ್ರಾಣವಿರುತ್ತದೆ. ನಡೆಯಲು ಬಾರದ ಜೀವವಿದು. ತುಲಸಿಯನ್ನು ಕೀಳುವಾಗ ಆ ಜಿವಕ್ಕೆ ನೋವಾಗುತ್ತದೆ. ಆದ್ದರಿಂದ ತುಲಸಿಯ ಚಯನಕ್ಕೂ ಮೊದಲು ಕ್ಷಮಾಯಾಚನ ಮಾಡಬೇಕು. ಆ ತುಲಸಿಯನ್ನು ಈ ರೀತಿಯಾಗಿ ಪ್ರಾರ್ಥಿಸಬೇಕು. ಅರ್ಘ್ಯಾದಿಗಳಿಂದ ಪೂಜಿಸಬೇಕು. ಅವುಗಳನ್ನು ತಿಳಿಸುವ ವಚನಗಳು ಈ ರೀತಿಯಾಗಿವೆ-

**ತುಲಸ್ಯಮೃತಜನ್ಮಾSಸಿ ಸದಾ ತ್ವಂ ಕೇಶವಪ್ರಿಯೇ ।**
**ಕೇಶವಾರ್ಥಂ ವಿಚಿನ್ವಾಮಿ ವರದಾ ಭವ ಶೋಭನೇ ॥**

ಹೇ ತುಲಸಿ ! ನೀನು ಸಮುದ್ರಮಥನದ ಸಂದರ್ಭದಲ್ಲಿ ಅಮೃತಕಲಶದಲ್ಲಿ ಜನಿಸಿರುವಿ. ನೀನು ಯಾವಾಗಲೂ ಪರಮಾತ್ಮನಿಗೆ ಪ್ರಿಯಳಾಗಿರುವಿ. ಕೇಶವನ ಅರ್ಚನೆಗಾಗಿ ನಿನ್ನನ್ನು ನಾನು ಸಂಗ್ರಹಿಸುತ್ತಿದ್ದೇನೆ. ವರಗಳನ್ನು ನೀಡಿ ನನ್ನನ್ನು ಉದ್ಧರಿಸು.

**ತ್ವದಂಗಸಂಭವೈಃ ಪತ್ರೈಃ ಪೂಜಯಾಮಿ ಯಥಾ ಹರಿಮ್ ।**
**ತಥಾ ಕುರು ವಿಚಿತ್ರಾಂಗಿ ಕಲೌ ಮಲವಿನಾಶಿನಿ ॥**

ಕಲಿಕಾಲದ ಬಲದಿಂದ ನನ್ನ ಮನಸ್ಸೆಲ್ಲ ಮಲಿನವಾಗಿಹೋಗಿದೆ. ಮಲಿನವಾದ ನನ್ನ ಮನಸ್ಸು ದೇವರ ಆರಾಧನೆಯಿಂದ ನಿರ್ಮಲವಾಗುತ್ತದೆ. ದೇವರ ಆರಾಧನೆಗಾಗಿ ನಿನ್ನ ಪತ್ರಗಳು ಆವಶ್ಯಕ. ಹೀಗಾಗಿ ನಿನ್ನ ಪತ್ರಗಳಿಂದ ಪರಮಾತ್ಮನನ್ನು ಪೂಜಿಮಾಡುವ ಸೌಭಾಗ್ಯವನ್ನು ನನಗೆ ಒದಗಿಸಿಕೊಡು.

**ಮಾತಸ್ತುಲಸಿ ಗೋವಿಂದಹೃದಯಾನಂದಕಾರಿಣಿ ।**
**ನಾರಾಯಣಸ್ಯ ಪೂಜಾರ್ಥಂ ಚಿನೋಮಿ ತ್ವಾಮತಃ ಶುಭೇ ॥**

ಹೇ ತುಲಸಿ ! ನೀನು ಸಾಧಕರೆಲ್ಲರಿಗೆ ತಾಯಿಯಂತೆ ಇರುವಿ. ನೀನು ಶುಭಕಾರಕಳಾಗಿರುವಿ. ಸ್ವಯಂ ಶೋಭನೆ ನೀನಾಗಿರುವಿ. ನಿನ್ನ ಪತ್ರಗಳನ್ನು ನಿನ್ನಿಂದ ಬೇರ್ಪಡಿಸಿ ದುಃಖವನ್ನು ನಿನಗೆ ನೀಡಬೇಕೆಂದು ನನ್ನ ಉದ್ದೇಶವಲ್ಲ. ಕಿಂತು ನೀನು ವೇದಪ್ರತಿಪಾದ್ಯನಾದ ಪರಮಾತ್ಮನ ಹೃದಯವನ್ನು ರಂಜಿಸುವವಳಾಗಿದ್ದೀ. ಆದ್ದರಿಂದಲೇ ಆ ನಾರಾಯಣನ ಪೂಜೆಗಾಗಿ ನಿನ್ನನ್ನು ನಾನು ಸಂಗ್ರಹಿಸುತ್ತಿದ್ದೇನೆ.

**ತ್ವಯಾ ವಿನಾ ಮಹಾಭಾಗೇ ಸಮಸ್ತಂ ಕರ್ಮ ನಿಷ್ಫಲಮ್ ।**
**ಅತಸ್ತುಲಸಿ ದೇವಿ ತ್ವಾಂ ಚಿನೋಮಿ ವರದಾ ಭವ ॥**

ನೀನಿಲ್ಲದ ಸಕಲಕರ್ಮಗಳೂ ವ್ಯರ್ಥವಾಗಿವೆ. ಅಂತಹ ಮಹಾಸೌಭಾಗ್ಯವನ್ನು ನೀನು ಸಂಪಾದಿಸಿಕೊಂಡಿರುವಿ. ಆದ್ದರಿಂದ ನನ್ನ ಸಾತ್ತ್ವಿಕಕರ್ಮಗಳೆಲ್ಲ ಪ್ರಯೋಜನಕಾರಿಯಾಗಬೇಕೆಂಬ ಉದ್ದೇಶದಿಂದ ನಿನ್ನನ್ನು ಸಂಗ್ರಹಿಸುತ್ತೇನೆ. ನನಗೆ ವರಗಳನ್ನು ನೀಡು.

**ಚಯನೋದ್ಭವದುಃಖಂ ಯದ್ದೇವಿ ತೇ ಹೃದಿ ವರ್ತತೇ ।**
**ತತ್ಕ್ಷಮಸ್ವ ಜಗನ್ಮಾತಃ ತುಲಸಿ ತ್ವಾಂ ನಮಾಮ್ಯಹಮ್ ॥**

ಹೇ ಜಗನ್ಮಾತೆ ! ಚಯನದಿಂದ ನಿನ್ನ ಹೃದಯಕ್ಕೆ ಆಗಿರುವ ದುಃಖವನ್ನು ಸಹಿಸಿಕೊ. ನನ್ನನ್ನು ಕ್ಷಮಿಸು. ನಿನಗೆ ನಮಸ್ಕರಿಸುತ್ತೇನೆ. ನಿನಗೆ ವಿನೀತನಾಗಿ ನಾನಿರುತ್ತೇನೆ.

**ಶ್ರಿಯಂ ದೇಹಿ ಯಶೋ ದೇಹಿ ಕೀರ್ತಿಮಾಯುಃ ಸುತಾಂ ಸುತಮ್ ।**
**ಬಲಂ ಪುಷ್ಟಿಂ ತಥಾ ಧರ್ಮಂ ತುಲಸಿ ತ್ವಾಂ ನಮಾಮ್ಯಹಮ್ ॥**

ಧರ್ಮವನ್ನು ಮಾಡುವುದಕ್ಕಾಗಿ ನನಗೆ ಸಂಪತ್ತು ಬೇಕು. ಅಂತಹ ಸಾತ್ತ್ವಿಕವಾದ ಸಂಪತ್ತನ್ನು ನನಗೆ ನೀಡು. ನಾನು ಮಾಡಲು ಹೊರಟ ಕಾರ್ಯಗಳಲ್ಲಿ ಯಶಸ್ಸು ನನಗೆ ದೊರೆಯಲಿ. ಯಾವಾಗಲೂ ದೇವರ ಕೆಲಸಗಳನ್ನೇ ನಾನು ಮಾಡುತ್ತಿರುತ್ತೇನೆ. ನಾನು ಕೀರ್ತಿಕಾಮುಕನಲ್ಲ. ನಾನೊಬ್ಬ ವೈಷ್ಣವ. ನಾನೊಬ್ಬ ಸಾಮಾನ್ಯ. ನನ್ನನ್ನು ವೀರವೈಷ್ಣವನನ್ನಾಗಿ ಮಾಡಿ ನನ್ನ ಕೀರ್ತಿಯನ್ನು ನೀನೇ ಬೆಳಗಿಸಬೇಕು. ಕ್ಷಣಕ್ಷಣವೂ ದೇವರನ್ನು ಚಿಂತಿಸುತ್ತಾ ನನ್ನ ಆಯುಷ್ಯ ದೇವರಿಗಾಗಿಯೇ ಮೀಸಲಾಗುವಂತೆ ಮಾಡಬೇಕು. ಧಾರ್ಮಿಕಳಾದ ಮಗಳನ್ನು ನೀನೇ ನೀಡಬೇಕು. ಧಾರ್ಮಿಕನಾದ ಮಗನನ್ನೂ ನೀನೇ ದಯಪಾಲಿಸಬೇಕು. ಸತ್ಕರ್ಮಗಳನ್ನು ಮಾಡಲು ನಮ್ಮೆಲ್ಲರಿಗೂ ನೀನೇ ಬಲವನ್ನು ನೀಡಬೇಕು. ನಮ್ಮ ಪೋಷಣೆಯನ್ನು ನೀನೇ ಮಾಡಬೇಕು. ಧರ್ಮಗಳನ್ನು ಅತಿಶಯವಾಗಿ ಮಾಡುವಂತಹ ಶಕ್ತಿ-ಸಾಮರ್ಥ್ಯಗಳನ್ನು ನೀನೇ ನಮಗೆ ನೀಡಬೇಕು. ಬಲಹೀನ ನಾನು. ಪ್ರತಿಯಾಗಿ ನೀಡುವ ಬಲ ನನಗಿಲ್ಲ. ನೀನು ಮಾಡಿದ ಈ ಉಪಕಾರಕ್ಕಾಗಿ ನಾನು ನಿನಗೆ ನಮಸ್ಕರಿಸುತ್ತೇನೆ. ನಿನಗೆ ವಿನೀತನಾಗಿ ಇರುತ್ತೇನೆ. ಇಷ್ಟುಮಾತ್ರ ನಾನು ಮಾಡಬಲ್ಲೆ. ಆದ್ದರಿಂದ ಹೇ ತುಲಸಿ ! ನನ್ನ ಈ ಪ್ರಾರ್ಥನೆಯನ್ನು ಕೇಳು. ನಮ್ಮನ್ನು ರಕ್ಷಿಸು ಸಂರಕ್ಷಿಸು.

ಈ ರೀತಿಯಾಗಿ ತುಲಸಿಯನ್ನು ಪ್ರಾರ್ಥಿಸಿಯೇ ತುಲಸ್ಯವಚಯವನ್ನು ಮಾಡಬೇಕು. ಇಲ್ಲದಿದ್ದರೇ ತುಲಸಿಯ ನಿಗ್ರಹಕ್ಕೆ ಪಾತ್ರನಾಗುತ್ತಾನೆ.

ಹಲವು ವಿಷಯಗಳನ್ನು ಎಚ್ಚರದಲ್ಲಿರಿಸಿಕೊಳ್ಳಬೇಕು. ಮೇಲಿನ ಪ್ರಾರ್ಥನೆಯಲ್ಲಿ ಕಡ್ಡಾಯವಾಗಿ ನಾವು ಒಂದು ಪ್ರತಿಜ್ಞೆಯನ್ನು ಮಾಡುತ್ತೇವೆ. 'ಕೇವಲ ದೇವರ ಅರ್ಚನೆಯ ಉದ್ದೇಶದಿಂದ ತುಲಸಿಯ ಚಯನವನ್ನು ನಾನು ಮಾಡುತ್ತೇನೆ' ಎಂಬುದೇ ಆ ಪ್ರತಿಜ್ಞೆ. ಆ ಪ್ರತಿಜ್ಞೆಯನ್ನು ಸದಾ ಪಾಲಿಸುತ್ತಿರಬೇಕು. ದೇವರ ಅರ್ಚನೆಗಾಗಲ್ಲದೇ ಮತ್ತಾವ ಕಾರ್ಯಗಳಿಗೂ ತುಲಸಿಯನ್ನು ಬಳಿಸಬಾರದು. ದೇವರ ಅರ್ಚನೆಯಲ್ಲಿ ಬಳಕೆಯಾದ ತುಲಸಿಯ ನಿರ್ಮಾಲ್ಯದಿಂದಲೇ ವಾಯ್ವಾದಿದೇವತೆಗಳನ್ನು ಅರ್ಚಿಸಬೇಕು. ನಿರ್ಮಾಲ್ಯವಾಗದ ತುಲಸ್ಯಾದಿಗಳನ್ನು ವಾಯ್ವಾದಿದೇವತೆಗಳು ಅಪೇಕ್ಷಿಸುವುದಿಲ್ಲ.

ಒಟ್ಟಾರೆ ದೇವರ ಅರ್ಚನೆಗಾಗಿ ಅಲ್ಲದೇ ಮತ್ತಾವ ಕಾರ್ಯಗಳಿಗೂ ತುಲಸಿಯನ್ನು ಪ್ರತ್ಯೇಕವಾಗಿ ಉಪಯೋಗಿಸಬಾರದು. ವಿಹಿತವಾದ ಕಾರ್ಯಗಳಿಗಾಗಿ ದೇವರ ನಿರ್ಮಾಲ್ಯವಾಗಿರುವ ತುಲಸಿಯನ್ನೇ ಉಪಯೋಗಿಸಬೇಕು. ಔಷಧಾರ್ಥವಾಗಿ

ತುಲಸಿಯನ್ನು ಉಪಯೋಗಿಸುವಾಗಲೂ ನಿರ್ಮಾಲ್ಯವಾಗಿರುವ ತುಲಸಿಯನ್ನೇ ಉಪಯೋಗಿಸಬೇಕು. ಇದರಿಂದ ರೋಗವು ಶೀಘ್ರವಾಗಿ ಶಮನಗೊಳ್ಳುತ್ತದೆ. ಆದ್ದರಿಂದ ಈ ವಿಷಯದಲ್ಲಿ ಸದಾ ಜಾಗರೂಕವಾಗಿ ಇರಬೇಕು.

**ಕರತಾಲತ್ರಯಂ ದತ್ವಾ ಚಿನುಯಾತ್ತುಲಸೀದಲಮ್ ।**

ಈ ರೀತಿಯಾಗಿ ತುಲಸಿಯ ಪ್ರಾರ್ಥನೆಯನ್ನು ಮಾಡಬೇಕು. ನಂತರ ಮೂರು ಬಾರಿ ಚಪ್ಪಾಳೆಯನ್ನು ಬಾರಿಸಬೇಕು. ಎಲ್ಲ ದುಷ್ಟಪ್ರಾಣಿಗಳನ್ನು ದೂರ ಓಡಿಸಬೇಕು. ನಂತರ ದಲಗಳನ್ನು ಚಯನಮಾಡಬೇಕು.

**ಇತ್ಯುಕ್ತ್ವಾ ತುಲಸೀಂ ನತ್ವಾ ಚಿತ್ವಾ ದಕ್ಷಿಣಪಾಣಿನಾ ।**
**ಪತ್ರಾಣ್ಯೇಕೈಕಶೋ ನ್ಯಸ್ಯೇತ್ ಸತ್ಪಾತ್ರೇ ಮಂಜರೀರಪಿ ॥**

ತುಲಸೀಚಯನ ಮಾಡುವಾಗಲೆಲ್ಲ ಪ್ರಾರ್ಥನಾಮಂತ್ರಗಳನ್ನು ಹೇಳಬೇಕು. ತುಲಸಿಗೆ ನಮಸ್ಕರಿಸಬೇಕು. ಬಲಗೈಯಿಂದಲೇ ತುಲಸೀಚಯನವನ್ನು ಮಾಡಬೇಕು. ಎಡಗೈಯಿಂದ ತುಲಸೀಚಯನವನ್ನು ಮಾಡಬಾರದು. ಒಂದೊಂದಾಗಿಯೇ ದಲಗಳನ್ನು ಬಿಡಿಸಿದ ಹಾಗೆ ಒಂದೊಂದಾಗಿಯೇ ಶುದ್ಧವಾದ ಪಾತ್ರೆಯಲ್ಲಿ ಹಾಕಬೇಕು.

ಹೀಗೆ ವಿಧ್ಯುಕ್ತವಾದ ರೀತಿಯಲ್ಲಿ ತುಲಸೀಚಯನವನ್ನು ಮಾಡಿ ಆ ತುಲಸೀದಲಗಳನ್ನು ದೇವರಿಗೆ ಸಮರ್ಪಿಸುವುದರಿಂದ ಅತ್ಯಧಿಕವಾದ ಫಲವು ಪ್ರಾಪ್ತವಾಗುತ್ತದೆ.

ತುಲಸಿಯ ಚಯನ ಮಾಡುವಾಗ ಶ್ರೀರಾಮನ ಸ್ಮರಣೆಯನ್ನು ಮಾಡುತ್ತಿರಬೇಕು. ಈ ವಿಷಯವನ್ನು ತಿಳಿಸುವ ಗರುಡಪುರಾಣದ ಬ್ರಹ್ಮಕಾಂಡದ ವಚನವಿದು-

**ಶ್ರೀಮತ್ತುಲಸ್ಯಾಃ ಛೇದನೇ ಚೈವ ಕಾಲೇ ಶ್ರೀರಾಮರಾಮೇತಿ ಚ ಸಂಸ್ಮರೇತ್ತು ॥**

ತುಲಸಿಯನ್ನು ಛೇದನ ಮಾಡುವ ಸಂದರ್ಭದಲ್ಲಿ ಶ್ರೀರಾಮ, ಶ್ರೀರಾಮ ಶ್ರೀರಾಮ ಎಂಬುದಾಗಿ ಸ್ಮರಣೆ ಮಾಡುತ್ತಲೇ ಇರಬೇಕು. ಭಕ್ತಿಯಿಂದ ಉಚ್ಚರಿತವಾಗುತ್ತಿರುವ ಶ್ರೀರಾಮನಾಮವನ್ನು ಕೇಳುತ್ತಾ ಛೇದನದಿಂದ ಆಗುವ ದುಃಖವನ್ನು ಸಹಿಸಿಕೊಳ್ಳುತ್ತಾಳೆ ತುಲಸಿ. ನಮಗೆ ವರಗಳನ್ನು ನೀಡುತ್ತಾಳೆ ಎಂಬುದಾಗಿ ತಿಳಿಯಬೇಕು.

**ನಿಧಾನವಾಗಿ ಚಯನಮಾಡಬೇಕು**

**ಯಥಾ ನ ಕಂಪತೇ ಶಾಖಾ ತುಲಸ್ಯಾಃ ದ್ವಿಜಸತ್ತಮ ।**
**ಪತ್ರಸ್ಯ ಚಯನೇ ದೇವೀ ಭಗ್ನಶಾಖಾ ಯದಾ ಭವೇತ್ ।**
**ತದಾ ಹೃದಿ ವ್ಯಥಾ ವಿಷ್ಣೋರ್ಜಾಯತೇ ತುಲಸೀಪತೇಃ ॥**

ತುಲಸಿಯನ್ನು ಚಯನಮಾಡುವಾಗ ತುಲಸಿಯ ಶಾಖೆಯು ಅಲುಗಾಡಬಾರದು. ಅಷ್ಟು ಸಾವಕಾಶವಾಗಿ ತುಲಸೀಚಯನವನ್ನು ಮಾಡಬೇಕು. ತುಲಸೀಪತ್ರಗಳನ್ನು ಚಯನಮಾಡುವಾಗ ಶಾಖೆಯು ಭಗ್ನವಾಗಬಾರದು. ಶಾಖೆಯು ಭಗ್ನವಾದರೇ ತುಲಸೀಪತಿಯಾದ ಪರಮಾತ್ಮನಿಗೆ ವ್ಯಥೆಯಾಗುತ್ತದೆ.

ಭಗವಂತನಿಗೆ ಯಾವುದೇ ರೀತಿಯಾದ ವ್ಯಥೆಗಳಿಲ್ಲ. ದೇವರಿಗೆ ವ್ಯಥೆಯಾಗುವುದೆಂದರೆ ಅಪ್ರಸನ್ನನಾಗುವುದೆಂದರ್ಥ. ಭಗವಂತನ ಅಪ್ರಸಾದ ಸಕಲ ಅನರ್ಥಗಳಿಗೆ ಕಾರಣವಾಗುತ್ತದೆ. ಆದ್ದರಿಂದ ತುಲಸೀಚಯನದಲ್ಲಿ ಜಾಗರೂಕರಾಗಿರಬೇಕು.

**ಶಾಖಾಗ್ರಪತಿತಂ ಭೂಮೌ ಪತ್ರಂ ಪತ್ರಂ ಪುರಾತನಮ್ ।**
**ತೇನಾಪಿ ಪೂಜ್ಯೋ ಗೋವಿಂದಃ ಮಧುಕೈಟಭಮರ್ದನಃ ॥**

ಸಾಮಾನ್ಯವಾಗಿ ದಲಗಳನ್ನು ಮಾತ್ರ ಸ್ವೀಕಾರಮಾಡಿ ಆ ದಲಗಳಿಂದ ಮಾತ್ರ ದೇವರ ಅರ್ಚನೆಯನ್ನು ಮಾಡುತ್ತೇವೆ. ದಲಗಳು ನಿಶ್ಚಿತವಾಗಿಯೂ ಶ್ರೇಷ್ಠವೇ ಆಗಿವೆ. ಆದರೂ ಕೆಳಗೆ ಬಿದ್ದಿರುವ ಎಲೆಗಳನ್ನು ಹಾಗೆಯೇ ಬಿಡಬಾರದು. ಆ ಎಲೆಗಳಿಂದಲೂ ದೇವರನ್ನು ಅರ್ಚಿಸಬೇಕು. ಹಣ್ಣೆಲೆಗಳಿಂದಲೂ ದೇವರು ಅರ್ಚ್ಯನಾಗಿದ್ದಾನೆ. ಹಸಿರಾದ ಎಲೆಗಳಿಂದಲೂ ದೇವರು ಅರ್ಚ್ಯನಾಗಿದ್ದಾನೆ. ಈ ಅರ್ಚನೆಯಿಂದ ಭಗವಂತ ಪ್ರೀತನೇ ಅಗುತ್ತಾನೆ.

**ನಾಽಶುಚಿಃ ಸಂಸ್ಪೃಶೇದೇತಾಂ ನೋಪಾನಚ್ಚರಣೋಽಪಿ ವಾ ।**
**ಪಶ್ಚಿಮಾಸ್ಯೋ ನ ಚಿನುಯಾತ್ ಪಕ್ವಾಂತದ್ವಾದಶೀಷ್ವಪಿ ॥ -ಬೃಹದ್ಧರ್ಮ**

ಅಶುದ್ಧನಾಗಿ ತುಲಸಿಯನ್ನು ಮುಟ್ಟಬಾರದು. ಚಪ್ಪಲೆಗಳನ್ನು ಧರಿಸಿ ಮುಟ್ಟಬಾರದು. ಪಶ್ಚಿಮಕ್ಕೆ ದಕ್ಷಿಣಕ್ಕೆ ಮುಖಮಾಡಿ ತುಲಸೀಯನ್ನು ಚಯನ ಮಾಡಬಾರದು. ಪೂರ್ವಕ್ಕೆ ಅಥವಾ ಉತ್ತರಕ್ಕೆ ಮುಖಮಾಡಿ ತುಲಸೀಚಯನ ಮಾಡಬೇಕು. ದ್ವಾದಶಿಯಲ್ಲಿ ತುಲಸೀಚಯನವನ್ನು ಮಾಡಬಾರದು.

**ತುಲಸೀಚಯನನಿಷೇಧಃ**

ದೇವರನ್ನು ಅರ್ಚಿಸುವುದಕ್ಕಾಗಿ ತುಲಸಿಯನ್ನು ಸಂಗ್ರಹಿಸಬೇಕು. ಸಂಗ್ರಹಿಸುವಾಗ ಈಗಾಗಲೇ ತಿಳಿದಂತೆ ತುಲಸಿಯನ್ನು ಪೂಜಿಸಿ, ಪ್ರಾರ್ಥಿಸಿ ಸಂಗ್ರಹಿಸಬೇಕು. ತುಲಸಿಯನ್ನು ಯಾವಾಗ ಬೇಕು ಆವಾಗ ಸಂಗ್ರಹಿಸುವುದು ಉಚಿತವಲ್ಲ. ಯೋಗ್ಯವಾದ ಕಾಲದಲ್ಲಿಯೇ ತುಲಸೀಚಯನವನ್ನು ಮಾಡಬೇಕು. ಅಯೋಗ್ಯವಾದ ಕಾಲದಲ್ಲಿ ತುಲಸೀಚಯನವು ನಿಷಿದ್ಧವೆನಿಸಿದೆ. ಆ ವಚನಗಳನ್ನು ಸ್ವಲ್ಪ ಪರ್ಯಾಲೋಚಿಸೋಣ.

**ವೈಧೃತೌ ಚ ವ್ಯತೀಪಾತೇ ಭೌಮಭಾರ್ಗವಭಾನುಷು ।**
**ಪರ್ವದ್ವಯೇ ಚ ಸಂಕ್ರಾಂತೌ ದ್ವಾದಶ್ಯಾಂ ಸೂತಕದ್ವಯೇ ।**

**ತುಲಸೀಂ ಯೇ ವಿಚಿನ್ವಂತಿ ತೇ ಛಿಂದಂತಿ ಹರೇಃ ಶಿರಃ ॥**
**ನೈವ ಛಿಂದ್ಯಾತ್ ರವೌ ದೂರ್ವಾಂ ತುಲಸೀಂ ನಿಶಿ ಸಂಧ್ಯಯೋಃ ।**

**ರವಿವಾರಂ ವಿನಾ ದೂರ್ವಾಂ ತುಲಸೀಂ ದ್ವಾದಶೀಂ ವಿನಾ ।**
**ಜೀವಿತಸ್ಯಾऽವಿನಾಶಾಯ ಪ್ರವಿಚಿನ್ವೀತ ಧರ್ಮವಿತ್ ॥ -ವಿ.ಧ**

ವೈಧೃತಿ ಮತ್ತು ವ್ಯತೀಪಾತ ಯೋಗಗಳಲ್ಲಿ ಮಂಗಳವಾರ, ಶುಕ್ರವಾರ ಮತ್ತು ರವಿವಾರ ದಿನಗಳಲ್ಲಿ, ಹುಣ್ಣಿಮೆ ಮತ್ತು ಅಮಾವಾಸ್ಯಾದಿನದಲ್ಲಿ ಸಂಕ್ರಾಂತಿಯ ದಿನದಂದು, ದ್ವಾದಶೀಯದಿವಸ ಮತ್ತು ಜನನ-ಮರಣಸೂತಕಗಳಲ್ಲಿ ತುಲಸೀಚಯನ ಮಾಡಬಾರದು. ತುಲಸಿಯನ್ನು ಸಂಧ್ಯಾಕಾಲಗಳಲ್ಲಿ ಮತ್ತು ರಾತ್ರಿಯಲ್ಲಿ ಚಯನ ಮಾಡಬಾರದು. ಈ ದಿವಸಗಳನ್ನು ಪರಿತ್ಯಜಿಸಿ ಉಳಿದ ದಿವಸಗಳಲ್ಲಿ ತುಲಸಿಯನ್ನು ಚಯನ ಮಾಡಬೇಕು. ಇದರಿಂದ ತನ್ನ ಜೀವನ ಯಾವುದೇ ರೀತಿಯಾದ ವಿನಾಶಕ್ಕೆ ಒಳಗಾಗುವುದಿಲ್ಲ.

ಮೇಲೆ ತಿಳಿಸಿದ ದಿನಗಳಲ್ಲಿ ತುಲಸೀಚಯನವನ್ನು ಮಾಡಿದವರಿಗೆ ಬ್ರಹ್ಮಹತ್ಯಾ ಮಾಡಿದ ಪಾಪವು ಬರುತ್ತದೆ. ಹಾಗೆ ಮಾಡಿದ ಪಕ್ಷದಲ್ಲಿ ದೇವರನ್ನು ತಿರಸ್ಕರಿಸಿದಂತೆ ಆಗುತ್ತದೆ. ಆದ್ದರಿಂದ ಆ ದಿನಗಳಲ್ಲಿ ತುಲಸೀಚಯನವನ್ನು ಮಾಡಬಾರದು.

**ನಿಷೇಧಕ್ಕೆ ಅಪವಾದ**

ತುಲಸೀಚಯನವನ್ನು ಹಲವು ಯೋಗ, ವಾರ ಮತ್ತು ತಿಥಿಗಳಲ್ಲಿ ನಿಷೇಧಿಸಿದ ಶಾಸ್ತ್ರವೇ ಆ ನಿಷೇಧಕ್ಕೆ ಅಪವಾದವನ್ನು ತಿಳಿಸುತ್ತದೆ. ವಿಷ್ಣುರಹಸ್ಯ, ರುದ್ರಯಾಮಲ ಎಂಬ ತಂತ್ರಗ್ರಂಥ ಈ ವಿಷಯಗಳನ್ನು ಸ್ಪಷ್ಟವಾಗಿ ತಿಳಿಸುತ್ತವೆ. ಆ ವಚನಗಳನ್ನು ಅವಲೋಕಿಸಿ-

**ಸಂಕ್ರಾಂತ್ಯಾದಿನಿಷೇಧಸ್ತು ಪರೇಷಾಂ ಪರಿಕೀರ್ತಿತಃ ।**
**ಕಶ್ಚಿನ್ನ ತುಲಸೀಂ ಚ್ಛಿಂದ್ಯಾತ್ ದ್ವಾದಶ್ಯಾಮೇವ ವೈಷ್ಣವಃ ॥**

**ನಿಷಿದ್ಧತಿಥಿವಾರೇಷು ತುಲಸ್ಯಾಹರಣಂ ಮುನೇ ।**
**ವೈಷ್ಣವಾನಾಂ ನ ದೋಷಾಯ ವಿಷ್ಣೋಃ ಪ್ರೀತಿಕರತ್ವತಃ ॥ -ವಿ.ರ**

ಸಂಕ್ರಾಂತಿ ಮೊದಲಾದ ವಿಶೇಷದಿವಸಗಳಲ್ಲಿ ತುಲಸೀಚಯನವನ್ನು ಅವೈಷ್ಣವರಿಗೆ ನಿಷೇಧಿಸಿದ್ದಾರೆ. ಆದರೆ ವೈಷ್ಣವನಾದವನು ದ್ವಾದಶಿಯ ದಿವಸ ಮಾತ್ರ ತುಲಸೀ ಚಯನವನ್ನು ಮಾಡಬಾರದು. ದ್ವಾದಶಿಯ ಹೊರತು ಉಳಿದ ದಿವಸಗಳಲ್ಲಿ ಅವಶ್ಯವಾಗಿ ತುಲಸೀಚಯನವನ್ನು ಮಾಡಬಹುದು. ಇದರಿಂದ ಬ್ರಹ್ಮಹತ್ಯಾದೋಷದ ಪ್ರಸಕ್ತಿ ಸರ್ವಥಾ ಇರುವುದಿಲ್ಲ. ಈ ವಿಷಯವನ್ನು ಧೈರ್ಯದಿಂದ ತಿಳಿದುಕೊಳ್ಳಬೇಕು.

**ರುದ್ರಯಾಮಲ ಹೇಳುವಂತೆ**

**ದೇವಾರ್ಥಂ ತುಲಸೀಚ್ಛೇದೋ ಹೋಮಾರ್ಥಂ ಸಮಿಧಸ್ತಥಾ ।**
**ಇಂದುಕ್ಷಯೇ ನ ದುಷ್ಯೇತ ಗವಾರ್ಥೇ ತು ತೃಣಸ್ಯ ಚ ॥ -ರು.ಯಾ**

ಭಗವಂತನಿಗಾಗಿ ತುಲಸೀಚಯನವು, ಹೋಮಕ್ಕಾಗಿ ಸಮಿತ್ತುಗಳ ಸಂಗ್ರಹವು, ಆಕಳಿಗಳಿಗಾಗಿ ಹುಲ್ಲಿನ ಸಂಗ್ರಹವು ಅಮಾವಾಸ್ಯಾದಿನದಲ್ಲಿಯೂ ನಿಷಿದ್ಧವಾಗುವುದಿಲ್ಲ.

**ಮಧ್ಯಾಹ್ನ ತುಲಸೀಚಯನ ಮಾಡಬಾರದು**

**ಮಧ್ಯಾಹ್ನಾತ್ಪರತಸ್ತಸ್ಯ ಹರೇಃ ಪೂಜಾರತಾಸ್ತಥಾ ।**
**ಛಿಂದಂತಿ ತುಲಸೀಂ ಮೂಢಾಃ ಅಧೋ ಗಚ್ಛಂತಿ ಮಾನವಾಃ ॥**

ದ್ವಾದಶಿಯ ಹೊರತು ಯಾವುದೇ ದಿನ ತುಲಸಿಯ ಚಯನಕ್ಕೆ ನಿಷಿದ್ಧವಲ್ಲ. ಆದರೂ ಪ್ರತಿನಿತ್ಯ ಮಧ್ಯಾಹ್ನದ ನಂತರ ತುಲಸೀಚಯನವನ್ನು ಮಾಡಬಾರದು. ಇದರಿಂದ ಅನರ್ಥವಾಗುತ್ತದೆಂದು ಸ್ಮೃತಿಗಳು ತಿಳಿಸುತ್ತವೆ.

ಇಂಥದ್ದೇ ಮತ್ತೊಂದು ಪ್ರಮಾಣ ಈ ರೀತಿಯಾಗಿದೆ-

**ಮಧ್ಯಾಹ್ನಾದುತ್ತರಂ ಯಸ್ತು ಹರಿಪೂಜಾಪರಃ ಸ್ಥಿತಃ ।**
**ತುಲಸೀಚ್ಛೇದನಾನ್ಮೂರ್ಖೋ ಅಧೋಗತಿಮವಾಪ್ನುಯಾತ್ ॥**

ಮಧ್ಯಾಹ್ನದ ಕಾಲದಲ್ಲಿ ತುಲಸಿಯ ಚಯನವನ್ನು ಸರ್ವಥಾ ಮಾಡಬಾರದು. ಪರಮಾತ್ಮನ ಪೂಜೆಗಾಗಿಯೂ ತುಲಸೀಚ್ಛೇದನ ಮಾಡಿದಲ್ಲಿ ಅವನಿಗೆ ಅಧೋಗತಿಯಾಗುತ್ತದೆ.

ಹೀಗೆ ಇಷ್ಟೆಲ್ಲ ಪ್ರಮಾಣಗಳಿರುವುದರಿಂದ ವೈಷ್ಣವನಾದವನು ಕೇವಲ ದೇವರ ಅರ್ಚನೆಯ ಉದ್ದೇಶದಿಂದ ಅಮಾವಾಸ್ಯಾದಿದಿನಗಳಲ್ಲಿ ಅವಶ್ಯವಾಗಿ ತುಲಸೀಚಯನವನ್ನು ಮಾಡಬಹುದು. ದ್ವಾದಶಿಯ ದಿನ ಮಾತ್ರ ತುಲಸೀಚಯನ ವೈಷ್ಣವರಿಗೂ ನಿಷಿದ್ಧವಾಗಿದೆ ಎಂಬುದಾಗಿ ತಿಳಿಯಬೇಕು.

ಒಟ್ಟಾರೆ ತಿಳಿಯುವುದಾದರೆ, ದೇವರ ಪೂಜೆಯ ಹೊರತಾಗಿ ಇತರ ದೇವತೆಗಳ ಪೂಜೆಯ ಉದ್ದೇಶದಿಂದ ಅಥವಾ ರೋಗಾದಿಗಳಿಗೆ ಔಷಧಕ್ಕಾಗಿ ಬೇಕೆಂಬ ಉದ್ದೇಶದಿಂದ ಸಂಕ್ರಾತ್ಯಾದಿನಿಷಿದ್ಧದಿವಸಗಳಲ್ಲಿ ಚಯನ ಮಾಡಬಾರದು. ಇದರ ಹೊರತಾಗಿ ಕೇವಲ ದೇವರ ಪೂಜೆಯ ಉದ್ದೇಶದಿಂದ ತುಲಸಿಯನ್ನು ನಿಷಿದ್ಧವಾದ ದಿವಸಗಳಲ್ಲಿಯೂ ಅವಶ್ಯವಾಗಿ ಸಂಗ್ರಹಿಸಬಹುದು. ದ್ವಾದಶಿಯ ದಿವಸ ಮಾತ್ರ ವೈಷ್ಣವರು ಕೂಡಾ ವಿಷ್ಣುಪೂಜೆಯ ಉದ್ದೇಶದಿಂದಲೂ ತುಲಸಿಯನ್ನು ಸಂಗ್ರಹಿಸಬಾರದು. ತುಲಸಿಯ ಚಯನಕ್ಕೆ ಸರ್ವಥಾ ನಿಷಿದ್ಧವಾದ ದಿವಸ ದ್ವಾದಶಿ ಮಾತ್ರ. ಹಾಗೆಯೇ ಪ್ರತಿನಿತ್ಯವೂ ಮಧ್ಯಾಹ್ನವಾದ ನಂತರ ತುಲಸೀಚಯನ ಮಾಡಬಾರದು. ಮತ್ತು ಜನನ-ಮರಣಸೂತಕಗಳಲ್ಲಿಯೂ ತುಲಸೀಚಯನ ಮಾಡಬಾರದು. ಈ ವಿಷಯವನ್ನು ಗಮನದಲ್ಲಿರಿಸಿಕೊಳ್ಳಬೇಕು.

**ಸ್ತ್ರೀಶೂದ್ರರಿಗೆ ತುಲಸೀಚಯನ ನಿಷಿದ್ಧ**

ಸ್ತ್ರೀಯರು ಮತ್ತು ಶೂದ್ರಾದಿಗಳು ತುಲಸೀಚಯನವನ್ನು ಮಾಡಬಾರದು. ಈ ವಿಷಯವನ್ನು ವಿಜಯದಾಸರು ತಮ್ಮ ಸುಳಾದಿಯಲ್ಲಿ ಹೀಗೆ ತಿಳಿಸುತ್ತಾರೆ-

> **ಯುವತಿಶೂದ್ರರಿಂ ತರಿಸುವದುಚಿತವಲ್ಲೆಂದು ತಿಳಿದು ಕೊಂಡಾಡುತಿರಿ**
> **ದಿವಸದಿವಸಗಳೊಳಯ್ಯ ॥**

ಬ್ರಾಹ್ಮಣಾದಿ ಯಾವುದೇ ಜಾತಿಯ ಸ್ತ್ರೀಯರು ತುಲಸೀಚಯನವನ್ನು ಸರ್ವಥಾ ಮಾಡಬಾರದು. ಮತ್ತು ಶೂದ್ರಪುರುಷರು ಕೂಡಾ ತುಲಸೀಚಯನವನ್ನು ಮಾಡಬಾರದು. ತುಲಸೀಪೂಜೆಯನ್ನು ಸ್ತ್ರೀಯರು ದಿನನಿತ್ಯವೂ ತಪ್ಪದೇ ಮಾಡಬೇಕು. ಆದರೆ ತುಲಸೀಚಯನವನ್ನು, ತುಲಸಿಯಿಂದ ಪೂಜೆಯನ್ನು ಸ್ತ್ರೀಯರು ಸರ್ವಥಾ ಮಾಡಬಾರದು.

**ಇಂತಹ ತುಲಸಿಯನ್ನು ದೇವರಿಗೆ ಸಮರ್ಪಿಸಕೂಡದು**

> **ಆಹೃತಾऽನ್ಯತ್ರ ಚೋಪ್ತಾನಿ ಚೌರ್ಯಾಲ್ಲಬ್ಧಾನಿ ನಾऽರ್ಪಯೇತ್ ।**
> **ಶೂದ್ರಾಹೃತಾನಿ ಭೂಮೌ ಚ ಗಲಿತಾನಿ ತಥೈವ ಚ ॥**

**ಏರಂಡಾರ್ಕಜಪತ್ರೇ ತು ಆಹೃತಾನಿ ಕರೇಣ ಚ ।**
**ಪಟಾಹೃತಾನಿ ಯಾನಿ ಸ್ಯುಃ ವರ್ಜಯೇತ್ತಾನಿ ಯತ್ನತಃ ॥**

ತನ್ನ ಮನೆಯಲ್ಲದೇ ಮತ್ತೊಂದು ಸ್ಥಳದಲ್ಲಿ ಬೆಳೆದಿರುವ ತುಲಸೀ-ಪುಷ್ಪಗಳಿಂದ ದೇವರನ್ನು ಅರ್ಚಿಸಬಾರದು. ಅನಿವಾರ್ಯಪ್ರಸಂಗದಲ್ಲಿ ಹಾಗೆ ಮಾಡುವ ಪ್ರಸಂಗ ಬಂದರೂ ಆ ಸ್ಥಳದ ಯಜಮಾನನಿಗೆ ಹೇಳಿ ತುಲಸೀ-ಪುಷ್ಪಗಳನ್ನು ಸ್ವೀಕರಿಸಬೇಕು. ಯಾರಿಗೂ ಹೇಳದೇ ತಂದ ತುಲಸೀ-ಪುಷ್ಪಗಳಿಂದ ಪರಮಾತ್ಮನನ್ನು ಸರ್ವಥಾ ಪೂಜಿಸಬಾರದು. ಮತ್ತು ಶೂದ್ರರು ತಂದಿರುವ, ಅಶುದ್ಧವಾದ ಭೂಮಿಯಲ್ಲಿ ಬಿದ್ದಿರುವ, ಎಕ್ಕೆಎಲೆಯಲ್ಲಿ, ಕೈಯಲ್ಲಿ, ವಸ್ತ್ರದಲ್ಲಿ ತಂದಿರುವ ತುಲಸೀ-ಪುಷ್ಪಗಳಿಂದ ದೇವರನ್ನು ಅರ್ಚಿಸಕೂಡದು.

**ಶೂದ್ರಾಹೃತಾನಾಂ ತುಲಸೀಪುಷ್ಪಾಣಾಂ ಚ ಸಮರ್ಪಣಮ್ ।**
**ಅನ್ಯಾವಶಿಷ್ಟನಿರ್ಮುಕ್ತಪುಷ್ಪಾಣಾಂ ಚ ಸಮರ್ಪಣಮ್ ॥**

**ನಿರ್ಗಂಧಕುಸುಮಾರ್ಚಾ ಚ ತುಲಸೀರಹಿತಾಽರ್ಚನಮ್ ।**
**ಅಪ್ರಕ್ಷಾಳ್ಯ ಚ ಪುಷ್ಪಾಣಿ ಪ್ರಕ್ಷಾಳ್ಯ ತುಲಸೀಂ ತಥಾ ॥**

ಶತಾಪರಾಧಸ್ತೋತ್ರದಲ್ಲಿ ನೂರು ಅಪರಾಧಗಳಲ್ಲಿ ಇದನ್ನೂ ಪರಿಗಣಿಸಿದ್ದಾರೆ. ಶೂದ್ರರು ತಂದಿರುವ ತುಲಸೀ-ಪುಷ್ಪಗಳಿಂದ ಭಗವಂತನನ್ನು ಅರ್ಚಿಸುವುದು, ದೇವರಿಗಲ್ಲದೇ ರಮಾದಿದೇವತೆಗಳ ಅವಶಿಷ್ಟವಾದ ತುಲಸಿಯಿಂದ ದೇವರನ್ನು ಅರ್ಚಿಸುವುದು, ಕೆಳಗೆ ಬಿದ್ದಿರುವ ತುಲಸೀ-ಪುಷ್ಪಗಳಿಂದ ಅರ್ಚಿಸುವುದು, ಸುಗಂಧವಾಗಿರದ, ದುರ್ಗಂಧದಿಂದ ಯುಕ್ತವಾದ ಪುಷ್ಪಗಳಿಂದ ಪರಮಾತ್ಮನನ್ನು ಅರ್ಚಿಸುವುದು, ತುಲಸಿಯಿಲ್ಲದೆ ಕೇವಲ ಪುಷ್ಪಗಳಿಂದ ಅರ್ಚಿಸುವುದು, ಪ್ರಕ್ಷಾಲನೆ ಮಾಡದೇ ಪುಷ್ಪಗಳಿಂದ ಅರ್ಚಿಸುವುದು, ಪ್ರಕ್ಷಾಲಿತವಾದ ತುಲಸಿಯಿಂದ ದೇವರನ್ನು ಅರ್ಚಿಸುವುದು ಇವೆಲ್ಲ ಅಪರಾಧಗಳಾಗುತ್ತವೆ. ಆದ್ದರಿಂದ ಈ ಕೆಲಸಗಳನ್ನು ಮಾಡಕೂಡದು.

**ತುಲಸಿಯನ್ನು ದೇವರು ಬೆನ್ನು ಹತ್ತುತ್ತಾನೆ**

**ತುಲಸೀಗ್ರಹಣಂ ಕೃತ್ವಾ ಯತ್ರ ಯತ್ರ ವ್ರಜಂತಿ ಚ ।**
**ತತ್ರ ತತ್ರ ಹರಿರ್ಯಾತಿ ಗೌರ್ಯಥಾ ಸುತವಲ್ಲಭಾ ॥ -ಸ್ಕ.ಪು**

ತುಲಸಿಯನ್ನು ಚಯನಮಾಡಿದವನು ಎಲ್ಲಿ ಎಲ್ಲಿ ಸಂಚರಿಸುತ್ತಾನೋ ಅಲ್ಲೆಲ್ಲ ಕಡೆಗೆ ಪರಮಾತ್ಮನೂ ಆಕಳಿನ ಹಿಂದೆ ಕರುವಿನಂತೆ ವಾತ್ಸಲ್ಯದಿಂದ ಸಂಚರಿಸುತ್ತಾನೆ.

ಆದ್ದರಿಂದ ತುಲಸಿಯನ್ನು ಚಯನಮಾಡಿದವನು ನೇರವಾಗಿ ಮನೆಗೆ ಬರಬೇಕು. ಮತ್ತೆಲ್ಲಿಯೂ ಹೋಗಬಾರದೆಂದು ಹಿರಿಯರು ಹೇಳುತ್ತಾರೆ. ನೇರವಾಗಿ ತನ್ನ ಮನೆಗೆ ಬಂದಾಗ ಶ್ರೀಹರಿಯು ಕೂಡಾ ತನ್ನ ಮನೆಗೇ ಬರುತ್ತಾನೆ.

**ತುಲಸಿ ಇಲ್ಲದ ಪೂಜೆ**

ಶ್ರೀಹರಿಯ ಅರ್ಚನೆಯನ್ನು ಮಾಡುವಲ್ಲಿ ಪ್ರಧಾನವಾದದ್ದು ತುಲಸೀ ಎಂದು ತಿಳಿದಿದ್ದೇವೆ. ಪುಷ್ಪಗಳು ಮತ್ತು ಮುಕ್ತಾಮಯವಾದ ಆಭರಣಗಳೆಲ್ಲ ತುಲಸಿಯ ಹಿಂದೆಯೇ ಎಂದು ತಿಳಿಸುವ ಪದ್ಮಪುರಾಣದ ಈ ವಚನವನ್ನು ಗಮನಿಸಬೇಕು-

**ತಾವದ್ಗರ್ಜಂತಿ ಪುಷ್ಪಾಣಿ ತಥಾ ಮುಕ್ತಾಮಯಾನಿ ಚ ।**
**ಯಾವನ್ನ ಪ್ರಾಪ್ಯತೇ ಪುಣ್ಯಾ ತುಲಸೀ ವಿಷ್ಣುವಲ್ಲಭಾ ॥**

ಎಲ್ಲಿಯ ವರೆಗೆ ತುಲಸಿಯ ಪ್ರಾಪ್ತಿಯಾಗುವುದಿಲ್ಲವೋ ಅಲ್ಲಿಯ ವರೆಗೆ ಸಕಲ ಪುಷ್ಪಗಳಿಗೆ ಸ್ಥಾನ. ಮುಕ್ತಾಮಯವಾದ ಆಭರಣಗಳಿಗೂ ಅಲ್ಲಿಯ ವರೆಗೆ ಸ್ಥಾನ. ತುಲಸಿಯ ಪ್ರಾಪ್ತಿಯಾಯಿತೆಂದರೆ ಪುಷ್ಪಗಳು, ಮುಕ್ತಾಮಯವಾದ ಆಭರಣಗಳು ಹಿಂದೆ ಸರಿಯುತ್ತವೆ. ತುಲಸಿಯು ಪುಷ್ಪ-ಮುಕ್ತಾಮಯವಾದ ಆಭರಣಗಳಿಗಿಂತಲೂ ಹೆಚ್ಚಿನ ಪುಣ್ಯವನ್ನು ಮಾಡಿದೆ. ಹೀಗಾಗಿ ಶ್ರೀಹರಿಗೆ ಅತಿಶಯವಾಗಿ ಪ್ರಿಯವಾಗಿದೆ.

ಇದೇ ವಿಷಯವನ್ನು ಮತ್ತಿಷ್ಟು ವಿಶೇಷವಾಗಿ ತಿಳಿಸುವ ಸ್ಕಂದಪುರಾಣದ ವಚನ ಇದಾಗಿದೆ-

**ಮಣಿಕಾಂಚನಪುಷ್ಪಾಣಿ ತಥಾ ಮುಕ್ತಾಮಯಾನಿ ಚ ।**
**ತುಲಸೀದಲಪತ್ರಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥**

ಮಣಿಗಳು, ಬಂಗಾರದ ಆಭರಣಗಳು, ಪುಷ್ಪಗಳು ಮತ್ತು ಮುಕ್ತಾಮಯವಾದ ಆಭರಣಗಳು ತುಲಸೀದಲಕ್ಕೆ ಇರುವ ಹದಿನಾರನೆಯ ಒಂದಂಶಕ್ಕೂ ಸರಿತೂಗುವುದಿಲ್ಲ.

**ತುಲಸಿ ಇಲ್ಲದೇ ಪುಷ್ಪವನ್ನು ಏರಿಸಲೇ ಬಾರದು**

**ತುಲಸೀದಲಸಂತ್ಯಕ್ತಪುಷ್ಪೇಣಾಭ್ಯರ್ಚನಂ ಮಮ ।**
**ಉತ್ತರಾಷಾಢಮಿಲಿತಶ್ರವಣದ್ವಾದಶೀವ್ರತಮ್ ।**
**ಸುರಾಯಾ ಬಿಂದುನಾ ಸ್ಪೃಷ್ಟತೀರ್ಥವತ್ತೂಭಯಂ ತ್ಯಜೇತ್ ॥ -ವಿ.ರ**

ತುಲಸಿ ಇಲ್ಲದೇ ಕೇವಲ ಪುಷ್ಪಗಳಿಂದ ಪರಮಾತ್ಮನನ್ನು ಪೂಜಿಸಬಾರದು. ಉತ್ತರಾಷಾಢನಕ್ಷತ್ರದಿಂದ ಸಹಿತವಾದ ಶ್ರವಣವನ್ನು ಉಪವಾಸಕ್ಕೆ ಸ್ವೀಕರಿಸಬಾರದು. ಸುರೆಯಿಂದ ಯುಕ್ತವಾದ ತೀರ್ಥವನ್ನು ಸ್ವೀಕರಿಸಬಾರದು. ಇವುಗಳು ತ್ಯಾಗಾರ್ಹವೆನಿಸಿವೆ. ತುಲಸೀರಹಿತಪುಷ್ಪಗಳಿಂದ ಪೂಜೆಯನ್ನು ಪರಿತ್ಯಜಿಸಬೇಕು. ಹೀಗೆಂದು ವಿಷ್ಣುರಹಸ್ಯವು ತಿಳಿಸುತ್ತದೆ.

ಆದ್ದರಿಂದ ತುಲಸಿ ಇಲ್ಲದ ಪೂಜೆಯನ್ನು ಪರಮಾತ್ಮ ಸ್ವೀಕರಿಸಲಾರ ಎಂದು ಶಾಸ್ತ್ರಗಳು ತಿಳಿಸುತ್ತವೆ. ಮತ್ತು ತುಲಸಿ ಇಲ್ಲದಿರುವಾಗ ತುಲಸಿಯ ಸ್ಮರಣೆಯನ್ನಾದರೂ ಮಾಡಬೇಕೆಂದು ಸ್ಮೃತಿಗಳು ತಿಳಿಸುತ್ತವೆ.

ಭಾರತೀಯರ ಧರ್ಮಗಳೆಲ್ಲ ಸನಾತನವಾಗಿವೆ. ಅತಿ ಅಪರೂಪವಾಗಿವೆ. ವಿಶಿಷ್ಟವಾಗಿವೆ. ಅಷ್ಟೇ ಪ್ರಾಮಾಣಿಕವಾಗಿವೆ. ಪುರಾಣೇತಿಹಾಸಗಳಲ್ಲಿ ಸ್ವಯಂ ಪರಮಾತ್ಮನೇ ಈ ಧರ್ಮಗಳನ್ನು ತಿಳಿಸಿದ್ದಾನೆ. ಮಾತ್ರವಲ್ಲ. ಭಾರತಭೂಮಿಯಲ್ಲಿ ಅವತರಿಸಿ ಆ ಧರ್ಮಗಳನ್ನೆಲ್ಲ ಆಚರಿಸಿ ತೋರಿಸಿದ್ದಾನೆ. ರಮಾದೇವಿಯೂ ಕೂಡಾ ಭಗವಂತನ ಆಜ್ಞೆಯನ್ನು ಗೌರವದಿಂದ ಹೊತ್ತು ಆಯಾ ಧರ್ಮಗಳನ್ನು ಪಾಲಿಸಿದ್ದಾಳೆ. ದೇವರನ್ನು ಒಪ್ಪುವವರೆಲ್ಲರೂ ಈ ರಮಾರಮೇಶರನ್ನು ಆದರ್ಶವಾಗಿಟ್ಟುಕೊಂಡು ಸನಾತನವಾದ ಧರ್ಮಗಳನ್ನು ಪಾಲಿಸಲು ಮುಂದಾಗಬೇಕು.

ಪುರುಷರಿಗೆ ಮಾತ್ರ, ಮನುಷ್ಯರಿಗೆ ಮಾತ್ರ ಗೌರವ ಕೊಡುವ ಸಂಪ್ರದಾಯ ಭಾರತೀಯರದ್ದಲ್ಲ. ಪಶು-ಪಕ್ಷಿ-ಕ್ರಿಮಿ-ಕೀಟ-ವೃಕ್ಷಗಳನ್ನೂ ಪೂಜಿಸುವ ಸಂಪ್ರದಾಯ ನಮ್ಮದು. ವಿಷವ ನೀಡುವ ಹಾವಿಗೂ ಹಾಲೆರೆಯುವ ಸಂಪ್ರದಾಯ ನಮ್ಮದಾಗಿದೆ. ಈ ಧರ್ಮಗಳೆಲ್ಲ ಅತಿ ವಿಶಿಷ್ಟವಾಗಿವೆ. ಆದರೇ ಈ ಗೌರವ ಯಾವ ಕಾರಣಕ್ಕಾಗಿ ಎಂಬುದು ಯಾರಿಗೂ ಗೊತ್ತಿಲ್ಲ. ಈ ಪರಂಪರೆ ಅಂಧಾನುಗತವಲ್ಲ. ಈ ಆಚರಣೆಗಳೆಲ್ಲ ಅಜ್ಞಾನಪೂರ್ವಕವಾದವುಗಳಲ್ಲ. ಈ ಆಚರಣೆಗಳ ಹಿನ್ನೆಲೆಯನ್ನು ಸರಿಯಾಗಿ ತಿಳಿಯದಿರುವುದೇ ಗೊಂದಲಕ್ಕೆ ಕಾರಣವಾಗಿದೆ.

**ತುಲಸಿ ಇಲ್ಲದ ಪೂಜೆ ಕೊಳ್ಳನು**

ತುಲಸಿ ಇಲ್ಲದೇ ಮಾಡಿದ ಪೂಜೆಯನ್ನು ಪರಮಾತ್ಮ ಸ್ವೀಕರಿಸುವುದಿಲ್ಲ. ಇದನ್ನು ಗರುಡಪುರಾಣ ಈ ರೀತಿಯಾಗಿ ತಿಳಿಸುತ್ತದೆ-

**ತುಲಸೀಂ ಪ್ರಾಪ್ಯ ಯೋ ನಿತ್ಯಂ ನ ಕರೋತಿ ಮಮಾಽರ್ಚನಮ್ ।**
**ತಸ್ಯಾಽಹಂ ಪ್ರತಿಗೃಹ್ಣಾಮಿ ನ ಪೂಜಾಂ ಶತವಾರ್ಷಿಕೀಮ್ ॥ -ಗ.ಪು**

ಮನೆಯಲ್ಲಿ ತುಲಸಿಯ ವನವಿರುತ್ತದೆ. ಸಾಕಷ್ಟು ತುಲಸಿಯನ್ನು ವೈಷ್ಣವರು ತಂದು ಕೊಟ್ಟಿರುತ್ತಾರೆ. ತುಲಸಿಯ ಸಂಪತ್ತಿ ಹೀಗಿದ್ದರೂ ಕೂಡಾ ಹಲವರು ಬೇಸರದಿಂದ ನನ್ನ ಅರ್ಚನೆಯನ್ನು ಮಾಡುವುದಿಲ್ಲ. ಅಂಥವರು ನೂರಾರುವರ್ಷ ನನ್ನ ಪೂಜೆಯನ್ನು ಮಾಡಿದರೂ ಅವರು ಮಾಡಿದ ಪೂಜೆಯನ್ನು ನಾನು ಕೈಗೊಳ್ಳುವುದಿಲ್ಲ.

**ತುಲಸೀಮಾಲೆಯ ಮಹಿಮೆ**

ವೈಶಂಪಾಯನರನ್ನು ಕುರಿತು ವ್ಯಾಸರು ಹೇಳಿದ ತುಲಸೀಮಾಲೆಯ ಮಹಿಮೆಯು ಈ ರೀತಿಯಾಗಿದೆ-

**ಪುಷ್ಪಮಾಲಾಸಹಸ್ರೇಣ ತುಲ್ಯಮೇಕಂ ಚ ನೀರಜಮ್ ।**
**ನೀರಜಾನಾಂ ಸಹಸ್ರೇಣ ತುಲ್ಯೈಕಾ ಪದ್ಮಮಾಲಿಕಾ ॥**

**ಪದ್ಮಮಾಲಾಸಹಸ್ರೇಣ ಸಮಂ ಶ್ರೀತುಲಸೀದಲಮ್ ।**
**ಸಹಸ್ರತುಲಸೀಪರ್ಣೈಃ ತುಲಸೀಮಂಜರೀ ಸಮಾ ॥**

**ತುಲಸೀಮಂಜರೀಣಾಂ ಚ ಕೋಟಿಭಿಃ ಸದೃಶೀ ಭವೇತ್ ।**
**ಏಕಾ ಶ್ರೀ ತುಲಸೀಮಾಲಾ ಧರ್ಮಧಾಮೇಶಪೂಜನೇ ॥**

ಸಾವಿರ ಹೂಮಾಲೆಗಳಿಗೆ ಒಂದು ಕಮಲಪುಷ್ಪ ಸಮವಾಗಿದೆ. ಸಾವಿರ ಕಮಲಗಳಿಗೆ ಸಮಾನವಾಗಿದೆ ಒಂದು ಪದ್ಮಮಾಲೆ.

ಸಾವಿರ ಪದ್ಮಮಾಲೆಗಳಿಗೆ ಒಂದು ದಲ ಶ್ರೀತುಲಸಿ ಸಮಾನವಾಗಿದೆ. ಸಾವಿರ ತುಲಸೀದಲಗಳಿಗೆ ಸಮಾನವಾಗಿದೆ ತುಲಸೀಮಂಜರೀ.

ಇಂತಹ ಕೋಟಿತುಲಸೀಮಂಜರೀಗಳಿಗೆ ಸಮಾನವಾಗಿದೆ ಒಂದು ತುಲಸೀಮಾಲೆ. ಆದ್ದರಿಂದ ದಲಗಳಿಂದ ತುಲಸೀಮಾಲೆಯನ್ನು ಮಾಡಿ ಭಗವಂತನಿಗೆ ಸಮರ್ಪಿಸಬೇಕು.

**ತುಲಸೀಪ್ರಕ್ಷಾಲನ ಮಾಡಬಾರದು**

**ಮಮ ಪ್ರಿಯಾಂ ತು ತುಲಸೀಂ ಪ್ರಕ್ಷಾಲ್ಯ ತು ಕರೋತಿ ಯಃ ।**
**ಸ ಪಾಪೀ ಬ್ರಹ್ಮಘಾತೀ ಸ್ಯಾನ್ನಿರಯಂ ಸೋಽಧಿಗಚ್ಛತಿ ॥**

ತುಲಸಿಯನ್ನು ಪ್ರಕ್ಷಾಲನ ಮಾಡಿ ಅದರಿಂದ ದೇವರನ್ನು ಅರ್ಚಿಸಬಾರದು. ಹಾಗೆ ಮಾಡಿದರೆ ಬ್ರಹ್ಮಹತ್ಯಾ ಮಾಡಿದ ಪಾಪವು ಅಂಟಿಕೊಳ್ಳುತ್ತದೆ. ಆ ಪಾಪದಿಂದ ನಿರಯವನ್ನು ಅನುಭವಿಸಬೇಕಾಗಿ ಬರುತ್ತದೆ. ಆದ್ದರಿಂದ ಪ್ರಕ್ಷಾಲನ ಮಾಡದೇ ತುಲಸಿಯಿಂದ ದೇವರನ್ನು ಸದಾ ಅರ್ಚಿಸಬೇಕು.

**ಪ್ರಕ್ಷಾಲನ ವಿಧಿಗೆ ಅಪವಾದ**

**ಶುಷ್ಕಂ ಪರ್ಯುಷಿತಂ ವಾಽಪಿ ನಿರ್ಮಾಲ್ಯಂ ಚ ತ್ರಿವಾಸರೇ ।**
**ಪ್ರಕ್ಷಾಲಯಿತ್ವಾ ತುಲಸೀಂ ಪೂಜಾರ್ಹಾಂ ಸತತಂ ಹರೇಃ ॥**

ಹೊಸದಾದ ತುಲಸಿಯನ್ನು ಅರ್ಥಾತ್ ದೇವರಿಗೆ ಏರಿಸದೇ ಇರುವ ತುಲಸಿಯನ್ನು ಅರ್ಚನೆಗೆ ಉಪಯೋಗಿಸುತ್ತಿರುವಾಗ ಆ ತುಲಸಿಯನ್ನು ನೀರಿನಿಂದ ತೊಳೆಯಬಾರದು.

ಆದರೆ ತುಲಸಿ ಇಲ್ಲದಿರುವಾಗ ದೇವರಿಗೆ ಮಾತ್ರ ಏರಿಸಿದ ರಮಾವಾಯ್ವಾದಿಗಳಿಗೆ ಏರಿಸದ ತುಲಸಿಯನ್ನು ಮೂರುದಿನಗಳ ತನಕ ದೇವರಿಗೆ ಏರಿಸಬಹುದು. ಮೂರುದಿನದ ತನಕ ತುಲಸಿಯು ನಿರ್ಮಾಲ್ಯವಾಗುವುದಿಲ್ಲ. ಆದರೇ ಈ ತುಲಸಿಯಿಂದ ದೇವರನ್ನು ಅರ್ಚಿಸುವಾಗ ಅದನ್ನು ನೀರಿನಿಂದ ಪ್ರಕ್ಷಾಲನ ಮಾಡಬೇಕು. ಆ ತುಲಸಿಯು ದೇವರ ಪೂಜೆಗೆ ಅರ್ಹವಾಗುತ್ತದೆ. ಅಪ್ರಕ್ಷಾಲಿತವಾದ ತುಲಸಿಯಿಂದ ದೇವರನ್ನು ಸರ್ವಥಾ ಅರ್ಚಿಸಬಾರದು.

**ಹತ್ತು ದಿನಗಳ ತನಕ ನಿರ್ಮಾಲ್ಯವಲ್ಲ**

**ತುಲಸ್ಯಾಂ ಬಿಲ್ವಪತ್ರೇಷು ಸರ್ವೇಷು ಜಲಜೇಷು ಚ ।**
**ನ ಪರ್ಯುಷಿತದೋಷೋಽಸ್ತಿ ಮಾಲಾಕಾರಗೃಹೇಷು ಚ ॥**

ತುಲಸಿ, ಬಿಲ್ವಪತ್ರ, ಮತ್ತು ನೀರಿನಲ್ಲಿ ಬೆಳೆಯುವ ಎಲ್ಲ ರೀತಿಯಾದ ಪುಷ್ಪಗಳಿಗೆ ಪರ್ಯುಷಿತವೆಂಬ ದೋಷವಿರುವುದಿಲ್ಲ. ಮತ್ತು ಹೂವಾಡಿಗನ ಮನೆಯಲ್ಲಿಯ ಎಲ್ಲ ಪುಷ್ಪಗಳು ಕೂಡಾ ಪರ್ಯುಷಿತದೋಷನಿರ್ಮುಕ್ತ- ವಾಗಿರುತ್ತವೆ.

**ಪಲಾಶಂ ದಿನಮೇಕಂ ಚ ಪಂಕಜಂ ಚ ದಿನತ್ರಯಮ್ ।**
**ಪಂಚಾಹಂ ಬಿಲ್ವಪತ್ರಂ ಚ ದಶಾಽಹಂ ತುಲಸೀದಲಮ್ ॥ -ಸ್ಕ.ಪು**

ಮುತ್ತುಗದ ಹೂ ಒಂದುದಿನ, ಕಮಲ ಮೂರುದಿನ, ಬಿಲ್ವಪತ್ರ ಐದುದಿನ ಮತ್ತು ತುಲಸಿ ಹತ್ತು ದಿನಗಳ ವರೆಗೆ ನಿರ್ಮಾಲ್ಯವೆನಿಸುವುದಿಲ್ಲ.

**ರಮಾದೇವಿಯೂ ತುಲಸಿಯಿಂದ ಪೂಜಿಸುತ್ತಾಳೆ**

ದೇವರನ್ನು ತುಲಸಿಯಿಂದ ಅರ್ಚಿಸಬೇಕೆಂದು ಈಗ ತಿಳಿಯುತ್ತಿದ್ದೇವೆ. ಅರ್ಚಿಸುವಾಗ ನಮ್ಮಲ್ಲಿ ಅಭಿಮಾನವಿರಬಾರದು. ನಾನೇ ಬೆಳೆಸಿ, ನಾನೇ ತೆಗೆದು, ಕೋಮಲವಾದ ದಲಗಳಿಂದ ನಾನೇ ದೇವರನ್ನು ಪೂಜಿಸುತ್ತೇನೆ ಎಂಬ ದುರಭಿಮಾನವನ್ನು ದೂರ ಇಡಬೇಕು. ಒಂದು ದಲದಿಂದ, ಒಂದು ದಿನ ದೇವರನ್ನು ಪೂಜಿಸುವ ನಮ್ಮನ್ನು, ಕೋಟಿ-ಕೋಟಿ ಜನ್ಮಗಳಿಗೆ ಕಾರಣವಾಗುವ ದುರಭಿಮಾನ ಮುತ್ತಿಕೊಂಡಿರುತ್ತದೆ. ಆ ದುರಭಿಮಾನದಿಂದ ಮುಕ್ತರಾಗಲು ಈ ವಿಧವಾದ ಚಿಂತನೆಯನ್ನು ಮಾಡಬೇಕು.

ರಮಾದಿದೇವತೆಗಳೂ ವೈಕುಂಠಾದಿಲೋಕಗಳಲ್ಲಿ ತುಲಸಿಯಿಂದ ದೇವರನ್ನು ಪೂಜಿಸುತ್ತಾರೆ. ನಿತ್ಯಮುಕ್ತಳಾದ ರಮಾದೇವಿಯೂ ತುಲಸಿಯಿಂದ ದೇವರನ್ನು ಪೂಜಿಸುತ್ತಾಳೆ. ನಿತ್ಯವೂ ತನ್ನಲ್ಲಿ ಮಾಡುತ್ತಿರುವ ಅತಿವಿಶಿಷ್ಟವಾದ ಉಪಕಾರವನ್ನು ನೆನೆದು ಭಾವುಕಳಾಗುತ್ತಾಳೆ. ಅಭಿಮಾನಲೇಶವೂ ಅವಳಿಗೆ ಬಾರದು. ಅನಾದಿಕಾಲದಿಂದಲೇ ಅಭಿಮಾನವನ್ನು ಪರಿತ್ಯಜಿಸಿದ ಮಹಾವಿರಾಗಿ ರಮಾದೇವಿ. ರಮಾದೇವಿಯು ಮಾಡಿದ ತುಲಸ್ಯರ್ಚನೆಯನ್ನು ಬಿಂಬಿಸಲು ಭಾಗವತದ ಈ ವಚನ ಸಾಕು-

**ವಾಪೀಷು ವಿದ್ರುಮತಟಾಸ್ವಮಲಾಮೃತಾಪ್ಸು**
**ಪ್ರೇಷ್ಯಾನ್ವಿತಾ ನಿಜವನೇ ತುಲಸೀಭಿರೀಶಮ್ ।**
**ಅಭ್ಯರ್ಚತೀ ಸ್ವಲಕಮುನ್ನಸಮೀಕ್ಷ್ಯ ವಕ್ತ್ರ-**
**ಮುಚ್ಛೇಷಿತಂ ಭಗವತೇತ್ಯಮತಾಂಗ ಯಚ್ಛ್ರೀಃ ॥ -೩.೧೬.೨೨**

ವೈಕುಂಠಲೋಕ ಅತಿವಿಶಿಷ್ಟವಾದದ್ದು. ಅಲ್ಲಿಯ ಸರೋವರಗಳು ಅಮೃತಕ್ಕಿಂತಲೂ ಸ್ವಾದುಭರಿತವಾದ ಜಲಗಳಿಂದ ತುಂಬಿವೆ. ಹವಳದ ದಡಗಳಿಂದ ಅಲಂಕೃತವಾಗಿವೆ. ಸುಲಭವಾಗಿ ಇಳಿಯಲು ಸಾಧ್ಯವಾಗಿವೆ. ಸುತ್ತಮುತ್ತಲೂ ಕಮನೀಯವಾದ ಕಮಲದ ವನಗಳು. ಆ ಸರೋವರದಲ್ಲಿ ರಮಾದೇವಿಯು ಮಜ್ಜನಮಾಡುತ್ತಾಳೆ. ತನ್ನ ಸ್ವಾಮಿಯನ್ನು ಪೂಜಿಸುತ್ತಾಳೆ. ಅವಳಿಗೆ ಎಡ-ಬಲದಲ್ಲಿ ಅನೇಕ ಸೇವಕಿಯರು ಕೈಕಟ್ಟಿ ನಿಂತಿರುತ್ತಾರೆ. ಭಕ್ತಿಭಾವದಿಂದ ರಮಾದೇವಿಯ ಸೇವೆಯನ್ನು ಮಾಡುತ್ತಾ ಧನ್ಯತೆಯ ಮುಖಮುದ್ರೆಯಿಂದ ಸಂಪನ್ನರಾಗಿ ಇರುತ್ತಾರೆ. ರಮಾದೇವಿಯು ತುಲಸೀದಲಗಳಿಂದ ದೇವರನ್ನು ಅರ್ಚಿಸುತ್ತಾಳೆ. ಅರ್ಚಿಸುವಾಗ ಸರೋವರದಲ್ಲಿ ತನ್ನ ಮುಖವನ್ನು ನೋಡಿಕೊಳ್ಳುತ್ತಾಳೆ. ಲೋಕವಿಶಿಷ್ಟವಾದ

ಸೌಂದರ್ಯ ತನ್ನದು. ಸುಂದರವಾದ ನಾಸಿಕೆ. ಮೃದುವಾದ ಕೇಶರಾಶಿ. ಸಕಲಲಕ್ಷಣಗಳಿಂದ ಪರಿಪೂರ್ಣವಾದ ಮುಖವಿದು. ಈ ನನ್ನ ಮುಖವನ್ನು ನನ್ನ ಸ್ವಾಮಿ ಚುಂಬಿಸುತ್ತಾನಲ್ಲ. ಚುಂಬನೆಯಿಂದಲೇ ಈ ಮುಖ ನನ್ನದು, ನನ್ನ ಅಧಿ ೕನ ಎಂದು ದೇವರು ಹೇಳುತ್ತಾನಲ್ಲ. ಈ ಸೌಭಾಗ್ಯ ನನ್ನದು. ಈ ಸೌಭಾಗ್ಯವನ್ನು ದೇವರು ಮತ್ತಾರಿಗೂ ಕೊಡುವುದಿಲ್ಲ. ಈ ತುಲಸಿಗೂ. ಸಮಸ್ತಪ್ರಪಂಚದಲ್ಲಿ ನಾನೇ ಧನ್ಯಳು. ಈ ಧನ್ಯತೆಯನ್ನು ನನಗೆ ನೀಡಿದ್ದು ನನ್ನ ಸ್ವಾಮಿಯೇ. ದೇವರ ಈ ಉಪಕಾರವನ್ನು ರಮಾದೇವಿ ಮೈಮರೆತು ನೆನೆಯುತ್ತಾಳೆ. ಭಕ್ತಿಯಿಂದ ದೇವರನ್ನು ಅರ್ಚಿಸುತ್ತಾಳೆ. ಕೋಟಿ-ಕೋಟಿ ತುಲಸೀದಲಗಳಿಂದ ಜ್ಞಾನಾನಂದರೂಪಿಯಾದ ಪರಮಾತ್ಮನನ್ನು ಅರ್ಚಿಸುತ್ತಾಳೆ. ರಮಾದೇವಿ ಅರ್ಚಿಸುವುದು ದೇವರ ಪ್ರತಿಮೆಯನ್ನಲ್ಲ. ಸಾಕ್ಷಾತ್ ಪರಮಾತ್ಮನನ್ನೇ.

ವೈಕುಂಠದಲ್ಲಿ ಬೆಳೆದ ಅತ್ಯಪರೂಪವಾದ ತುಲಸೀಗಳಿಂದ ರಮಾದೇವಿಯು ಅರ್ಚಿಸುವ ಈ ವಿಷಯವನ್ನು ತಿಳಿಯಬೇಕು. ನಾವು ಮಾಡುವ ಅರ್ಚನೆಯನ್ನು ನೆನೆಯಬೇಕು. ಆವಾಗ ದುರಭಿಮಾನ ದೂರ ಹೋಗುತ್ತದೆ. ಇದು ಮಾತ್ರ ನಿಶ್ಚಿತ. ಲಗುಬಗೆಯಿಂದ ನಾವು ಮಾಡುವ ಪೂಜೆಯಲ್ಲಿ ಇದಾವುದೂ ನೆನಪಿಗೆ ಬರುವುದಿಲ್ಲ. ಇದು ನಮ್ಮ ದೌರ್ಭಾಗ್ಯ.

**ತುಲಸಿಯಿಂದ ದೇವರ ಪೂಜೆ**

**ಯತ್ಫಲಂ ಸರ್ವಪುಷ್ಪೈಶ್ಚ ಸರ್ವಪತ್ರೈಶ್ಚ ಯತ್ಫಲಮ್ ।**
**ತುಲಸ್ಯಾಸ್ತದ್ದಲಾರ್ಧೇನ ಪುಣ್ಯಂ ಸ್ಯಾದ್ವಿಷ್ಣುಪೂಜನೇ ॥**

ವಿಹಿತವಾದ ಎಲ್ಲ ಪುಷ್ಪಗಳಿಂದ ಮತ್ತು ವಿಹಿತವಾದ ಎಲ್ಲ ಪತ್ರಗಳಿಂದ ವಿಷ್ಣುವಿನ ಅರ್ಚನೆಯನ್ನು ಮಾಡಿದಾಗ ವಿಶಿಷ್ಟವಾದ ಪುಣ್ಯವು ಪ್ರಾಪ್ತವಾಗುತ್ತದೆ. ಈ ಪುಣ್ಯವು ಅರ್ಧದಲ ತುಲಸಿಯಿಂದ ದೇವರನ್ನು ಅರ್ಚಿಸಿದರೆ ಪ್ರಾಪ್ತವಾಗುತ್ತದೆ. ಇದು ತುಲಸಿಯ ವೈಶಿಷ್ಟ್ಯ.

ಬ್ರಹ್ಮದೇವರು ನಿರೂಪಣೆ ಮಾಡಿದ ತುಲಸಿಯ ಮಹಿಮೆಯು ಈ ರೀತಿಯಾಗಿದೆ.

**ಅರ್ಚಯಂತಿ ಹರೇರ್ಬಿಂಬಂ ತುಲಸ್ಯಾಃ ಕೋಮಲೈರ್ದಲೈಃ ।**
**ಸುಮಂಜರೀದಲೈರ್ಯುಕ್ತತುಲಸೀಸಂಭವೈಸ್ತಥಾ ॥**

**ತುಲಸೀಪಕ್ವಪತ್ರಾಣಿ ಪ್ರಭಾತೇ ಭೂತಲೇ ಶುಭೇ ।**
**ವಿಷ್ಣೋರಾರಾಧನಾರ್ಥಾಯ ನೀಯತೇ ಮೋಕ್ಷಕಾರಿಣೇ ॥**

**ತುಲಸೀಪಕ್ವಪತ್ರೈಶ್ಚ ಶ್ರೀಹರೇಃ ಪಾದಪಂಕಜೇ ।**
**ಪೂಜನಂ ಯೇ ಚ ಕುರ್ವಂತಿ ತೇ ಕೃತಾರ್ಥಾಃ ಕಲೌ ನರಾಃ ॥**

ಕೋಮಲವಾದ ತುಲಸಿಯ ದಲಗಳಿಂದ ಪರಮಾತ್ಮನ ಪ್ರತಿಮೆಯನ್ನು ಅರ್ಚಿಸಬೇಕು. ಮಂಜರೀ (ಎಳೆ ತೆನೆ) ಯುಕ್ತವಾದ ತುಲಸೀದಲಗಳಿಂದ ದೇವರನ್ನು ಅರ್ಚಿಸುವುದು ಮತ್ತಿಷ್ಟು ವಿಶಿಷ್ಟವಾಗಿದೆ. ಪ್ರಭಾತಕಾಲದಲ್ಲಿ ಶುದ್ಧವಾದ ಭೂಮಿಯಲ್ಲಿ ಬಿದ್ದಿರುವ ತುಲಸಿಯ ಹಣ್ಣೆಲೆಗಳನ್ನು ಪೂಜೆಗಾಗಿ ಎಂದು ಚಯನ ಮಾಡಿದರೇ ಅದರಿಂದ ಮುಕ್ತಿಯು ಪ್ರಾಪ್ತವಾಗುತ್ತದೆ. ಹಣ್ಣಾಗಿರುವ ತುಲಸೀಪತ್ರಗಳಿಂದ ಪರಮಾತ್ಮನ ಪಾದಕಮಲಗಳನ್ನು ಪೂಜಿಸಬೇಕು. ಕಲಿಯುಗದಲ್ಲಿಯ ಭಕ್ತರು ಕೂಡಾ ಈ ಸಾಧನೆಯಿಂದ ಕೃತಾರ್ಥರಾಗುತ್ತಾರೆ.

**ತುಲಸೀದಲೇನ ದೇವೇಶೋ ಪೂಜಿತೋ ಯೇನ ದೈತ್ಯಹಾ ।**
**ತೀರ್ಥಯಾತ್ರಾದಿಗಮನೈಃ ಕಿಂ ಫಲಂ ಶತಧಾ ಜಪ್ಯೈಃ ॥**

ತುಲಸೀದಲಗಳಿಂದ ಸರ್ವದೇವತೆಗಳಿಗೆ ಉತ್ತಮನಾದ, ದೈತ್ಯಸಂಹಾರಕನಾದ ಪರಮಾತ್ಮನನ್ನು ಪೂಜಿಸಬೇಕು. ಈ ಸಾಧನೆಯನ್ನು ಮಾಡದೇ ತೀರ್ಥಯಾತ್ರಾದಿಗಳನ್ನು ಅನುಷ್ಠಾನ ಮಾಡಿದರೂ, ನೂರಾರು ಮಂತ್ರಗಳನ್ನು ಜಪಿಸಿದರೂ ಫಲ ದೊರೆಯುವುದಿಲ್ಲ.

**ಯೋ ದದ್ಯಾತ್ತುಲಸೀಪತ್ರಂ ಪಾದಯೋಶ್ಚಕ್ರಪಾಣಿನಃ ।**
**ಕುಲಕೋಟಿಸಮಾಯುಕ್ತಃ ವಿಷ್ಣುಲೋಕೇ ಮಹೀಯತೇ ॥**

ಭಕ್ತಿಯಿಂದ ಭಗವಂತನ ಪಾದದ್ವಯವನ್ನು ತುಲಸಿಯ ದಲಗಳಿಂದ ಪೂಜಿಸುವ ಸಾಧಕನು ಕೋಟಿಕುಲದಿಂದ ಯುಕ್ತನಾಗಿ ವಿಷ್ಣುವಿನ ಲೋಕದಲ್ಲಿ ಪೂಜಿತನಾಗುತ್ತಾನೆ.

**ಹೇಮಪುಷ್ಪಸಹಸ್ರೇಣ ಯೋಽರ್ಚಯೇದ್ವತ್ಸರಂ ಹರಿಮ್ ।**
**ತುಲಸೀಪತ್ರಮಾತ್ರಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥**

ವರ್ಷದ ವರೆಗೆ ಸ್ವರ್ಣಪುಷ್ಪಗಳನ್ನು ಸಮರ್ಪಿಸುವುದು ಒಂದು ಸಾಧನೆ. ಒಂದು ದಳ ಶ್ರೀತುಲಸಿಯನ್ನು ಸಮರ್ಪಿಸುವುದು ಮತ್ತೊಂದು ಸಾಧನೆ. ಈ ಸಾಧನೆಗಳಲ್ಲಿ ತುಲಸಿಯ ಸಮರ್ಪಣೆಯೇ ವಿಶಿಷ್ಟವಾಗಿದೆ. ಸ್ವರ್ಣಪುಷ್ಪಸಹಸ್ರವು ತುಲಸೀಪತ್ರದ ಹದಿನಾರನೆಯ ಒಂದಂಶಕ್ಕೂ ಸರಿಯಾಗುವುದಿಲ್ಲ.

**ಅರ್ಪಿತೇ ತುಲಸೀಪತ್ರೇ ಮಾಧವೋ ಭಕ್ತವತ್ಸಲಃ ।**
**ಅಪರಾಧಸಹಸ್ರಂ ವಾ ಸಹತೇ ನಾಽತ್ರ ಸಂಶಯಃ ॥**

ಮಾಯಾಧವನಾದ ಪರಮಾತ್ಮ ಭಕ್ತವತ್ಸಲನಾಗಿದ್ದಾನೆ. ಅವನಿಗೆ ಒಂದು ತುಲಸೀಪತ್ರವನ್ನು ಸಮರ್ಪಿಸುವುದರಿಂದ ನಮ್ಮ ಸಾವಿರಾರು ಅಪರಾಧಗಳನ್ನು ಸಹಿಸುತ್ತಾನೆ. ಈ ವಿಷಯದಲ್ಲಿ ಸರ್ವಥಾ ಸಂದೇಹವಿರುವುದಿಲ್ಲ.

**ಯಸ್ತುಲಸ್ಯಾಃ ಪತ್ರಶತಂ ವಿಷ್ಣವೇ ಪರಮಾತ್ಮನೇ ।**
**ಸಮರ್ಪಯತಿ ತತ್ಪುಣ್ಯಂ ವಕ್ತುಂ ಶಕ್ತೋ ನ ವಿದ್ಯತೇ ॥**

ಭಗವಂತ ಸಕಲಜಗತ್ತನ್ನು ಪ್ರವೇಶಿಸಿದ್ದಾನೆ. ಇಂತಹ ಪರಮಾತ್ಮನನ್ನು ನೂರು ತುಲಸಿಯ ದಲಗಳಿಂದ ಪೂಜಿಸಬೇಕು. ಆ ಸಾಧಕನ ಪುಣ್ಯವನ್ನು ಹೇಳಲು ಶಕ್ಯವಿಲ್ಲ.

**ಪಿತೄನ್ ಗುರೂನ್ ಸಮುದ್ದಿಶ್ಯ ತುಲಸೀ ವಿಷ್ಣವೇಽರ್ಪಿತಾ ।**
**ಬ್ರಹ್ಮಹತ್ಯಾಕೋಟಿಶತಂ ಅಗಮ್ಯಾನಾಂ ಸಹಸ್ರಕಮ್ ।**
**ಅಭಿತಃ ಕೋಟಿಪಾಪಾನಿ ದಹತ್ಯಗ್ನಿರಿವೇಂಧನಮ್ ॥**

ಪಿತೃಗಳ ಉದ್ದೇಶದಿಂದ, ಗುರುಗಳ ಉದ್ದೇಶದಿಂದ ತುಲಸಿಯನ್ನು ವಿಷ್ಣುವಿಗೆ ಸಮರ್ಪಿಸಬೇಕು. ಇದರಿಂದ ಅನೇಕಬ್ರಹ್ಮಹತ್ಯಾಗಳಿಂದ ಪ್ರಾಪ್ತವಾದ ಪಾಪವು ಮತ್ತು ಅಗಮ್ಯರಾದ ಸ್ತ್ರೀಯರನ್ನು ಗಮನಮಾಡುವುದರಿಂದ ಪ್ರಾಪ್ತವಾಗುವ ಪಾಪವೆಲ್ಲ ಪರಿಹಾರವಾಗುತ್ತದೆ. ಇಂಧನಗಳನ್ನೆಲ್ಲ ಅಗ್ನಿಯು ಸುಟ್ಟು ಬೂದಿ ಮಾಡುವಂತೆ ತನ್ನನ್ನು ಮುತ್ತಿಗೆ ಹಾಕಿದ ಪಾಪಗಳನ್ನೆಲ್ಲ ಈ ಸಾಧನೆಯು ಭಸ್ಮಮಾಡುತ್ತದೆ.

**ಯಃ ಕುರ್ಯಾತ್ತುಲಸೀಪತ್ರೈಃ ಪೂಜಾಂ ವಿಷ್ಣೋರ್ಮಹಾತ್ಮನಃ ।**
**ಜನ್ಮಕೋಟಿಸಹಸ್ರೇಷು ನ ದರಿದ್ರೋ ಭವೇನ್ನರಃ ॥**

ತುಲಸೀಪತ್ರಗಳಿಂದ ಸರ್ವೋತ್ತಮನಾದ ಪರಮಾತ್ಮನನ್ನು ಪೂಜಿಸುತ್ತಿರಬೇಕು. ಅವನು ಯಾವುದೇ ಜನ್ಮದಲ್ಲಿಯೂ ದರಿದ್ರನಾಗುವುದಿಲ್ಲ.

**ಗುಹ್ಯಾನಿ ಯಾನಿ ಪಾಪಾನಿ ಹ್ಯನಾಖ್ಯೇಯಾನಿ ಮಾನವೈಃ ।**
**ನಾಶಯೇತ್ತುಲಸೀ ಭಕ್ತ್ಯಾ ದತ್ತಾ ಕೇಶವಮೂರ್ಧನಿ ॥**

ಮಾನವ ಮಾಡುವ ಪಾಪಗಳು ಅನಂತ. ಅವನು ಸಭಾಮುಖವಾಗಿ ಹೇಳಿಕೊಳ್ಳಲಾಗದ ಪಾಪಗಳಿಗೂ ಕೊರತೆ ಏನಿಲ್ಲ. ದೇವರ ಶಿರಸ್ಸಿನಲ್ಲಿ ತುಲಸಿಯನ್ನು ಭಕ್ತಿಪೂರ್ವಕವಾಗಿ ಏರಿಸುವುದರಿಂದ ಈ ಎಲ್ಲ ಪಾಪಗಳು ದೂರವಾಗುತ್ತವೆ.

**ಏಕಾದಶಿಯಲ್ಲಿ ತುಲಸೀಪೂಜೆ**

**ತುಲಸೀ ನ ಯೇಷಾಂ ಮಮ ಪೂಜನಾರ್ಥಂ ಸಂಪಾದ್ಯತೈಕಾದಶಿಪುಣ್ಯವಾಸರೇ ।**
**ಧಿಗ್ಜೀವನಂ ಜೀವಿತಮರ್ಥಸಂತತಿಂ ತೇಷಾಂ ಸುಖಂ ನೇಹ ಚ ನಾಽಪ್ಯತಃ ಪರಮ್ ॥**

ಪ್ರತಿನಿತ್ಯವೂ ತುಲಸಿಯನ್ನು ಸಂಪಾದಿಸಿ ಆ ದಲಗಳಿಂದ ದೇವರನ್ನು ಅರ್ಚಿಸಬೇಕು. ದಿನನಿತ್ಯ ಸಾಧ್ಯವಾಗದಿದ್ದಲ್ಲಿ ಏಕಾದಶಿಯ ದಿನ ಹೇಗಾದರೂ ಮಾಡಿ ತುಲಸಿಯನ್ನು ಸಂಗ್ರಹಿಸಬೇಕು. ಆ ಏಕಾದಶಿಯಲ್ಲಿ ಸಂಗ್ರಹೀತವಾದ ತುಲಸೀದಲಗಳಿಂದ ದೇವರನ್ನು ವಿಶೇಷವಾಗಿ ಅರ್ಚಿಸಬೇಕು. ಹೀಗೆ ಮಾಡುವವರ ಸಂತಾನ-ಸಂಪತ್ತು-ಜೀವನ ಸಾರ್ಥಕವಾಗುತ್ತದೆ.

**ಏಕಾದಶಿಯಲ್ಲಿ ತುಲಸೀದಲದ ಮಾಲೆಯಿಂದ ದೇವರ ಅರ್ಚನೆ**

**ತುಲಸೀದಲಜಾಂ ಮಾಲಾಮೇಕಾದಶ್ಯಾಂ ವಿಶೇಷತಃ ।**
**ಮುಚ್ಯತೇ ಸರ್ವಪಾಪೇಭ್ಯೋ ಯದ್ಯಪಿ ಬ್ರಹ್ಮಹಾ ಭವೇತ್ ॥**

ಪ್ರತಿನಿತ್ಯವೂ ತುಲಸಿಯಿಂದ ಪರಮಾತ್ಮನನ್ನು ಪೂಜಿಸಬೇಕು. ಏಕಾದಶಿಯ ದಿವಸ ವಿಶೇಷವಾಗಿ ತುಲಸಿದಲಗಳಿಂದ ಮಾಲೆಯನ್ನು ರಚಿಸಿ ದೇವರಿಗೆ ಸಮರ್ಪಿಸಬೇಕು. ಹೀಗೆ ಮಾಡುವುದರಿಂದ ಸಕಲಪಾಪಗಳೂ ದೂರವಾಗುತ್ತವೆ. ಈ ರೀತಿಯಾದ ಪೂಜೆಯನ್ನು ವಿಶೇಷವಾದ ನಿಷ್ಠೆಯಿಂದ ಮಾಡಿದಾಗ ಬ್ರಹ್ಮಹತ್ಯಾ ಪಾಪವೂ ತೊಲಗಿ ಹೋಗುತ್ತದೆ.

**ತುಲಸಿಯು ಪಾಪನಾಶಕ**

ಮನುಷ್ಯನು ಅನಂತಅಪರಾಧಗಳನ್ನು ಮಾಡುತ್ತಲೇ ಇರುತ್ತಾನೆ. ಅವುಗಳಲ್ಲಿ ಪಂಚಮಹಾಪಾತಕಗಳು, ಉಪಪಾತಕಗಳು ಸೇರಿರುತ್ತವೆ. ಈ ಪಾಪಗಳ ಫಲ ಅತಿತೀವ್ರವಾಗಿರುತ್ತದೆ. ಆ ಎಲ್ಲ ಪಾಪಗಳಿಗೆ ಇಲ್ಲಿಯೇ ನಿಷ್ಕೃತಿಯಾಗಬೇಕು. ಇಲ್ಲಿಯೇ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದರೇ ನರಕದಲ್ಲಿ ಅತಿಯಾದ ದುಃಖವನ್ನು ಅನುಭವಿಸಬೇಕಾಗುತ್ತದೆ. ನಿತ್ಯವೂ ತುಲಸೀದಲಗಳಿಂದ ದೇವರನ್ನು ಪೂಜಿಸಿದರೆ ಈ ಎಲ್ಲ ಪಾಪಗಳಿಗೆ ಪ್ರಾಯಶ್ಚಿತ್ತ ಮಡಿಕೊಂಡಂತೆ ಆಗುತ್ತದೆ. ಮಹಾಪಾತಕ-ಉಪಪಾತಕಗಳೂ ಇದರಿಂದ ಶಾಂತವಾಗುತ್ತವೆ.

ಈ ವಿಷಯವನ್ನು ಸ್ಪಷ್ಟಪಡಿಸುವ ಭಗವಂತನ ವಚನ-

**ನಿತ್ಯಮಭ್ಯರ್ಚಯೇದ್ಯೋ ವೈ ತುಲಸ್ಯಾ ಮಾಂ ರಮೇಶ್ವರಮ್ ।**
**ಮಹಾಪಾಪಾನಿ ನಶ್ಯಂತಿ ಕಿಂ ಪುನಶ್ಚೋಪಪಾತಕಮ್ ॥**

ಪ್ರತಿನಿತ್ಯವೂ ತುಲಸಿಯಿಂದ ರಮಾಪತಿಯಾದ ನನ್ನನ್ನು ಪೂಜಿಸಬೇಕು. ಭಕ್ತಿಯಿಂದ ಮಾಡಿದ ಈ ಆರಾಧನೆಯಿಂದ ಮಹಾಪಾಪಗಳೂ ನಷ್ಟವಾಗುತ್ತವೆ. ಉಪಪಾತಕಾದಿಗಳು ದೂರವಾಗುತ್ತವೆಂಬುದು ಕೈಮುತ್ಯಸಿದ್ಧ.

**ತುಲಸ್ಯಾ ಕುರುತೇ ಯಸ್ತು ಶಾಲಗ್ರಾಮಶಿಲಾರ್ಚನಮ್ ।**
**ದ್ವಾತ್ರಿಂಶದಪರಾಧಾಂಶ್ಚ ಕ್ಷಮತೇ ತಸ್ಯ ಕೇಶವಃ ॥ -ವಿ.ಧ.ಪು**

ದೇವರನ್ನು ಉಪಚರಿಸಲು ನಾವೆಲ್ಲ ದೇವರ ಪ್ರತಿಮೆಗಳನ್ನು, ಶಾಲಗ್ರಾಮಗಳನ್ನು ಇಟ್ಟುಕೊಂಡು ಕೂಡುತ್ತೇವೆ. ಆದರೆ ಅಲ್ಲಿ ನಡೆಯುವುದು ಉಪಚಾರವಲ್ಲ. ಅಪಚಾರಗಳೇ ನಡೆದುಹೋಗುತ್ತವೆ. ಉಪಚಾರಗಳಿಗೆ ದುಪ್ಪಟ್ಟು ಅಪಚಾರಗಳು ನಡೆದು ಹೋಗುತ್ತವೆ. ಆದರೆ ತುಲಸಿಯಿಂದ ದೇವರನ್ನು ಅರ್ಚಿಸಿದಲ್ಲಿ, ಆ ಮೂವತ್ತೆರಡು ಅಪರಾಧಗಳನ್ನು ಭಗವಂತ ಕ್ಷಮಿಸುತ್ತಾನೆ. ಈ ವಿಷಯ ಗಮನದಲ್ಲಿರಬೇಕು.

**ಶ್ರೀಕೃಷ್ಣನ ಪೂಜೆಗೆ ಕೃಷ್ಣತುಲಸೀ**

**ಕೃಷ್ಣಂ ಕೃಷ್ಣತುಲಸ್ಯಾ ಚ ಯೋ ಭಕ್ತ್ಯಾ ಪೂಜಯೇನ್ನರಃ ।**
**ಸ ಯಾತಿ ಭವನಂ ಶುದ್ಧಂ ಯತ್ರ ವಿಷ್ಣುಃ ಶ್ರಿಯಾ ಸಹ ॥**

ಕೃಷ್ಣತುಲಸಿ ರಾಮತುಲಸಿ ಈ ಎರಡೂ ಜಾತಿಯ ತುಲಸಿಗಳು ಭಗವತ್ಪ್ರಿಯವಾಗಿವೆ. ಹಾಗಿದ್ದರೂ ಶ್ರೀಕೃಷ್ಣನನ್ನು ಕೃಷ್ಣತುಲಸಿಯಿಂದ ಭಕ್ತಿಪೂರ್ವಕವಾಗಿ ಪೂಜಿಸಬೇಕು. ಈ ಸಾಧನೆಯಿಂದ ನರನಾದವನು, ದುಃಖದ ಸಂಪರ್ಕವಿಲ್ಲದ, ಆದ್ದರಿಂದಲೇ ಶುದ್ಧವಾದ, ಸದಾ ರಮಾದೇವಿಯಿಂದ ಯುಕ್ತನಾದ ಭಗವಂತನ ಲೋಕಗಳನ್ನು ಪಡೆಯುತ್ತಾನೆ.

**ತುಲಸೀಂ ಕೃಷ್ಣನಾಮ್ನೀಂ ತಾಂ ಯೋಽರ್ಪಯೇಚ್ಚ ಜನಾರ್ದನೇ ।**
**ನರೋ ಯಾತಿ ತನುಂ ತ್ಯಕ್ತ್ವಾ ತದ್ವಿಷ್ಣೋಃ ಪರಮಂ ಪದಮ್ ॥ -ಪ.ಪು**

ಶುಕ್ಲ-ಕೃಷ್ಣ ಏಕಾದಶಿಯಲ್ಲಿ ಯಾವುದೇ ರೀತಿಯಾದ ಭೇದವಿಲ್ಲ. ಶುಕ್ಲ-ಕೃಷ್ಣ ಗೋವಿನಲ್ಲಿ ಯಾವುದೇ ರೀತಿಯಾದ ಭೇದವಿಲ್ಲ. ಅದೇ ರೀತಿಯಾಗಿ ರಾಮತುಲಸಿ -ಕೃಷ್ಣತುಲಸಿಯಲ್ಲಿ ಭೇದವಿರುವುದಿಲ್ಲ. ಆದರೂ ಕೃಷ್ಣತುಲಸಿಯ ಮೇಲೆ ಪರಮಾತ್ಮನ ಪ್ರೀತಿಯು ವಿಶೇಷವಾಗಿ ಅಭಿವ್ಯಕ್ತವಾಗಿರುತ್ತದೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ಕೃಷ್ಣತುಲಸಿಯನ್ನು ದೇವರ ಅರ್ಚನೆಗೆ ವಿಶೇಷವಾಗಿ ಉಪಯೋಗಿಸಬೇಕು. ಅವನು ತನುವನ್ನು ತ್ಯಜಿಸಿ ಪರಮಾತ್ಮನ ಸನಿಹ ಸೇರಿ ಸುಖಿಸುತ್ತಾನೆ.

**ಶುಕ್ಲ-ಕೃಷ್ಣ ಭೇದ ಸಲ್ಲದು**

ಕಪ್ಪು ಎಂದರೆ ಮೂದಲಿಸುವ ಜನರಿದ್ದಾರೆ. ಬೇರೇ ವಿಷಯದಲ್ಲಿ ಆ ಮೂದಲಿಕೆ ಸರಿಯಾದೀತು. ಆದರೆ ತುಲಸಿಯ ವಿಷಯದಲ್ಲಿ ಅದು ಸರಿಯಲ್ಲ. ಇದನ್ನು ದೃಷ್ಟಾಂತಮೂಲಕವಾಗಿ ಈ ವಚನವು ತಿಳಿಸುತ್ತದೆ-

**ಅಕೃಷ್ಣಾ ಅಥವಾ ಕೃಷ್ಣಾ ತುಲಸೀ ಮಮ ವಲ್ಲಭಾ ।**
**ಸಿತಾ ವಾಽಪ್ಯಸಿತಾ ವಾಽಪಿ ದ್ವಾದಶೀ ವಲ್ಲಭಾ ಯಥಾ ॥**

ಶುಕ್ಲದ್ವಾದಶಿಯಾಗಲೀ ಕೃಷ್ಣದ್ವಾದಶಿಯಾಗಲೀ ನನಗೆ ಪರಮಪ್ರಿಯವಾಗಿದೆ. ಹಾಗೆಯೇ ಕೃಷ್ಣತುಲಸಿಯಾಗಲಿ ಅಕೃಷ್ಣವಾದ ಅರ್ಥಾತ್ ಕಪ್ಪು ಬಣ್ಣವಿಲ್ಲದಿರುವ ಹಸಿರು ಬಣ್ಣದ ತುಲಸಿಯಾಗಲೀ ಇವೆರಡೂ ನನಗೆ ಪರಮಪ್ರಿಯವಾಗಿವೆ.

**ತುಲಸಿಗೆ ಕಾಲದ ನಿಯಮವಿಲ್ಲ**

ಆಯಾ ಋತುವಿನಲ್ಲಿ ಬೆಳೆಯುವ ಪುಷ್ಪಗಳನ್ನೇ ದೇವರಿಗೆ ಸಮರ್ಪಿಸಬೇಕು. ಅಕಾಲದಲ್ಲಿ ಬೆಳೆದ ಪುಷ್ಪಗಳನ್ನು ದೇವರಿಗೆ ಎಂದಿಗೂ ಸಮರ್ಪಿಸಬಾರದು. ಆದರೆ ತುಲಸಿಯ ವಿಷಯದಲ್ಲಿ ಈ ನಿಯಮವಿಲ್ಲ. ತುಲಸಿಯ ಸಮರ್ಪಣೆಗೆ ಅಕಾಲವೆಂಬುದು ಯಾವುದೂ ಇಲ್ಲ. ಈ ವಿಷಯವನ್ನು ತಿಳಿಸುವ ವಚನವಿದು-

**ತುಲಸೀಮಂಜರೀಪುಷ್ಪಾಣ್ಯಾಹೃತಾನ್ಯತ್ರ ತಾನಿ ಚ ।**
**ಯಥಾಕಾಲೋಪಪನ್ನಾನಿ ಸ್ವಾರಾಮವನಜಾನಿ ಚ ॥**

ತುಲಸಿಯು ಎಲ್ಲ ಋತುವಿನಲ್ಲಿಯೂ ಬೆಳೆಯುತ್ತದೆ. ಹೀಗಾಗಿ ಅದನ್ನು ಪ್ರತಿನಿತ್ಯ ಭಗವಂತನಿಗೆ ಸಮರ್ಪಿಸಬೇಕು. ಆದರೆ ಆಯಾ ಪುಷ್ಪಗಳು ಆಯಾ ಋತುವಿನಲ್ಲಿಯೇ ಬೆಳೆಯುತ್ತವೆ. ಆಯಾ ಋತುವಿನಲ್ಲಿ ಬೆಳೆದ ಪುಷ್ಪಗಳನ್ನೇ ಪರಮಾತ್ಮನಿಗೆ ಸಮರ್ಪಿಸ ಬೇಕು. ಅಕಾಲದಲ್ಲಿ ಬೆಳೆದ ಪುಷ್ಪಗಳಿಂದ ಪರಮಾತ್ಮನನ್ನು ಅರ್ಚಿಸಬಾರದು.

ತನ್ನ ಮನೆಯಲ್ಲಿ, ಅಥವಾ ತನ್ನ ತೋಟದಲ್ಲಿ ಬೆಳೆದಿರುವ ತುಲಸೀ-ಪುಷ್ಪಗಳಿಂದಲೇ ಪರಮಾತ್ಮನನ್ನು ಅರ್ಚಿಸಬೇಕು.

**ತುಲಸಿ ಇಲ್ಲದಿರುವಾಗ**

**ತುಲಸೀಮಂಜರೀ ಗ್ರಾಹ್ಯಾ ತದಭಾವೇ ತು ಪಲ್ಲವಮ್ ।**
**ತದಭಾವೇ ತು ಪತ್ರಂ ಸ್ಯಾತ್ ಪತ್ರಾಭಾವೇ ತು ಕಾಷ್ಠಕಮ್ ॥**

**ತದಭಾವೇ ತು ಮೂಲಂ ಸ್ಯಾತ್ ಮೂಲಾಭಾವೇ ತು ಮೃತ್ತಿಕಾ ।**
**ಮೃತ್ತಿಕಾಯಾ ಅಭಾವೇ ತು ತುಲಸೀಶಬ್ದ ಉಚ್ಯತೇ ॥**

**ತುಲಸೀರಹಿತಾಂ ಪೂಜಾಂ ನ ಗೃಹ್ಣಾತಿ ಹರಿಸ್ಸದಾ ।**
**ಕಾಷ್ಠಂ ವಾ ಸ್ಪರ್ಶಯೇತ್ತತ್ರ ನೋ ಚೇತ್ತನ್ನಾಮ ವಾ ಭವೇತ್ ॥**

ದೇವರ ಅರ್ಚನೆಗಾಗಿ ಮಂಜರೀಯುಕ್ತವಾದ ತುಲಸಿ ಪ್ರಶಸ್ತವಾದದ್ದು. ಮಂಜರಿ ಎಂದರೆ ತೆನೆ. ಕೋಮಲವಾದ ತೆನೆಯಿಂದ ಯುಕ್ತವಾದ ತುಲಸಿ ಶ್ರೀಹರಿಗೆ ಪರಮಪ್ರಿಯವಾಗಿದೆ. ಪ್ರಯತ್ನಪೂರ್ವಕವಾಗಿ ಇಂತಹ ತುಲಸಿಯನ್ನು ಸಂಗ್ರಹಮಾಡಬೇಕು. ಈ ತೆನೆಸಹಿತವಾದ ತುಲಸೀದಲ ಸಿಗದಿರುವಾಗ ಕೇವಲ ದಲಗಳನ್ನು ಸಂಗ್ರಹಿಸಬೇಕು. ದಲಗಳೂ ಇಲ್ಲದಿರುವ ಪ್ರಸಂಗದಲ್ಲಿ ಕೇವಲ ಪತ್ರಗಳನ್ನು ಶ್ರೀಹರಿಯ ಅರ್ಚನೆಗಾಗಿ ಸ್ವೀಕರಿಸಬೇಕು. ಪತ್ರಗಳು ಕೂಡಾ ಇಲ್ಲದಿರುವಾಗ ತುಲಸೀಕಾಷ್ಠದಿಂದ ಶ್ರೀಹರಿಯನ್ನು ಅರ್ಚಿಸಬೇಕು. ಕಾಷ್ಠಗಳು ದೊರೆಯದಿರುವಾಗ ತುಲಸಿಯ ಬೇರಿನಿಂದ ಪರಮಾತ್ಮನ ಪೂಜೆಯನ್ನು ಮಾಡಬೇಕು. ಮೂಲವೂ ಸಿಗದಿರುವಾಗ ಮೃತ್ತಿಕೆಯು ಪೂಜೆಗೆ ಉಪಯುಕ್ತ ವಾಗುತ್ತದೆ. ಮೃತ್ತಿಕೆಯೂ ಇಲ್ಲದಿರುವಾಗ ಬಾಯಿಯಿಂದ 'ತುಲಸಿ' 'ತುಲಸಿ' ಎನ್ನುತ್ತಾ ಆದರೂ ಪರಮಾತ್ಮನನ್ನು ಪೂಜಿಸಬೇಕು.

ಒಟ್ಟಾರೆ ತಿಳಿಯುವುದಾದರೆ ತುಲಸಿ ಇಲ್ಲದ ಪೂಜೆಯನ್ನು ಶ್ರೀಹರಿಯು ಸ್ವೀಕರಿಸುವುದಿಲ್ಲ. ಆದ್ದರಿಂದ ಮೇಲೆ ತಿಳಿಸಿದಂತೆ ತುಲಸಿಯನ್ನು ಉಪಯೋಗಿಸಿಯೇ ದೇವರ ಪೂಜೆಯನ್ನು ಮಾಡಬೇಕು.

ಹೀಗೆ ಕನಿಷ್ಠಪಕ್ಷ ತುಲಸಿಯ ಸ್ಮರಣೆಯನ್ನಾದರೂ ಮಾಡಿದ ನಂತರ ಪುಷ್ಪಗಳಿಂದ ಪರಮಾತ್ಮನನ್ನು ಪೂಜಿಸಬೇಕು. ಇಲ್ಲದಿದ್ದರೆ ಪ್ರಯಾಸಪೂರ್ವಕವಾಗಿ ಮಾಡಿದ ಪೂಜೆ ಎಲ್ಲ ವ್ಯರ್ಥವಾಗುತ್ತದೆ. ಈ ವಿಷಯವನ್ನು ಗಮನದಲ್ಲಿ ಇಟ್ಟುಕೊಳ್ಳಬೇಕು.

**ಗಣಪತಿಯನ್ನು ತುಲಸಿಯಿಂದ ಪೂಜಿಸಬಾರದು**

**ನಾಕ್ಷತೈರರ್ಚಯೇದ್ವಿಷ್ಣುಂ ನ ತುಲಸ್ಯಾ ಗಣಾಧಿಪಮ್ ।**

ದೇವರನ್ನು ಅಕ್ಷತೆಯಿಂದ ಪೂಜಿಸಬಾರದು. ಗಣಪತಿಯನ್ನು ತುಲಸಿಯಿಂದ ಪೂಜಿಸಬಾರದು. ಇದು ಈ ವಚನದ ಅರ್ಥ.

ಆದರೇ **''ಗಜಕರ್ಣಾಯ ನಮಃ ತುಲಸೀಪತ್ರಂ ಸಮರ್ಪಯಾಮಿ''** ಎಂದು ತುಲಸಿಯಿಂದ ಗಣಪತಿಯನ್ನು ಪೂಜಿಸುವ ಸಂಪ್ರದಾಯವು ಬಂದಿದೆ. ಈ

ಸಂಪ್ರದಾಯವು ಆಧಾರರಹಿತವೇ ಎಂದು ಶಂಕಿಸಿದರೆ ಮತ್ತೊಂದು ಸ್ಮೃತಿ ಇದಕ್ಕೆ ಈ ರೀತಿಯಾಗಿ ಉತ್ತರವನ್ನು ಕೊಡುತ್ತದೆ-

**ನ ತುಲಸ್ಯಾ ಗಣಾಧೀಶಮೇಕವಿಂಶತಿಕಂ ವಿನಾ ॥ -ತೃಚಭಾಸ್ಕರೇ**

ತುಲಸೀಪತ್ರಗಳಿಂದ ಗಣಪತಿಯನ್ನು ಪೂಜಿಸಬಾರದೆಂಬ ವಚನ ಯಥಾರ್ಥವೇ ಆಗಿದೆ. ಆದರೆ ಏಕವಿಂಶತಿ ಪತ್ರಪೂಜೆಯಲ್ಲಿ ಮಾತ್ರ ಮೇಲೆ ಉಕ್ತವಾಗಿರುವ ಮಂತ್ರದಿಂದ ಗಣಪತಿಯನ್ನು ಅವಶ್ಯವಾಗಿ ಪೂಜಿಸಬೇಕು. ಇದರ ಹೊರತು ಮತ್ತಾವ ಪ್ರಸಂಗದಲ್ಲಿಯೂ ಗಣಪತಿಯನ್ನು ತುಲಸಿಯಿಂದ ಅರ್ಚಿಸಬಾರದು.

**ತುಲಸೀಕಾಷ್ಠಚಂದನ**

**ಯೋ ದದಾತಿ ಹರೇರ್ನಿತ್ಯಂ ತುಲಸೀಕಾಷ್ಠಚಂದನಮ್ ।**
**ಯುಗಾನಿ ವಸತಿ ಸ್ವರ್ಗೇ ಅನಂತಾನಿ ನರೋತ್ತಮಃ ॥**

ಪ್ರತಿನಿತ್ಯ ತುಲಸೀಕಾಷ್ಠದಿಂದ ಗಂಧವನ್ನು ತೇಯ್ದು ಪರಮಾತ್ಮನಿಗೆ ಆ ಗಂಧವನ್ನು ಸಮರ್ಪಿಸಬೇಕು. ಶ್ರದ್ಧೆಯಿಂದ ಹೀಗೆ ಪರಮಾತ್ಮನನ್ನು ಪೂಜಿಸುವ ಅಧಿಕಾರಿಯು ಮುಕ್ತಿಯನ್ನು ಪಡೆಯುತ್ತಾನೆ. ಅನಂತಯುಗಗಳವರೆಗೆ ಅಲ್ಲಿಯೇ ವಾಸಮಾಡುತ್ತಾನೆ. ಮತ್ತೆಂದಿಗೂ ತಿರುಗಿ ಸಂಸಾರಕ್ಕೆ ಬರುವುದಿಲ್ಲ.

**ಹರೇಃ ಮೂರ್ಧ್ನಿ ವಸೇದ್ಯಸ್ತು ತುಲಸೀಕಾಷ್ಠಚಂದನಮ್ ।**
**ಸ್ವದೇಹೇ ಧಾರಯೇದ್ಯಸ್ತು ತೀರ್ಥಕೋಟಿಫಲಂ ಭವೇತ್ ॥**

ತುಲಸೀಕಾಷ್ಠದ ಗಂಧವನ್ನು ದೇವರ ತಲೆಯ ಮೇಲೆ ಏರಿಸಬೇಕು. ನಂತರ ಅದನ್ನು ತನ್ನ ಅಂಗಗಳಲ್ಲಿ ಭಕ್ತಿಯಿಂದ ಧರಿಸಬೇಕು. ಅವನು ಕೋಟಿತೀರ್ಥಗಳಲ್ಲಿ ಸ್ನಾನಮಾಡಿದಷ್ಟು ಪುಣ್ಯವನ್ನು ಪಡೆಯುತ್ತಾನೆ.

**ಸರ್ವೇಷಾಮಪಿ ದೇವಾನಾಂ ತುಲಸೀಕಾಷ್ಠಚಂದನಮ್ ।**
**ಪಿತೄಣಾಂ ಚ ವಿಶೇಷೇಣ ಸದಾಽಭೀಷ್ಟಂ ಹರೇರ್ಯಥಾ ॥**

ಭಗವಂತನಿಗೆ ತುಲಸಿಯ ಗಂಧ ಪರಮಪ್ರಿಯವಾಗಿದೆ. ದೇವರ ಪ್ರೀತಿಗೆ ಪಾತ್ರವಾದ ಈ ಚಂದನವನ್ನು ಸಹಜವಾಗಿಯೇ ದೇವತೆಗಳು ಮತ್ತು ಪಿತೃಗಳೆಲ್ಲರೂ ಅಪೇಕ್ಷಿಸುತ್ತಾರೆ. ಆದ್ದರಿಂದ ನಿತ್ಯಪೂಜೆಯಲ್ಲಿ ದೇವತೆಗಳಿಗೆ, ಶ್ರಾದ್ಧದಲ್ಲಿ ಪಿತೃಗಳಿಗೆ ತುಲಸೀಗಂಧವನ್ನು ಸಮರ್ಪಿಸುವುದು ಶ್ರೇಯಸ್ಕರವಾಗಿದೆ.

ವಾಯುಪುರಾಣದಲ್ಲಿಯೂ ಈ ವಿಷಯವು ಮತ್ತಿಷ್ಟು ವಿಶಿಷ್ಟವಾಗಿ ಪ್ರತಿಪಾದಿತವಾಗಿದೆ-

**ಯೋ ದದ್ಯಾತ್ತುಲಸೀಗಂಧಂ ಅಪಿ ಸರ್ಷಪಮಾತ್ರಕಮ್ ।**
**ಕೋಟಿಜನ್ಮಾರ್ಜಿತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥**

ತುಲಸಿಯ ಗಂಧವನ್ನು ತೇಯುವುದು ಸ್ವಲ್ಪ ಕಷ್ಟವಾದೀತು. ಆದರೇ ಸಾಸುವೆಯಷ್ಟಾದರೂ ತುಲಸೀಗಂಧವನ್ನು ತೇಯ್ದು ಅದನ್ನು ದೇವರಿಗೆ ಸಮರ್ಪಿಸಬೇಕು. ಕೋಟಿ ಜನ್ಮದಿಂದ ಸಂಚಯ ಮಾಡಿದ ಪಾಪರಾಶಿಗಳೆಲ್ಲ ಈ ವಿಧವಾದ ಪೂಜೆಯಿಂದ ತೊಲಗಿಹೋಗುತ್ತವೆ.

**ಯೇ ಹಿ ಭಾಗವತಾ ಭೂತ್ವಾ ತುಲಸೀಚಂದನಂ ಕಲೌ ।**
**ನಾರ್ಪಯಂತಿ ಸದಾ ವಿಷ್ಣೋಃ ನ ಚ ಭಾಗವತಾ ಹಿ ತೇ ॥**

ಇಷ್ಟೆಲ್ಲ ಸುಲಭವಾಗಿ ಸಾಧನೆಗಳನ್ನು ಹೇಳಿದ್ದಾರೆ. ಇವುಗಳನ್ನು ಭಾಗವತರಾದವರು ಪಾಲಿಸಬೇಕು. ವಿಶೇಷವಾಗಿ ಕಲಿಯುಗದಲ್ಲಿ ಈ ಸಾಧನೆಗಳು ಪರಿಪೂರ್ಣವಾದ ಫಲಕ್ಕೆ ಕಾರಣವಾಗುತ್ತವೆ. ಆದ್ದರಿಂದ ಭಾಗವತರಾದವರು ಕಲಿಯುಗದಲ್ಲಿ ವಿಶೇಷವಾಗಿ ತುಲಸೀಚಂದನವನ್ನು ದೇವರಿಗೆ ಯಾವಾಗಲೂ ಸಮರ್ಪಿಸುತ್ತಿರಬೇಕು. ಇದರಿಂದ ಭಗವದ್ಭಕ್ತಿಯು ಅಭಿವೃದ್ಧವಾಗುತ್ತದೆ. ಅನುಕೂಲವಿದ್ದರೂ ತುಲಸೀಗಂಧವನ್ನು ಶ್ರೀಹರಿಗೆ ಸಮರ್ಪಿಸದವರಿಗೆ ಭಕ್ತಿಯ ಅಭಿವೃದ್ಧಿ ಆಗುವುದಿಲ್ಲ.

**ತುಲಸೀಚಂದನಾಲಿಪ್ತಃ ಕುರುತೇ ಹರಿಪೂಜನಮ್ ।**
**ಪೂಜಿತೇನ ದಿನ್ನೈಕೇನ ಲಭತೇ ಶತವಾರ್ಷಿಕೀಮ್ ॥ ಪುಣ್ಯಮಿತಿ ಶೇಷಃ -ಪ.ಪು**

ತುಲಸೀಚಂದನವನ್ನು ತೇಯಬೇಕು. ಅದನ್ನು ಶ್ರೀಹರಿಗೆ ಸಮರ್ಪಿಸಬೇಕು. ಆ ಚಂದನ ಸಾಸುವೆಯಷ್ಟಾದರೂ ಸರಿ. ಭಗವಂತನಿಗೆ ಸಂತೋಷವಾಗುತ್ತದೆ. ದೇವರಿಗೆ ಸಮರ್ಪಿಸಿದ ತುಲಸೀಚಂದನವನ್ನು ಸ್ವಯಂ ತಾನು ಧರಿಸಬೇಕು. ತುಲಸೀಚಂದನವನ್ನು ಧರಿಸಿ ಶ್ರೀಹರಿಪೂಜಾರೂಪವಾದ ಪಾಠ-ಪ್ರವಚನ-ಜಪ ಮುಂತಾದ ಕರ್ಮಗಳನ್ನು ಅನುಷ್ಠಾನ ಮಾಡಬೇಕು. ಇದರಿಂದ ಅತ್ಯಧಿಕವಾದ ಪುಣ್ಯವು ಲಭ್ಯವಾಗುತ್ತದೆ.

ಸುಲಭವಾದ ಹಲವು ಉಪಾಯಗಳನ್ನು ಗರುಡಪುರಾಣ ಈ ರೀತಿಯಾಗಿ ತಿಳಿಸುತ್ತದೆ-

**ಶ್ರೀಖಂಡಚಂದನೋನ್ಮಿಶ್ರಂ ಯೋ ಗಂಧಂ ವಿಷ್ಣವೇಽರ್ಪಯೇತ್ ।**
**ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।**
**ವೈಕುಂಠೇ ಮೋದತೇ ನಿತ್ಯಂ ದಶಪೂರ್ವೈಃ ದಶಾಽಪರೈಃ ॥**

**ತುಲಸೀದಲಲಗ್ನೇನ ಚಂದನೇನ ಜನಾರ್ದನಮ್ ।**
**ವಿಲೇಪಯತಿ ಯೋ ನಿತ್ಯಂ ಲಭತೇ ಚಿಂತಿತಂ ಫಲಮ್ ॥ -ಗಾರುಡೇ**

ಆಚಾರಸಾರವೆಂಬ ಗ್ರಂಥದಲ್ಲಿ ಗರುಡಪುರಾಣದ ಪ್ರಮಾಣಗಳನ್ನು ಉದಾಹರಿಸಿ ಹಲವು ಸುಲಭೋಪಾಯಗಳನ್ನು ತುಲಸೀಗಂಧಸಮರ್ಪಣೆಯ ವಿಷಯದಲ್ಲಿ ತಿಳಿಸಿದ್ದಾರೆ. ಇಷ್ಟಾದರೂ ಪಾಲನೆ ಮಾಡಬೇಕು.

ಇಲ್ಲಿ ಒಂದು ವಿಷಯವನ್ನು ನಾವು ಗಮನಿಸಬೇಕು. ಇಷ್ಟೆಲ್ಲ ನಿಯಮಗಳನ್ನು ಶಾಸ್ತ್ರ ಹಾಕಿದ್ದು ನಮ್ಮ ಒಳಿತಿಗಾಗಿ ಎಂದು ಭಾವಿಸಬೇಕು. ಲೌಕಿಕಹವ್ಯಾಸಗಳಲ್ಲಿ ಸಮಯವನ್ನು ಕಳೆಯುತ್ತಿರುವವರಿಗೆ ಈ ರೀತಿಯಾದ ನಿಯಮಗಳಲ್ಲಿ ನಿಷ್ಠೆಯನ್ನು ಹುಟ್ಟಿಸುತ್ತಾ ಧಾರ್ಮಿಕವಾದ ಹವ್ಯಾಸಗಳಲ್ಲಿ ಸಮಯವನ್ನು ಕಳೆಯಲು ಅನುಕೂಲಮಾಡಿಕೊಡುವ ಉದ್ದೇಶ ಈ ಶಾಸ್ತ್ರೀಯ ವಿಧಿ-ವಿಧಾನಗಳಿಗಿವೆ ಎಂಬುದನ್ನು ಮನಗಾಣಬೇಕು. ಹೀಗೆ ಶಾಸ್ತ್ರೀಯವಾದ ಉದ್ದೇಶಗಳನ್ನು ಸರಿಯಾಗಿ ತಿಳಿದುಕೊಳ್ಳುವುದರಿಂದ ಸಾಧಕನು ಸಾಧನೆಯಿಂದ ಸಂಪನ್ನನಾಗುತ್ತಾನೆ.

ಪ್ರತ್ಯೇಕವಾಗಿ ತುಲಸೀಗಂಧವನ್ನು ತೇಯುವ ಅವಕಾಶವಿಲ್ಲದಿರುವಾಗ ಶ್ರೀಖಂಡದ ಗಂಧದೊಡನೆ ತುಲಸೀಗಂಧವನ್ನೂ ತೇಯ್ದು ಅದನ್ನು ದೇವರಿಗೆ ಸಮರ್ಪಿಸಬೇಕು. ಈ ಸಾಧನೆಯೂ ಮುಕ್ತಿಗೆ ಸಹಕಾರಿಯಾಗುತ್ತದೆ.

ಪ್ರತಿನಿತ್ಯವೂ ಗಂಧವನ್ನು ಶ್ರೀಹರಿಗೆ ಸಮರ್ಪಿಸುತ್ತೇವೆ. ಸಾಕ್ಷಾತ್ತಾಗಿ ನಮ್ಮ ಕೈಯಿಂದ ದೇವರಿಗೆ ಗಂಧವನ್ನು ಸಮರ್ಪಿಸಬಾರದು. ತುಲಸೀದಲಯುಕ್ತವಾಗಿ ಸಮರ್ಪಿಸಬೇಕು. ಹೀಗೆ ಶ್ರದ್ಧೆಯಿಂದ ಮಾಡುವವರಿಗೆ ಅಭೀಷ್ಟವಾದ ಪ್ರಯೋಜನಗಳೆಲ್ಲ ಸಿದ್ಧಿಸುತ್ತವೆ.

**ತುಲಸೀದಾನ**

ತುಲಸೀದಾನ ತತ್ತ್ವಜ್ಞಾನಪ್ರಾಪಕವಾಗಿದೆ. ಆದ್ದರಿಂದ ಅವಶ್ಯವಾಗಿ ತುಲಸಿಯನ್ನು ಬೆಳೆಸಿ ಅದನ್ನು ವಿಷ್ಣುಭಕ್ತರಿಗೆ ದಾನಮಾಡಬೇಕೆಂದು ಸ್ಕಂದಪುರಾಣ ಮತ್ತು ಅಗ್ನಿ ಪುರಾಣಗಳು ತಿಳಿಸುತ್ತವೆ-

**ಮಮಾಽರ್ಚನಾರ್ಥಂ ಭಿಕ್ಷೂಣಾಂ ಯಚ್ಛಂತಿ ತುಲಸೀದಲಮ್ ।**
**ಅನ್ಯೇಷಾಮಪಿ ಭಕ್ತಾನಾಂ ಯಾಂತಿ ತೇ ಪದಮವ್ಯಯಮ್ ॥ -ಸ್ಕ.ಪು**

**ಯಃ ಕುರ್ಯಾದ್ವಿಷ್ಣುಭಕ್ತಾಯ ತುಲಸೀದಾನಮುತ್ತಮಮ್ ।**
**ಗತ್ವಾ ತು ಸ್ವರ್ಗಲೋಕಾನ್ ಸಃ ಸಾರ್ವಭೌಮೋ ಭವೇತ್ ಭುವಿ ॥**
**ಸ ದಿವ್ಯಜ್ಞಾನವಾನ್ ಯೋಗೀ ವಿಷ್ಣುಸಾಯುಜ್ಯಮಾಪ್ನುಯಾತ್ ॥ -ಅ.ಪು**

ಯತಿಗಳಿಗೆ ತುಲಸೀ-ಪುಷ್ಪಗಳನ್ನು ಚಯನಮಾಡುವ ಅಧಿಕಾರವಿರುವುದಿಲ್ಲ. ಆದರೆ ದೇವರ ಪೂಜೆಯನ್ನು, ಅರ್ಚನೆಯನ್ನು ತಪ್ಪಿಸುವ ಹಾಗಿಲ್ಲ. ಆದರೆ ಮತ್ತೊಬ್ಬರು ತಂದುಕೊಟ್ಟಿರುವ ತುಲಸೀಪುಷ್ಪಗಳಿಂದ ಅವಶ್ಯವಾಗಿ ಅವರು ದೇವರನ್ನು ಅರ್ಚಿಸಬಹುದು. ಯಾರೂ ತುಲಸೀ-ಪುಷ್ಪಗಳನ್ನು ತಂದುಕೊಡದಿದ್ದ ಪಕ್ಷದಲ್ಲಿ ತುಲಸಿಯನ್ನು ಸ್ಮರಿಸುತ್ತಾ ಅಹಿಂಸಾದಿ ಅಷ್ಟಭಾವಪುಷ್ಪಗಳಿಂದ ಪರಮಾತ್ಮನನ್ನು ಅರ್ಚಿಸಬೇಕು ಎಂದು ಶಾಸ್ತ್ರವು ತಿಳಿಸುತ್ತದೆ. ಆದ್ದರಿಂದ ಅಂತಹ ಯತಿಗಳಿಗೆ ತುಲಸಿ-ಪುಷ್ಪಗಳನ್ನು ನೀಡುವುದರಿಂದ ಅನಂತವಾದ ಫಲವು ಪ್ರಾಪ್ತವಾಗುತ್ತದೆ.

ಮನೆಯಲ್ಲಿ ಸಾಕಷ್ಟು ತುಲಸಿ ಇರುತ್ತದೆ. ನಿತ್ಯವೂ ಶ್ರೀಹರಿಯನ್ನು ಅರ್ಚಿಸುವ ಪೂಜಕರಿಗೆ ಆ ತುಲಸಿಯನ್ನು ದಾನಮಾಡಬೇಕು. ಹೀಗೆ ಯತಿಗಳಿಗೆ ಮತ್ತು ಗೃಹಸ್ಥರಾದ, ಬ್ರಹ್ಮಚಾರಿಗಳಾದ ವಿಷ್ಣುಭಕ್ತರಿಗೆ ತುಲಸಿಯನ್ನು ದಾನಮಾಡುವುದರಿಂದ ನಾಶರಹಿತವಾದ ವೈಕುಂಠಾದಿಲೋಕಗಳು ಲಭ್ಯವಾಗುತ್ತವೆ. ಅಲ್ಲಿ ಪರಮಾತ್ಮನನ್ನು ಅರ್ಚಿಸುತ್ತ ಸುಖಿಸುತ್ತಾನೆ.

ತುಲಸೀದಾನವನ್ನು ವಿಷ್ಣುಭಕ್ತರಾದವರಿಗೆ ಮಾಡುವುದರಿಂದ ಸ್ವರ್ಗಾದಿಲೋಕ-ಗಳಲ್ಲಿ ದಿವ್ಯವಾದ ಭೋಗಗಳನ್ನು ಅನುಭವಿಸಿ ಸಾರ್ವಭೌಮನಾಗಿ ಭೂಮಿಯಲ್ಲಿ ಜನಿಸುತ್ತಾನೆ. ಅಲ್ಲಿ ತತ್ತ್ವಜ್ಞಾನವನ್ನು ವಿಶಿಷ್ಟವಾಗಿ ಪಡೆದು ಮುಕ್ತಿಯನ್ನು ಪಡೆಯುತ್ತಾನೆ.

**ತುಲಸೀಸಹಿತವಾಗಿಯೇ ದಾನ**

**ದದ್ಯಾತ್ ಶ್ರೀಹರಯೇ ನಿತ್ಯಂ ಯದ್ಯತ್ ಪ್ರಿಯಮಥಾಽತ್ಮನಃ ।**
**ಪ್ರಕ್ಷಿಪ್ಯ ತುಲಸೀಂ ಪ್ರೋಕ್ಷ್ಯ ಸಪ್ತಕೃತ್ವೋಽಭಿಮಂತ್ರಯೇತ್ ॥ -ಸ್ಕ.ಪು**

ಶ್ರೀಹರಿಗೆ ಪರಮಪ್ರಿಯವಾದ ಪದಾರ್ಥಗಳು ಸಾಕಷ್ಟು ಇವೆ. ದೇವರಿಗೆ ಪ್ರಿಯವಾದ ಪದಾರ್ಥಗಳು ವಿಹಿತವೇ ಆಗಿರುತ್ತವೆ. ಆ ಎಲ್ಲ ಪದಾರ್ಥಗಳನ್ನು ದೇವರಿಗೆ ಸಮರ್ಪಿಸಬೇಕು.

ಸಾಧಕನಿಗೆ ಪ್ರೀತ್ಯಾಸ್ಪದವಾದ ಪದಾರ್ಥಗಳು ಕೂಡಾ ಬೇಕಾದಷ್ಟಿವೆ. ಅವುಗಳನ್ನೆಲ್ಲ ದೇವರಿಗೆ ಸಮರ್ಪಿಸಬಾರದು. ವಿಹಿತವಾದ ಪದಾರ್ಥಗಳನ್ನು ಮಾತ್ರ ದೇವರಿಗೆ ಸಮರ್ಪಿಸಬೇಕು. ಆದರೆ ಆಯಾ ಪದಾರ್ಥಗಳ ಮೇಲೆ ತುಲಸಿಯನ್ನು ಹಾಕಬೇಕು. ಆ ಪದಾರ್ಥವನ್ನು ಪ್ರೋಕ್ಷಣ ಮಾಡಬೇಕು. ನಂತರ ಏಳು ಬಾರಿ ಅಭಿಮಂತ್ರಣಮಾಡಬೇಕು. ನಂತರ ಅದನ್ನು ಪರಮಾತ್ಮನಿಗೆ ನಿವೇದಿಸಬೇಕು. ತುಲಸೀಸಹಿತವಾದ ಆ ಪದಾರ್ಥವನ್ನು ಪರಮಾತ್ಮ ಸಂತೋಷದಿಂದ ಸ್ವೀಕರಿಸುತ್ತಾನೆ.

ದೇವರಿಗೆ ನಿವೇದಿತವಾದ ಪದಾರ್ಥಗಳನ್ನು ಬ್ರಾಹ್ಮಣರಿಗೆ ದಾನವಾಗಿ ನೀಡಬೇಕು. ಬ್ರಾಹ್ಮಣಾಂತರ್ಯಾಮಿಯಾದ ಪರಮಾತ್ಮನಿಗೆ ದಾನಮಾಡುವಾಗಲೂ ಆ ಪದಾರ್ಥದ ಮೇಲೆ ತುಲಸಿಯನ್ನಿಟ್ಟು ದಾನಮಾಡಬೇಕು. ಇವತ್ತಿಗೂ ಇದು ಆಚರಣೆಯಲ್ಲಿದೆ.

**ಸಂತಾನಕ್ಕಾಗಿ ತುಲಸಿಯ ವಿಧವಿಧವಾದ ಪೂಜೆ**

(ಸಂತಾನಕ್ಕಾಗಿ ಪೇಚಾಡದ ಮನುಷ್ಯನೇ ಪ್ರಪಂಚದಲ್ಲಿ ಇಲ್ಲ. ಅಂತೆಯೇ ಸತ್ಸಂತಾನಕ್ಕಾಗಿ ಪೇಚಾಡುವ ಮನುಷ್ಯನೂ ದುರ್ಲಭ. ಆದರೆ ಸತ್ಸಂತಾನವನ್ನು ಪಡೆಯುವುದು ದಂಪತಿಗಳಿಗೆ ಧರ್ಮವೇ ಆಗಿದೆ. ಆ ಕನಸು ಈಡೇರುವುದು ಅತಿದುರ್ಲಭ. ಮಕ್ಕಳಾಗಬಹುದು. ಧಾರ್ಮಿಕರಾದ, ಸಮಾಜದ ಹಿತಚಿಂತಕರಾದ ಮಕ್ಕಳಾಗುವುದು ಒಂದರ್ಥದಲ್ಲಿ ಸಾಧ್ಯವೇ ಇಲ್ಲ. ಈ ಸಮಾಜದಲ್ಲಿ ಬದುಕುತ್ತಿರುವ ನಾವು ಮುಂದಿನ ಸಮಾಜಕ್ಕೆ ಒಂದು ಒಳ್ಳೆಯ ಕೊಡುಗೆಯನ್ನು ನೀಡಬೇಕು. ಆ ಕೊಡುಗೆ ಸತ್ಸಂತಾನದ ಮೂಲಕವೇ ಪೂರ್ಣವಾಗುತ್ತದೆ. ಇವತ್ತಿನ ಜನರಿಗೆ ಈ ಕಲ್ಪನೆ ಇಲ್ಲ. ಇರಲಿ. ಮಕ್ಕಳಿಗಾಗಿ ಬಹಳ ಪ್ರಯತ್ನ ಬೇಕಿಲ್ಲವೆಂದು ಅನೇಕರು ಭ್ರಾಂತರಾಗಿರಬಹುದು. ಆದರೆ ಧಾರ್ಮಿಕರಾದ ಮಕ್ಕಳಾಗಬೇಕಾದರೆ ವಿಶಿಷ್ಟವಾದ ರೀತಿಯಲ್ಲಿ ದಂಪತಿಗಳು ಧರ್ಮದಲ್ಲಿ ತೊಡಗಿಕೊಳ್ಳಬೇಕು. ಧಾರ್ಮಿಕಸಂತಾನಕ್ಕಾಗಿ ಪ್ರಜಾಪತಿಗಳು ಮಾಡಿದ ವಿಶಿಷ್ಟವಾದ ಪ್ರಯತ್ನಗಳನ್ನು ಮಹಾಭಾರತ, ಭಾಗವತ, ರಾಮಾಯಣಗಳಲ್ಲಿ ನಾವು ಕೇಳುತ್ತೇವೆ. ಆ ರೀತಿಯಲ್ಲಿ ಸಾಧನೆ ಮಾಡಲು ನಮ್ಮಿಂದ ಆಗದೇ ಇರಬಹುದು. ಪ್ರಕೃತ ಈ ಮುಂದಿನ ವಚನಗಳಲ್ಲಿ ಉಕ್ತವಾದ ಸೇವೆ ಇದು ಅತ್ಯಲ್ಪವಾದ ಸೇವೆ. ಈ ಸೇವೆಯನ್ನು ಮಾಡುವುದರಿಂದ ನಿಶ್ಚಿತವಾಗಿಯೂ ಸಂತಾನದ ಪ್ರತಿಬಂಧಕಗಳೆಲ್ಲ ತೊಲಗುತ್ತವೆ. ಸತ್ಸಂತಾನವು ಪ್ರಾಪ್ತವಾಗುತ್ತದೆ. ಆದ್ದರಿಂದ ದಂಪತಿಗಳು ಮದುವೆಯಾದ ಮರುದಿನದಿಂದಲೇ ಈ ವಿಧವಾದ

ತುಲಸಿಯ ಪೂಜೆಯಲ್ಲಿ ತತ್ಪರರಾಗಬೇಕು. ಎಚ್ಚರಿಕೆ ಇರಲಿ. ತುಲಸಿಯ ಪೂಜೆಯ ಭರದಲ್ಲಿ ದೇವರನ್ನು, ರಮಾದೇವಿಯರನ್ನು, ವಾಯುದೇವರನ್ನು ಮರೆಯಬೇಡಿ.)

ಇದೀಗ ಪ್ರಸ್ತುತವಾದ ಭಕ್ತಿಗಳಲ್ಲಿ ನಮಸ್ಕಾರ, ಸ್ತುತಿ, ಪೂಜೆಗಳು ಸೇರಿಕೊಂಡಿವೆ. ಈ ರೀತಿಯಾದ ಭಕ್ತಿಗಳನ್ನು ಮಾಡುವಾಗ ಪಾಲಿಸಬೇಕಾದ ವಿಶೇಷನಿಯಮಗಳನ್ನು ಅದರಿಂದ ಲಭ್ಯವಾಗುವ ಫಲವನ್ನು ಈ ಸ್ಮೃತಿ ಅತಿ ಸೊಗಸಾಗಿ ತಿಳಿಸುತ್ತದೆ-

**ರಂಗವಲ್ಲೀಂ ಪುರೋ ನ್ಯಸ್ಯ ದೀಪಂ ದತ್ವಾ ದಿನೇ ದಿನೇ ।**
**ಪ್ರದಕ್ಷಿಣಶತಂ ಕೃತ್ವಾ ನಮಸ್ಕಾರಶತಂ ತಥಾ ॥**

**ಧೂಪದೀಪಾದಿನೈವೇದ್ಯೈಃ ಸ್ತೋತ್ರೇಣೈವ ವಿಶೇಷತಃ ।**
**ತೋಷಯೇತ್ ಪುತ್ರಕಾಮಾರ್ತಾ ವತ್ಸರಾತ್ತನಯಂ ಲಭೇತ್ ॥**

ಪ್ರತಿನಿತ್ಯ ತುಲಸಿಯ ಪೂಜೆಯನ್ನು ಮಾಡುತ್ತಿರಬೇಕು. ಸ್ತ್ರೀಯರು ಮಾಡುತ್ತಲೇ ಇರುತ್ತಾರೆ. ಆದರೂ ವಿಶೇಷವಾಗಿ ತುಲಸಿಯ ಮುಂದೆ ರಂಗವಲ್ಲಿಗಳನ್ನು ಹಾಕಬೇಕು. ದೀಪಗಳನ್ನು ಇಡಬೇಕು. ಪ್ರತಿನಿತ್ಯ ನೂರು ಪ್ರದಕ್ಷಣೆಗಳನ್ನು ಹಾಕಬೇಕು. ಪ್ರತಿ ಪ್ರದಕ್ಷಿಣೆಗೂ ಒಂದೊಂದರಂತೆ ನೂರು ನಮಸ್ಕಾರಗಳನ್ನು ಹಾಕಬೇಕು. ಧೂಪ-ದೀಪ-ನೈವೇದ್ಯಾದಿಗಳಿಂದ ತುಲಸಿಯನ್ನು ಪೂಜಿಸಬೇಕು. ಪೌರಾಣಿಕವಾದ ಸ್ತೋತ್ರಗಳಿಂದ, ಜ್ಞಾನಿಗಳಾದ ದಾಸರು ರಚಿಸಿದ ಪದ-ಪದ್ಯಗಳಿಂದ ತುಲಸಿಯನ್ನು ಸ್ತುತಿಸಬೇಕು. ಈ ರೀತಿಯಾದ ಆರಾಧನೆಯಿಂದ ತುಲಸಿಯನ್ನು ಸಂತೋಷ ಪಡಿಸಬೇಕು. ಹೀಗೆ ತುಲಸಿಯನ್ನು ಸೇವಿಸುವುದರಿಂದ ಒಂದು ವರ್ಷದಲ್ಲಿಯೇ ಧಾರ್ಮಿಕವಾದ ಸಂತಾನವನ್ನು ಪಡೆಯುತ್ತಾಳೆ.

ಪುತ್ರಕಾಮನೆ ಇದ್ದವರಿಗೆ ಮತ್ತಿಷ್ಟು ವಿಶಿಷ್ಟವಾದ ನಿಯಮಗಳನ್ನು ಈ ಸ್ಮೃತಿ ತಿಳಿಸುತ್ತದೆ-

**ಕ್ಷೀರೇಣ ವೇಕ್ಷುಸಾರೇಣ ನಾರಿಕೇಲರಸೇನ ವಾ ।**
**ವರ್ಧಯೇದ್ವತ್ಸರಂ ದೇವೀಂ ವಿನಿವೇದ್ಯ ಚ ಪಾಯಸಮ್ ॥**

**ಅನಯಾ ಪೂಜಯಾ ದೇವೀ ತೋಷಿತಾ ಸರ್ವಸಿದ್ಧಿದಾ ।**
**ದದಾತಿ ನಿತ್ಯಂ ವಂಧ್ಯಾಯಾಃ ಸಾಮ್ರಾಜ್ಯಂ ಚ ಪತಿಂ ಸುತಮ್ ॥**

ತುಲಸಿಗೆ ನೀರಿನಿಂದ ಸೇಚನ ಮಾಡಬೇಕೆಂದು ತಿಳಿದಿದ್ದೇವೆ. ಅದು ಒಂದು ವಿಧವಾದ ತುಲಸೀಭಕ್ತಿ. ಇದನ್ನು ಮತ್ತಿಷ್ಟು ವಿಶಿಷ್ಟವಾಗಿ ಹೀಗೆ ಮಾಡಬೇಕು.

ಯೋಗ್ಯವಾದ ರೀತಿಯಲ್ಲಿ ತುಲಸಿಗೆ ಹಾಲಿನಿಂದ, ಕಬ್ಬಿನ ರಸದಿಂದ, ಎಳನೀರಿನಿಂದ ಸೇಚನ ಮಾಡಬೇಕು. ಹೀಗೆ ಒಂದು ವರ್ಷದ ತನಕ ತುಲಸಿಯನ್ನು ಬೆಳೆಸಬೇಕು. ಮತ್ತು ಹರಿನಿವೇದಿತವಾದ ಪಾಯಸವನ್ನು ತುಲಸಿಗೆ ನಿತ್ಯವೂ ನೈವೇದ್ಯವಾಗಿ ಸಮರ್ಪಿಸಬೇಕು. ಹೀಗೆ ಪೂಜಿಸುವುದರಿಂದ ತುಲಸಿಗೆ ಸಂತಸವಾಗುತ್ತದೆ. ಬಯಸಿದ ಬಯಕೆಗಳನ್ನೆಲ್ಲ ಪೂರ್ಣಮಾಡುತ್ತಾಳೆ. ಹೀಗೆ ಸೇವಿಸುವುದರಿಂದ ಮಕ್ಕಳಿಲ್ಲದವಳೂ ಮಕ್ಕಳನ್ನು ಪಡೆಯುತ್ತಾಳೆ. ವಿಶಿಷ್ಟವಾದ ಸಾಮ್ರಾಜ್ಯಸುಖವು ಅವರಿಗೆ ದೊರೆಯುತ್ತದೆ. ಈ ರೀತಿಯಾದ ಸೇವೆಯನ್ನು ಕುಮಾರಿಯರು ಮಾಡುವುದರಿಂದ ಅವರು ಒಳ್ಳೆಯ ಪತಿಯನ್ನು ಪಡೆಯುತ್ತಾರೆ. ಅಲ್ಲದೇ ಧಾರ್ಮಿಕರಾದ ಮಕ್ಕಳು ಅವಳಿಗೆ ಆಗುತ್ತಾರೆ. ಈ ವಿಷಯದಲ್ಲಿ ಸರ್ವಥಾ ಸಂದೇಹವಿಲ್ಲ.

ಮತ್ತೊಂದು ರೀತಿಯಾದ ಸೇವೆಯನ್ನು ಸ್ಮೃತಿಯಲ್ಲಿ ಈ ರೀತಿಯಾಗಿ ತಿಳಿಸುತ್ತಾರೆ-

**ಭೋಜಯೇತ್ತುಲಸೀಪ್ರೀತ್ಯೈ ಪರಮಾನ್ನೇನ ವರ್ಣಿನಮ್ ।**
**ವತ್ಸರಂ ಭಾರ್ಗವೇ ವಾರೇ ವಂಧ್ಯಾ ಪುತ್ರಮವಾಪ್ನುಯಾತ್ ॥**

ತುಲಸಿಯ ಪ್ರಸಾದದಿಂದ ಎಲ್ಲ ಇಷ್ಟಾರ್ಥಗಳೂ ಪೂರ್ಣವಾಗುತ್ತವೆ. ತುಲಸಿಯ ಪ್ರೀತಿಯನ್ನು ಸಂಪಾದಿಸಬೇಕಾದರೆ ಈ ನಿಯಮವನ್ನು ಪಾಲಿಸಬೇಕು. ಒಂದು ವರ್ಷದ ವರೆಗೆ ಪ್ರತಿ ಶುಕ್ರವಾರ ಪಾಯಸವನ್ನು ಮಾಡಿ ದೇವರಿಗೆ ನಿವೇದಿಸಿ ಯೋಗ್ಯರಾದ ಬ್ರಾಹ್ಮಣರಿಗೆ ಆ ಪಾಯಸವನ್ನು ಬಡಿಸಬೇಕು. ವಿಶಿಷ್ಟವಾದ ರೀತಿಯಲ್ಲಿ ಬ್ರಾಹ್ಮಣಭೋಜನ ಮಾಡಿಸಬೇಕು. ಹೀಗೆ ಮಾಡುವುದರಿಂದ ಮಕ್ಕಳಿಲ್ಲದವಳೂ ಮಕ್ಕಳನ್ನು ಪಡೆಯುತ್ತಾಳೆ.

**ತುಲಸಿಯ ಮಾನಾಪಮಾನಗಳಿಂದ ಆಗುವ ಫಲ**

ದೇವತೆಗಳೆಲ್ಲ ತುಲಸಿಗೆ ಹೇಳಿದ ಮಾತುಗಳು ಈ ರೀತಿಯಾಗಿವೆ-

**ಪ್ರದಕ್ಷಿಣೇಕುರ್ವತೇ ಯೇ ದೃಷ್ಟ್ವಾ ತ್ವಾಂ ಯತ್ರ ಕುತ್ರಚಿತ್ ।**
**ಪ್ರಣಮಂತಿ ಚ ಯೇ ಭಕ್ತ್ಯಾ ನ ತೇ ದುಃಖಾನಿ ಯಾಂತಿ ವೈ ॥**

ತುಲಸಿಯನ್ನು ನೋಡಿದ ಕೂಡಲೇ ಭಕ್ತಿಯಿಂದ ಅದಕ್ಕೆ ಪ್ರದಕ್ಷಿಣೆಯನ್ನು ಹಾಕಬೇಕು. ತುಲಸಿ ಎಲ್ಲಿಯೇ ಇರಲಿ. ಅದು ಪವಿತ್ರ. ಅದು ಎಲ್ಲಿಯೇ ಕಂಡರೂ ಅದಕ್ಕೆ ಭಕ್ತಿಯಿಂದ ನಮಸ್ಕರಿಸಬೇಕು. ಅಂಥವರ ದುಃಖಗಳು ದೂರವಾಗುತ್ತವೆ.

**ತುಲಸಿಯನ್ನು ಸದಾ ಗೌರವಿಸಬೇಕು**

**ತುಲಸೀಕಾನನಂ ದೃಷ್ಟ್ವಾ ವಿಮುಖೋ ಯಾತಿ ಪಾತಕೀ ।**
**ನಿಶ್ಚಯಾನ್ಮುನಿಶಾರ್ದೂಲ ಬ್ರಹ್ಮಹಾ ಸ ನಿಗದ್ಯತೇ ॥**

ತುಲಸೀವನವನ್ನು ನೋಡಿ ಅದನ್ನು ಪ್ರದಕ್ಷಿಣೆ-ನಮಸ್ಕಾರಗಳಿಂದ ಪೂಜಿಸಬೇಕು. ಹೀಗೆ ಮಾಡದಿದ್ದವನು ನಿಶ್ಚಯವಾಗಿಯೂ ಬ್ರಹ್ಮಹಾ ಎನಿಸುತ್ತಾನೆ. ಆದ್ದರಿಂದ ತುಲಸಿಯ ದರ್ಶನವಾದ ಕೂಡಲೇ ಅದನ್ನು ಪ್ರದಕ್ಷಿಣೆ ಹಾಕಬೇಕು.

**ಯತ್ರ ಗೇಹಾಂಗಣೇ ದೇವೀ ಪೂಜ್ಯತೇ ಭಕ್ತಿಮನ್ನರೈಃ ।**
**ತದ್ಗೃಹಂ ಗೃಹಮಿತ್ಯಾಹುಃ ಸ್ಮಶಾನಮಿತರದ್ವಿದುಃ ॥**

ಮನೆಯ ಅಂಗಳದಲ್ಲಿ ತುಲಸೀವೃಕ್ಷವನ್ನು ಬೆಳೆಸಬೇಕು. ಬೆಳೆದ ವೃಕ್ಷವನ್ನು ನಿತ್ಯವೂ ಭಕ್ತಿಯಿಂದ ಪೂಜಿಸಬೇಕು. ಹೀಗೆ ಭಕ್ತಿಯಿಂದ ಪೂಜಿತಳಾಗಿ ತುಲಸೀವೃಕ್ಷವು ಯಾರ ಮನೆಯಲ್ಲಿದೆಯೋ ಆ ಮನೆಯೇ ನಿಜವಾಗಿ ಮನೆ ಎನಿಸುತ್ತದೆ. ತುಲಸಿ ಇಲ್ಲದ ಮನೆಯು ಸ್ಮಶಾನಸಮವೇ ಆಗಿದೆ.

**ಕಿಂತು ಸರ್ವಾಣ್ಯಭೀಪ್ಸಾನಿ ಪ್ರಾಪ್ನುವಂತಿ ನ ಸಂಶಯಃ ।**
**ಯೇ ತ್ವಾ ದೃಷ್ಟ್ವಾsವಜಾನಂತಿ ಮದಾಲಸ್ಯಾದಿಮೋಹಿತಾಃ ॥**

**ಅಕೃತ್ವಾ ನಮನಾದೀನಿ ತೇ ಸ್ಯುಃ ನಿರಯಗಾಮಿನಃ ।**
**ಜನ್ಮಜನ್ಮನಿ ಗೋವಿಂದಮಜ್ಞಾತ್ವಾ ಸಂಸರಂತಿ ಚ ॥**

ಅವರು ಎಲ್ಲರೀತಿಯಾದ ಅಭೀಷ್ಟಗಳನ್ನು ಪಡೆಯುತ್ತಾರೆ. ಯಾರು ತುಲಸಿಯನ್ನು ನೋಡಿ ಮದ-ಆಲಸ್ಯ ಮೊದಲಾದ ಕಾರಣಗಳಿಂದ ಪ್ರದಕ್ಷಿಣೆ-ನಮಸ್ಕಾರಗಳನ್ನು ಮಾಡದೇ ಅವಳನ್ನು ಉಪೇಕ್ಷಿಸುತ್ತಾರೋ ಅವರು ನಿರಯಗಾಮಿ-ಗಳಾಗುತ್ತಾರೆ. ಶ್ರೀಹರಿಯ ತತ್ತ್ವಜ್ಞಾನವನ್ನು ಪಡೆಯದೇ ಸಂಸಾರದಲ್ಲಿ ತೊಳಲುತ್ತಾರೆ. ಆದ್ದರಿಂದ ಕಂಡಾಗಲೆಲ್ಲ ತುಲಸಿಗೆ ಯಥಾಯೋಗ್ಯವಾದ ಉಪಚಾರವನ್ನು ಮಾಡುತ್ತಿರಬೇಕು.

**ಪಕ್ಷೇ ಪಕ್ಷೇ ತು ಸಂಪ್ರಾಪ್ತೇ ದ್ವಾದಶ್ಯಾಂ ಮುನಿಪುಂಗವ ।**
**ಬ್ರಹ್ಮಾದಯೋsಪಿ ಕುರ್ವಂತಿ ತುಲಸೀಪೂಜನಂ ಕ್ಷಿತೌ ॥**

ಶುಕ್ಲವಾಗಲಿ ಕೃಷ್ಣವಾಗಲಿ ದ್ವಾದಶಿ ಬಂತೆಂದರೆ ಸಾಕು. ಬ್ರಹ್ಮಾದಿದೇವತೆಗಳು ಭೂಮಿಗೆ ಬರುತ್ತಾರೆ. ತುಲಸಿಯ ಪೂಜೆಯನ್ನು ಮಾಡುತ್ತಾರೆ. ತುಲಸಿಯಲ್ಲಿ ಸನ್ನಿಹಿತನಾದ ಪರಮಾತ್ಮನನ್ನು, ರಮಾದೇವಿಯನ್ನು ಅರ್ಚಿಸುತ್ತಾರೆ. ಹೀಗೆ

ಅರ್ಚಿಸುವ ಮೂಲಕ ದೇವರ ಆಜ್ಞೆಯನ್ನು ಪಾಲಿಸುತ್ತಾರೆ. ತುಲಸಿಯ ಪೂಜೆಯನ್ನು ಮಾಡಬೇಕೆಂದು ಜನರಿಗೆ ಶಿಕ್ಷಣೆಯನ್ನು ನೀಡುತ್ತಾರೆ. ಆದ್ದರಿಂದ ದ್ವಾದಶಿಯು ತುಲಸೀಪೂಜೆಗೆ ಬಹಳ ವಿಶಿಷ್ಟವಾದ ದಿವಸವೆಂದು ತಿಳಿದು ಬರುತ್ತದೆ.

**ಚೈತ್ರಾದಿಮಾಸಗಳಲ್ಲಿ ತುಲಸಿಯ ವಿಶೇಷಪೂಜೆ**

**ಚೈತ್ರೇ ವಿಷುವಕಾಲೇ ಚ ರಾಕಾಯಾಮಪಿ ಯತ್ನತಃ ।**
**ಪಾಯಸಾನ್ನಪ್ರದಾನೇನ ಪರಾಂ ಸಿದ್ಧಿಮವಾಪ್ನುಯಾತ್ ॥**

ಚೈತ್ರಮಾಸದ ವಿಷುವಕಾಲ, ಚೈತ್ರದ ಹುಣ್ಣಿಮೆ ತುಲಸಿಯ ಪೂಜೆಗೆ ಅತಿಪ್ರಶಸ್ತವಾದ ಕಾಲ. ಷೋಡಶೋಪಚಾರಗಳಿಂದ ತುಲಸಿಯನ್ನು ಪೂಜಿಸಬೇಕು. ಆ ದಿನಗಳಲ್ಲಿ ಪ್ರಯತ್ನಪೂರ್ವಕವಾಗಿ ಪಾಯಸಾನ್ನವನ್ನು ಮಾಡಬೇಕು. ದೇವರಿಗೆ ನೈವೇದ್ಯಮಾಡಿ ಅದನ್ನು ತುಲಸಿಗೆ ಸಮರ್ಪಿಸಬೇಕು. ಹೀಗೆ ಚೈತ್ರದಲ್ಲಿ ಪೂಜಿಸುವುದರಿಂದ ಉತ್ತಮವಾದ ಸಿದ್ಧಿಯನ್ನು ಪೂಜಕರು ಪಡೆಯುತ್ತಾರೆ.

ಪ್ರತಿಮಾಸದ ಪೂಜೆಯನ್ನು ಮಾಡುವಾಗ ಷೋಡಶೋಪಚಾರಗಳಿಂದ ತುಲಸಿಯನ್ನು ಭಕ್ತಿಯಿಂದ ಪೂಜಿಸಬೇಕು. ಆಯಾ ಉಪಚಾರಗಳನ್ನು ಮಾಡುವಾಗ ಆಯಾ ಶ್ಲೋಕಗಳನ್ನು ಹೇಳಿಕೊಳ್ಳಬೇಕು.

ರಾತ್ರಿ ಮತ್ತು ಹಗಲು ಸಮಾನವಾಗಿರುವ ಕಾಲವನ್ನು ವಿಷುವ ಎಂದು ಕರೆಯುತ್ತಾರೆ. ಮೇಷ ಮತ್ತು ತುಲಾ ಸಂಕ್ರಮಣದಲ್ಲಿ ರಾತ್ರಿ ಮತ್ತು ಹಗಲು ಸಮಾನವಾಗಿರುತ್ತವೆ. ಆದ್ದರಿಂದ ಈ ಮೇಷ ತುಲಾ ಸಂಕ್ರಮಣವನ್ನು ವಿಷುವ ಎಂದು ಕರೆಯುತ್ತಾರೆ.

**ವೈಶಾಖಮಾಸದ ಪೂಜೆ**

**ಶುಕ್ಲಾ ತೃತೀಯಾ ವೈಶಾಖೀ ಅಕ್ಷಯಾ ಪರಿಕೀರ್ತಿತಾ ।**
**ತಸ್ಯಾಂ ವಾ ಪೌರ್ಣಮಾಸ್ಯಾಂ ವಾ ದಧ್ಯನ್ನಸ್ಯ ನಿವೇದನಾತ್ ।**
**ವಾಮನಂ ಲೋಕಮಾಸಾದ್ಯ ತತ್ರೈವ ಪರಿಮುಚ್ಯತೇ ॥**

ವೈಶಾಖಮಾಸ ಶುಕ್ಲಪಕ್ಷದ ತೃತೀಯಾ ಅಕ್ಷಯಾನಾಮಕವಾಗಿದೆ. ಆದ್ದರಿಂದ ಅದನ್ನು ಅಕ್ಷಯತೃತೀಯಾ ಎಂದು ವ್ಯವಹರಿಸುತ್ತಾರೆ. ಅಂತಹ ಅಕ್ಷಯತೃತೀಯಾ ದಿನದಲ್ಲಿ ಅಥವಾ ವೈಶಾಖದ ಹುಣ್ಣಿಮೆಯ ದಿನದಲ್ಲಿ ಮೊಸರನ್ನವನ್ನು ಮಾಡಿ ದೇವರಿಗೆ ನಿವೇದಿಸಬೇಕು. ನಂತರ ಯಥಾರೀತಿಯಾಗಿ ತುಲಸಿಯ ಪೂಜೆಯನ್ನು ಮಾಡಿ ತುಲಸಿಗೆ ಆ ಮೊಸರನ್ನವನ್ನು ನಿವೇದಿಸಬೇಕು. ಹೀಗೆ ತುಲಸಿಯನ್ನು

ಅರ್ಚಿಸಿದವರು ವಾಮನಲೋಕವನ್ನು ಹೊಂದುತ್ತಾರೆ. ಮತ್ತು ಅಲ್ಲಿಯೇ ಮುಕ್ತರಾಗಿ ಇರುತ್ತಾರೆ.

**ಚಂದ್ರಾತಪಂ ವಾ ಛತ್ರಂ ವಾ ತುಲಸ್ಯೈ ಯಸ್ತು ಯಚ್ಛತಿ ।**
**ವಿಶೇಷತೋ ನಿದಾಘೇಷು ಸ ಮುಕ್ತಃ ಸರ್ವಪಾತಕೈಃ ॥**

ಯಾವಾಗಲೂ ತುಲಸಿಗೆ ಮೇಲ್ಹಾವಣಿಯನ್ನು ಹಾಕಬೇಕು. ಇಲ್ಲದಿದ್ದರೆ ಛತ್ರವನ್ನು ಹಾಕಬೇಕು. ವಿಶೇಷವಾಗಿ ಬೇಸಿಗೆಯಲ್ಲಿ ಅತಿಯಾದ ಬಿಸಿಲು ಬಡಿಯದೇ ಇರುವ ಹಾಗೆ ಈ ವಿಧಾನವನ್ನು ಅನುಸರಿಸಬೇಕು. ಹೀಗೆ ಮಾಡುವುದು ಕೂಡಾ ತುಲಸಿಯ ಸೇವೆಯಾಗುತ್ತದೆ. ಈ ರೀತಿಯಾಗಿ ಸೇವಿಸಿದವನು ಸಕಲಪಾಪಗಳಿಂದ ಮುಕ್ತನಾಗುತ್ತಾನೆ.

**ವೈಶಾಖೇಽಕ್ಷತಧಾರಾಭಿಃ ಅದ್ಭಿರ್ಯಸ್ತುಲಸೀಂ ಜನಃ ।**
**ಸೇಚಯೇತ್ ಸೋಽಶ್ವಮೇಧಸ್ಯ ಫಲಂ ಪ್ರಾಪ್ನೋತಿ ನಿತ್ಯಶಃ ॥**

ವೈಶಾಖಮಾಸದಲ್ಲಿ ವಿಶೇಷವಾಗಿ ತುಲಸಿಯನ್ನು ಜಲಧಾರೆಯಿಂದ ಸೇಚನಮಾಡಬೇಕು. ಅವರಿಗೆ ನಿತ್ಯವೂ ಅಶ್ವಮೇಧದ ಫಲವು ಪ್ರಾಪ್ತವಾಗುತ್ತದೆ.

**ಜ್ಯೇಷ್ಠಮಾಸದಲ್ಲಿ ತುಲಸೀಪೂಜೆ**

**ಜ್ಯೇಷ್ಠೇ ಮಾಸಿ ಚ ದೇವೇಶೀಂ ದಶಮ್ಯಾದಿದಿನತ್ರಯೇ ।**
**ತೋಷಯಿತ್ವಾ ಯವಾನ್ನೇನ ವಿಷ್ಣೋರ್ವಲ್ಲಭತಾಮಿಯಾತ್ ॥**

ಕ್ರೀಡಾದಿಗುಣಸಂಪನ್ನನಾಗಿದ್ದಾನೆ ಪರಮಾತ್ಮ. ಸರ್ವಸ್ವಾಮಿ, ಮಮ ಸ್ವಾಮಿಯಾಗಿದ್ದಾನೆ. ಹೀಗೆ ತಿಳಿದವಳು ತುಲಸಿ. ಆ ದೇವೇಶನಿಗೆ ತನ್ನ ಸರ್ವಸ್ವವನ್ನೂ ಸಮರ್ಪಿಸಿದವಳು ಶ್ರೀತುಲಸೀ. ಆದ್ದರಿಂದ ಅವಳು ದೇವೇಶಿ. ತುಲಸೀವೃಕ್ಷದ ಪ್ರತಿ ಅವಯವವು ಕೂಡಾ ದೇವರ ಪೂಜೆಗೆ ಉಪಯುಕ್ತವಾಗಿದೆ. ಆದ್ದರಿಂದ ಅವಳು ದೇವೇಶಿಯಾಗಿದ್ದಾಳೆ. ಆದ್ದರಿಂದಲೇ ದೇವತೆಗಳಿಂದಲೂ ಪೂಜ್ಯಳಾಗಿದ್ದಾಳೆ. ಇಂತಹ ತುಲಸಿಯನ್ನು ಜ್ಯೇಷ್ಠಮಾಸದ ದಿನತ್ರಯಗಳಲ್ಲಿ ಅರ್ಥಾತ್ ದಶಮೀ ಏಕಾದಶೀ ದ್ವಾದಶೀಗಳಲ್ಲಿ ವಿಶೇಷವಾಗಿ ಪೂಜಿಸಬೇಕು. ಆ ಮೂರುದಿನಗಳಲ್ಲಿ ಯವಾನ್ನವನ್ನು ಅಂದರೆ ಜವೆಗೋಧಿಯಿಂದ ಅನ್ನವನ್ನು ಮಾಡಿ ಅದನ್ನು ದೇವರಿಗೆ ನಿವೇದಿಸಿ ತುಲಸಿಗೆ ನಿವೇದಿಸಬೇಕು. ಹೀಗೆ ತುಲಸಿಯನ್ನು ಉಪಚರಿಸುವುದರಿಂದ ತುಲಸಿಯು ಸಂತುಷ್ಟಳಾಗುತ್ತಾಳೆ. ಸಂತುಷ್ಟಳಾದ ತುಲಸಿಯ ವರದಿಂದ ಪೂಜಕರು ವಿಷ್ಣುವಿಗೆ ಪ್ರಿಯರಾಗುತ್ತಾರೆ.

ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು. ಏಕಾದಶಿಯಲ್ಲಿ ಹಣ್ಣು-ಕಾಯಿಗಳನ್ನು ಬಿಟ್ಟು ಬೇಯಿಸಿದ ಯಾವ ಪದಾರ್ಥಗಳನ್ನೂ ದೇವರಿಗೆ ನಿವೇದಿಸಕೂಡದು. ಇತರ ದೇವತೆಗಳಿಗಂತೂ ನೀರನ್ನೂ ನಿವೇದಿಸಬಾರದು. ಏಕಾದಶಿಯ ದಿವಸ ತುಲಸಿಗೆ ನೀರನ್ನು ಕೂಡಾ ಹಾಕಬಾರದು. ಯವಾನ್ನವನ್ನು ಮಾಡಿ ತುಲಸಿಗೆ ನಿವೇದಿಸುವುದಂತೂ ಸರ್ವಥಾ ನಿಷಿದ್ಧವಾಗಿದೆ. ಆದ್ದರಿಂದ ದಶಮೀ-ದ್ವಾದಶೀ ದಿನಗಳಲ್ಲಿ ಮಾತ್ರ ಯವಾನ್ನವನ್ನು ನಿವೇದಿಸಬೇಕು. ಏಕಾದಶಿಯಲ್ಲಿ ನೈವೇದ್ಯದ ಹೊರತಾಗಿ ಉಳಿದ ಆವಾಹನಾದ್ಯುಪಚಾರಗಳನ್ನು ಮಾತ್ರ ಸಮರ್ಪಿಸಬೇಕು.

ವೃಕ್ಷಗಳಲ್ಲಿಯೂ ಚೇತನರಿರುತ್ತಾರೆ. ಅವುಗಳಿಗೆ ಅಭಿಮಾನಿಯಾದ ದೇವತೆಯಂತೂ ಉತ್ತಮಳಾದವಳು. ಹೀಗಾಗಿ ತುಲಸಿಗೆ ನೀರೆರೆಯುವಾಗ ಪೂಜಾಭಾವನೆ ಇರಬೇಕು. ಯಾವುದೋ ನೀರನ್ನು ಹಾಕಿದರೆ ಆಯಿತು ಎಂದು ಭಾವಿಸಬಾರದು. ಪೂಜೆಯ ಜಲದಂತೆ ತುಲಸಿಗೆ ಹಾಕುವ ಜಲವೂ ಪರಿಶುದ್ಧವಾಗಿರಬೇಕು. ಆ ಜಲ ಅಶುದ್ಧವಾಗಿರಕೂಡದು. ಈ ವಿಷಯವನ್ನು ತಿಳಿಸುವ ವಚನವಿದು-

**ಗ್ರೀಷ್ಮಕಾಲೇ ದ್ವಿಜಶ್ರೇಷ್ಠ ಸುಗಂಧೈಃ ಶೀತಲೈಃ ಜಲೈಃ ।**
**ತುಲಸೀಸೇಚನಂ ಕೃತ್ವಾ ನರೋ ನಿರ್ವಾಣಮಾಪ್ನುಯಾತ್ ॥**

ಗ್ರೀಷ್ಮಕಾಲದಲ್ಲಿ ಸುಗಂಧವಾದ ತಂಪಾದ ನೀರಿನಿಂದ ತುಲಸೀಸೇಚನವನ್ನು ಮಾಡುತ್ತಿರಬೇಕು. ಹಾಗಂದ ಮಾತ್ರಕ್ಕೆ ಉಳಿದ ಸಮಯದಲ್ಲಿ ಬಿಸಿಯಾದ, ಅಶುದ್ಧವಾದ ನೀರನ್ನು ಹಾಕಬೇಕೆಂದು ಅಭಿಪ್ರಾಯವಲ್ಲ. ಯಾವಾಗಲೂ ಪರಿಶುದ್ಧವಾದ ಜಲವನ್ನೇ ತುಲಸಿಗೆ ಹಾಕಬೇಕು. ವಿಶೇಷವಾಗಿ ಬೇಸಿಗೆಯಲ್ಲಿ ತಂಪಾದ ಸುಗಂಧವಾದ ಜಲದಿಂದ ತುಲಸಿಯನ್ನು ಉಪಚರಿಸಬೇಕು. ಹೀಗೆ ಮಾಡುವವರು ಪಾಪಗಳಿಂದ ಮುಕ್ತರಾಗುತ್ತಾರೆ.

**ಆಷಾಢದಲ್ಲಿಯ ಪೂಜೆ**

**ಆಷಾಢಮಾಸಿ ಶುಕ್ಲಾಯಾಮೇಕಾದಶ್ಯಾಂ ವ್ರತೀ ನರಃ ।**
**ಸಹಸ್ರದಲಸಂಯುಕ್ತಂ ತುಲಸೀದಾನಪೂಜನಾತ್ ॥**

**ಬಿಲ್ವಪತ್ರಾರ್ಚನಾದ್ವಾಪಿ ಕೇಶವಸ್ಯ ಪ್ರಸಾದತಃ ।**
**ದಾರಿದ್ರ್ಯನಾಶನಂ ಧರ್ಮ್ಯಂ ಯಶೋ ವಿದ್ಯಾಮವಾಪ್ನುಯಾತ್ ॥**

ಆಷಾಢಶುಕ್ಲ ಏಕಾದಶೀ ಅತಿವಿಶಿಷ್ಟವಾದ ದಿನ. ಚಾತುರ್ಮಾಸ್ಯವ್ರತ ಪ್ರಾರಂಭವಾಗುವ ದಿನ ಅದು. ವಿಶಿಷ್ಟವಾದ ವ್ರತಗಳನ್ನು ಮಾಡಲು ಯೋಗ್ಯವಾದ ದಿನ. ಅವತ್ತಿನ ದಿನದಲ್ಲಿ ತುಲಸಿಯ ಸಾವಿರ ದಲಗಳಿಂದ ದೇವರನ್ನು ಅರ್ಚಿಸಬೇಕು. ಯತಿಗಳು ಮುಂತಾದವರಿಗೆ ತುಲಸಿಯ ದಲಗಲನ್ನು ದಾನಮಾಡಬೇಕು. ತುಲಸಿಯಿಂದ ಪೂಜಿಸಲು ಸಾಧ್ಯವಾಗದಿದ್ದಲ್ಲಿ ಬಿಲ್ವಪತ್ರಗಳಿಂದಲಾದರೂ ದೇವರನ್ನು ಅರ್ಚಿಸಬೇಕು. ಹೀಗೆ ಮಾಡುವುದರಿಂದ ಪರಮಾತ್ಮನ ಅನುಗ್ರಹವಾಗುತ್ತದೆ. ದಾರಿದ್ರ್ಯವೆಲ್ಲ ದೂರವಾಗುತ್ತದೆ. ಧರ್ಮವು ಸಮೃದ್ಧವಾಗುತ್ತದೆ. ಕೀರ್ತಿ ಹರಡುತ್ತದೆ. ಸ್ವಯಂ ವಿದ್ಯಾವಂತನಾಗುತ್ತಾನೆ.

**ಶ್ರಾವಣ ಮಾಸದ ಪೂಜೆ**

**ಜಯಂತ್ಯಾಮರ್ಧರಾತ್ರೇ ತು ತುಲಸೀಪೂಜಯಾಽನಘ ।**
**ವಂಧ್ಯಾಪಿ ಲಭತೇ ಪುತ್ರಂ ಕೇಶವಸ್ಯ ಪ್ರಸಾದತಃ ॥**

ಶ್ರೀಕೃಷ್ಣಜಯಂತಿಯ ದಿನ ಅರ್ಧರಾತ್ರಿಯಲ್ಲಿ ತುಲಸಿಯ ಪೂಜೆಯನ್ನು ವಿಶಿಷ್ಟವಾದ ರೀತಿಯಲ್ಲಿ ಸ್ತ್ರೀಯರು ಮಾಡಬೇಕು. ಬ್ರಹ್ಮ-ರುದ್ರನಿಯಾಮಕನಾದ ಪರಮಾತ್ಮನ ಅನುಗ್ರಹದಿಂದ ಮಕ್ಕಳಿಲ್ಲದ ಮಹಿಳೆಯರೂ ಈ ಪೂಜೆಯಿಂದ ಮಕ್ಕಳನ್ನು ಪಡೆಯುತ್ತಾರೆ.

(ಒಂದು ವಿಷಯವನ್ನು ಗಮನದಲ್ಲಿಟ್ಟುಕೊಳ್ಳಬೇಕು. ತುಲಸಿಯ ಪೂಜೆಯನ್ನು ಎಲ್ಲರೂ ಮಾಡಬಹುದು. ಮಹಿಳೆಯರಿಗೆ ವಿಶೇಷದಿನಗಳಲ್ಲಿ ಪೂಜೆ ಮಾಡಲು ಸಾಧ್ಯವಿಲ್ಲದಿರುವಾಗ ಪುರುಷರು ಈ ಪೂಜೆಯನ್ನು ಮಾಡಬಹುದು. ಮತ್ತು ಅವಿವಾಹಿತರಾದ ಸ್ತ್ರೀಯರಾಗಲೀ, ಬ್ರಹ್ಮಚಾರಿಗಳಾಗಲೀ ಎಲ್ಲರೂ ತುಲಸಿಯ ಪೂಜೆಯನ್ನು ಮಾಡಬಹುದು. ಆದರೆ ತುಲಸಿಯಿಂದ ದೇವರನ್ನು ಅರ್ಚಿಸುವುದನ್ನು ಪುರುಷರು ಮಾತ್ರ ಮಾಡಬೇಕು.

**ಭಾದ್ರಪದಮಾಸದಲ್ಲಿ ಪೂಜೆ**

**ಶುಭವಾರೇ ತಿಥೌ ಹೃತ್ವಾ ಸಹಸ್ರಂ ತುಲಸೀದಲಮ್ ।**
**ಭಾದ್ರೇ ಶುಕ್ಲಚತುರ್ದಶ್ಯಾಂ ಅರ್ಚಯೇತ್ಪುರುಷೋತ್ತಮಮ್ ॥**

ಭಾದ್ರಪದ ಮಾಸದ ಶುಭದಿನ-ಶುಭತಿಥಿಯಲ್ಲಿ ಸಾವಿರ ತುಲಸೀದಲಗಳಿಂದ ಪುರುಷೋತ್ತಮನಾದ ಪರಮಾತ್ಮನನ್ನು ಅರ್ಚಿಸಬೇಕು. ಮತ್ತು ಭಾದ್ರಪದದ ಶುಕ್ಲ ಚತುರ್ದಶಿಯ ದಿನದಲ್ಲಿಯೂ ದೇವರನ್ನು ಸಹಸ್ರತುಲಸೀದಲಗಳಿಂದ ಅರ್ಚಿಸಬೇಕು.

**ಅನಂತಾಯ ನಮ ಇತ್ಯುಕ್ತ್ವಾ ಬಿಲ್ವೈರ್ದೂರ್ವಾಸಹಸ್ರಕೈಃ ।**
**ಅಣಿಮಾದಿಗುಣಾನ್ ಪ್ರಾಪ್ಯ ನಾಕಷ್ಠಂ ಸ್ಥಾನಮಾಪ್ನುಯಾತ್ ॥**

''ಅನಂತಾಯ ನಮಃ'' ಎಂದು ಉಚ್ಚರಿಸುತ್ತಾ ದೇಶತಃ ಕಾಲತಃ ಗುಣತಃ ಅಂತವಿಲ್ಲದವನೆಂದು ಚಿಂತಿಸುತ್ತಾ ತುಲಸೀದಲಗಳಿಂದ ದೇವರನ್ನು ಅರ್ಚಿಸಬೇಕು. ತುಲಸೀದಲಗಳಿಂದ ಸಾಧ್ಯವಾಗದಿದ್ದಲ್ಲಿ ಬಿಲ್ವಪತ್ರಗಳಿಂದ, ದೂರ್ವಾಗಳಿಂದ ದೇವರನ್ನು ಅರ್ಚಿಸಬೇಕು. ಭಕ್ತಿಯಿಂದ ಈ ರೀತಿಯಾದ ಅರ್ಚನೆಯನ್ನು ಮಾಡಿದ ಅಧಿಕಾರಿಯು ಅಣಿಮಾದಿಗುಣಗಳಿಂದ ಸಂಪನ್ನನಾಗುತ್ತಾನೆ. ಉತ್ತಮವಾದ ಲೋಕಗಳನ್ನು ಪಡೆದು ಸುಖಿಸುತ್ತಾನೆ.

**ತಥಾ ಭಾದ್ರಪದೇ ಮಾಸಿ ಗಜಚ್ಛಾಯಾಸಮಾಹ್ವಯೇ ।**
**ತುಲಸೀದಲಮಿಶ್ರೇಣ ನೈವೇದ್ಯೇನೈವ ಚಕ್ರಿಣಃ ॥**

**ಭೋಜಯೇತ್ಸ್ವಪಿತ್ನ್ ನ್ ಭಕ್ತ್ಯಾ ವಿಧಿನಾ ಪಾರ್ವಣೇನ ಚ ।**
**ಸಹಸ್ರವಾರ್ಷಿಕೀಂ ತೃಪ್ತಿಂ ಪಿತರೋ ಯಾಂತಿ ನಾನ್ಯಥಾ ॥**

ಭಾದ್ರಪದ ಮಾಸದಲ್ಲಿ ಗಜಚ್ಛಾಯಾಯೋಗ ಇರುವಾಗ ಶ್ರಾದ್ಧವನ್ನು ಮಾಡಬೇಕು. ಆ ಪ್ರಸಂಗದಲ್ಲಿ ತುಲಸೀದಲಮಿಶ್ರಿತವಾದ ನೈವೇದ್ಯವನ್ನು ದೇವರಿಗೆ ಸಮರ್ಪಿಸಿ ಪಾರ್ವಣವಿಧಾನದಿಂದ ಪಿತೃಗಳ ಶ್ರಾದ್ಧವನ್ನು ಮಾಡಬೇಕು. ತುಲಸೀದಲಮಿಶ್ರಿತವಾದ ಅನ್ನದಿಂದ ಬ್ರಾಹ್ಮಣಭೋಜನ ಮಾಡಿಸಬೇಕು. ಈ ರೀತಿಯಾದ ಕಾರ್ಯದಿಂದ ಸಾವಿರವರ್ಷಗಳಲ್ಲಿ ಪಡೆಯಬಹುದಾದ ತೃಪ್ತಿಯು ಪಿತೃಗಳಿಗೆ ಆಗುತ್ತದೆ.

**ತನ್ಮಾಸಪೂರ್ಣಿಮಾಯಾಂ ವಾ ಭೂತೇ ವಾ ಹರಿವಾಸರೇ ।**
**ನಿವೇದ್ಯ ದೇವ್ಯೈ ಮಾಷಾನ್ನಂ ಯಮಲೋಕಂ ನ ಪಶ್ಯತಿ ॥**

ಭಾದ್ರಪದ ಹುಣ್ಣಿಮೆಯ ದಿನ ಅಥವಾ ಚತುರ್ದಶಿಯ ದಿನ ಅಥವಾ ಏಕಾದಶಿ ಅಂದರೆ ದ್ವಾದಶಿಯಂದು ತುಲಸಿಗೆ ಮಾಷಾನ್ನವನ್ನು (ಉದ್ದಿನಿಂದ ಸಿದ್ಧಪಡಿಸಿದ ಪದಾರ್ಥವಿಶೇಷ) ನಿವೇದಿಸಿ ಪೂಜಿಸುವುದರಿಂದ ಯಮಲೋಕದ ದರ್ಶನವಾಗುವುದಿಲ್ಲ. ನರಕವಾಗುವುದಿಲ್ಲವೆಂದು ತಾತ್ಪರ್ಯ.

**ಆಶ್ವಿನ ಮಾಸದ ಪೂಜೆ**

ಮಕ್ಕಳಿಲ್ಲದವರಿಗೆ ಮಕ್ಕಳನ್ನು ಕೊಡುವಲ್ಲಿ ತುಲಸಿಯದು ಎತ್ತಿದ ಕೈ. ಈಗಾಗಲೇ ಈ ವಿಷಯದಲ್ಲಿ ಸಾಕಷ್ಟು ವಚನಗಳನ್ನು ಗಮನಿಸಿದ್ದೇವೆ. ಮಕ್ಕಳಿಗಾಗಿ ಮತ್ತೊಂದು ರೀತಿಯಾದ ತುಲಸಿಯ ಪೂಜೆಯನ್ನು ಈ ಸ್ಮೃತಿ ವಿಧಾನ ಮಾಡುತ್ತದೆ-

**ಮಹಾನವಮ್ಯಾಂ ಸಂಪೂಜ್ಯ ತುಲಸೀಂ ಘೃತಪಾಯಸೈಃ ।**
**ಪುರಂಧ್ರೀಃ ಭೋಜಯೇದಷ್ಟೌ ವಂಧ್ಯಾ ಪುತ್ರಮವಾಪ್ನುಯಾತ್ ॥**

ಆಶ್ವೀನ ಮಾಸದ ಶುಕ್ಲ ಪಕ್ಷದ ನವಮೀ ಮಹಾನವಮೀ. ಅವತ್ತಿನ ದಿನ ವಿಶೇಷವಾಗಿ ತುಲಸಿಯನ್ನು ಪೂಜಿಸಬೇಕು. ದೇವರಿಗೆ ನಿವೇದಿಸಿದ ತುಪ್ಪವನ್ನು ಮತ್ತು ಪಾಯಸವನ್ನು ತುಲಸಿಗೆ ನಿವೇದಿಸಬೇಕು. ಎಂಟು ಜನ ಸುವಾಸಿನೀ ಸ್ತ್ರೀಯರಿಗೆ ಯಥಾಶಕ್ತಿ ಭೋಜನ ಮಾಡಿಸಬೇಕು. ಇದು ತುಲಸಿಯ ಪೂಜೆ. ಈ ವಿಧವಾದ ಪೂಜೆಯಿಂದ ಮಕ್ಕಳಿಲ್ಲದವರಿಗೂ ಮಕ್ಕಳಾಗುತ್ತಾರೆ.

**ಕಾರ್ತಿಕ ಮಾಸದ ಪೂಜೆ**

ಕಾರ್ತಿಕಮಾಸದಲ್ಲಿ ತುಲಸಿಯನ್ನು ವಿಶೇಷವಾಗಿ ಪೂಜಿಸಬೇಕು. ನಾನಾವಿಧವಾದ ಪೂಜೆಗಳನ್ನು ಈ ಮಾಸದಲ್ಲಿ ವಿಧಾನ ಮಾಡಿದ್ದಾರೆ. ತುಲಸೀವಿವಾಹವನ್ನು ಕೂಡಾ ಇದೇ ಮಾಸದಲ್ಲಿ ನೆರವೇರಿಸಬೇಕು. ಪ್ರಕೃತ ಕಾರ್ತಿಕಮಾಸದಲ್ಲಿ ಮಾಡಬೇಕಾದ ವಿಶೇಷವಾದ ತುಲಸಿಯ ಪೂಜೆಯನ್ನು ಈ ವಚನಗಳು ತಿಳಿಸುತ್ತವೆ-

**ದ್ವಾದಶ್ಯಾಂ ಕಾರ್ತಿಕೇ ಮಾಸಿ ಸಹಸ್ರೈಃ ತುಲಸೀದಲೈಃ ।**
**ಬಿಲ್ವಪತ್ರಸಹಸ್ರೈರ್ವಾ ಹರೇಃ ಪೂಜಾ ವಿಮುಕ್ತಿದಾ ॥**

ಕಾರ್ತಿಕಮಾಸ ದ್ವಾದಶಿಯಲ್ಲಿ ಅರ್ಥಾತ್ ಉತ್ಥಾನ ದ್ವಾದಶಿದಿವಸದಲ್ಲಿ ಸಾವಿರ ತುಲಸೀದಲಗಳಿಂದ ದೇವರನ್ನು ಭಕ್ತಿಯಿಂದ ಅರ್ಚಿಸಬೇಕು. ತುಲಸಿಯ ಅಭಾವವಿದ್ದರೆ ಬಿಲ್ವಪತ್ರಗಳಿಂದಲಾದರೂ ಹರಿಯನ್ನು ಅರ್ಚಿಸಬೇಕು. ಇದರಿಂದ ಮನುಷ್ಯ ತಾನು ಮಾಡಿದ ಪಾಪಗಳಿಂದ ಮುಕ್ತನಾಗುತ್ತಾನೆ. ಪಾಪವಿಲ್ಲದ ಮನಸ್ಸಿನಲ್ಲಿ ಭಕ್ತಿಯು ಭದ್ರವಾಗುತ್ತದೆ. ಕ್ರಮವಾಗಿ ಸಂಸಾರದಿಂದ ಮುಕ್ತನಾಗುತ್ತಾನೆ.

**ವಿಷ್ಣೋರುತ್ಥಾನದಿವಸೇ ಜಾಗರಿತ್ವಾ ನಿಶಾಂ ವ್ರತೀ ।**
**ಘೃತಮುದ್ಗಗುಡಕ್ಷೀರಮಿಶ್ರಾನ್ನೈಃ ............. ॥**

**ಯಥಾಕ್ರಮಂ ಪೂಜಯಿತ್ವಾ ಕುಲಕೋಟಿಸಮನ್ವಿತಃ ।**
**ಚರಿತ್ವಾ ಸರ್ವಲೋಕೇಷು ವಿಷ್ಣುಸಾಯುಜ್ಯಮಾಪ್ನುಯಾತ್ ॥**

ಕಾರ್ತಿಕಶುಕ್ಲಪಕ್ಷದ ದ್ವಾದಶಿ ದೇವರ ಉತ್ಥಾನದ ದಿನ. ಚಾತುರ್ಮಾಸ್ಯದ ಮುಕ್ತಾಯದ ದಿನ. ಹಿಂದಿನ ದಿನವಾದ ಏಕಾದಶಿಯಲ್ಲಿ ವಿಶೇಷವಾಗಿ ಜಾಗರಣೆಯನ್ನು ಮಾಡಬೇಕು. ತುಪ್ಪ, ಹೆಸರು, ಬೆಲ್ಲ, ಹಾಲು ಇವುಗಳಿಂದ ಯುಕ್ತವಾದ ಅನ್ನವನ್ನು ದೇವರಿಗೆ ದ್ವಾದಶಿಯಂದು ನಿವೇದಿಸಬೇಕು. ನಂತರ

ತುಲಸಿಗೆ ನಿವೇದಿಸಬೇಕು. ಹೀಗೆ ಪೂಜಿಸಿದ ವ್ಯಕ್ತಿಯು ಕುಲಕೋಟಿಸಮನ್ವಿತನಾಗಿ ಎಲ್ಲ ಶುಭಲೋಕಗಳಲ್ಲಿ ಸಂಚರಿಸಿ ತನಗೆ ಯೋಗ್ಯವಾದ ಮುಕ್ತಿಯನ್ನು ಪಡೆಯುತ್ತಾನೆ.

**ಕಾರ್ತಿಕಮಾಸದಲ್ಲಿ ದೀಪದಾನ**

ಪ್ರತಿದಿನವೂ ಪ್ರಾತಃಕಾಲ ಮತ್ತು ಸಾಯಂಕಾಲ ತಪ್ಪದೇ ಪ್ರದಕ್ಷಿಣ-ದೀಪದಾನ-ನೈವೇದ್ಯಾದಿಗಳಿಂದ ತುಲಸಿಯನ್ನು ಪೂಜಿಸುತ್ತಿರಬೇಕು. ಸ್ತ್ರೀಯರು ಮಾತ್ರ ಮಾಡಬೇಕೆಂಬ ನಿಯಮವಿಲ್ಲ. ಪುರುಷರು ಕೂಡಾ ತುಲಸಿಯ ಪೂಜೆಯನ್ನು ಮಾಡಬೇಕು. ಅವಿವಾಹಿತರು ಕೂಡಾ ತುಲಸಿಯನ್ನು ಪೂಜಿಸಬೇಕು. ಪ್ರತಿನಿತ್ಯ ತುಲಸಿಯ ಪೂಜೆ ವಿಹಿತವಾಗಿದ್ದರೂ ಪ್ರತಿಮಾಸದಲ್ಲಿಯೂ ವಿಶೇಷವಾಗಿ ತುಲಸಿಯ ಪೂಜೆಯನ್ನು ಮಾಡಬೇಕು. ಈ ವಿಚಾರಗಳನ್ನು ಬ್ರಹ್ಮಾಂಡಪುರಾಣವು ತಿಳಿಸುತ್ತದೆ. ಪ್ರಕೃತ ಕಾರ್ತಿಕದಲ್ಲಿ ಮಾಡಬೇಕಾದ ಪೂಜಾವಿಶೇಷವನ್ನು ತಿಳಿಸುವ ವಚನವಿದು-

**ದೀಪಮಾರೋಪಯೇತ್ಸಾಯಂ ಕಾರ್ತಿಕೇ ಪ್ರತಿವಾಸರಮ್ ।**
**ನಿವೇದ್ಯ ಪಾಯಸಾನ್ನಂ ಚ ಸಿದ್ಧಿಮಿಷ್ಟಾಮವಾಪ್ನುಯಾತ್ ॥**

ಕಾರ್ತಿಕಮಾಸದಲ್ಲಿ ಪ್ರತಿನಿತ್ಯವೂ ಪ್ರಾತಃಕಾಲ-ಸಾಯಂಕಾಲ ವಿಶೇಷವಾಗಿ ದೀಪಗಳಿಂದ ತುಲಸಿಯನ್ನು ಉಪಚರಿಸಬೇಕು. ಸಾಯಂಕಾಲದಲ್ಲಿ ಮತ್ತಿಷ್ಟು ವಿಶೇಷವಾದ ರೀತಿಯಲ್ಲಿ ದೀಪಾರಾಧನೆಯನ್ನು ಮಾಡಬೇಕು. (ತುಪ್ಪದ ದೀಪ ಶ್ರೇಷ್ಠ. ಸಾಧ್ಯವಾಗದಿದ್ದಲ್ಲಿ ಎಳ್ಳೆಣ್ಣೆಯಿಂದಲಾದರೂ ದೀಪವನ್ನು ಬೆಳಗಿಸಬೇಕು) ಪ್ರತಿನಿತ್ಯ ತಪ್ಪದೇ ಇದನ್ನು ವ್ರತವಾಗಿ ಸ್ವೀಕರಿಸಬೇಕು. ಮತ್ತು ದೇವರಿಗೆ ನಿವೇದಿಸಿದ ಪಾಯಸಾನ್ನವನ್ನು ಪ್ರತಿನಿತ್ಯ ತುಲಸಿಗೆ ನೈವೇದ್ಯ ಮಾಡಬೇಕು. ಹೀಗೆ ಕಾರ್ತಿಕದಲ್ಲಿ ಪ್ರತಿನಿತ್ಯವೂ ದೀಪಾರಾಧನೆ ಮತ್ತು ಪಾಯಸಾನ್ನದ ನೈವೇದ್ಯದಿಂದ ಇಷ್ಟಾರ್ಥಗಳು ಸಿದ್ಧಿಸುತ್ತವೆ.

**ಯಃ ಕಶ್ಚಿತ್ತುಲಸೀಮೂಲೇ ಕಾರ್ತಿಕೇ ಕೇಶವಪ್ರಿಯಃ ।**
**ದೀಪಂ ದದಾತಿ ವಿಪ್ರೇಂದ್ರ ಸ ಲಭೇದ್ವೈಷ್ಣವಂ ಪದಮ್ ॥**

ಭಗವಂತ ಕೇಶವನಾಮಕನಾಗಿದ್ದಾನೆ. **ಕ** ಬ್ರಹ್ಮದೇವರು, **ಈಶ** ರುದ್ರದೇವರು, ಇವರಿಬ್ಬರನ್ನು **ವ** ನಿಯಮಿಸುತ್ತಾನೆ ಆದ್ದರಿಂದ ದೇವರು ಕೇಶವನಾಮಕನಾಗಿದ್ದಾನೆ. ಈ ಚಿಂತನೆಯಿಂದ ಮಾಡಿದ ಕರ್ಮಗಳಿಂದಲೇ ಕೇಶವನ ಪ್ರೀತಿಯನ್ನು ಸಾಧಕನು ಪಡೆಯುತ್ತಾನೆ. ಕೇಶವನಿಗೆ ಪ್ರಿಯನಾಗಿ ತುಲಸಿಯ ಮೂಲದಲ್ಲಿ ದೀಪವನ್ನು

ಬೆಳಗಿಸಬೇಕು. ಅಂತಹ ಸಾಧಕನು ವೈಷ್ಣವಪದವನ್ನು ಅರ್ಥಾತ್ ಮುಕ್ತಿಯನ್ನು ಪಡೆಯುತ್ತಾನೆ. ಯಾವುದೇ ಕರ್ಮಗಳನ್ನು ಮಾಡುವಾಗ ಕೇಶವಪ್ರಿಯನಾಗುವುದು ಅನಿವಾರ್ಯ ಎಂಬುದನ್ನು ಈ ಸ್ಮೃತಿಯು ಸೂಚಿಸುತ್ತದೆ. ಕೇಶವಪ್ರಿಯನಾಗದೇ ವೈಷ್ಣವನಾಗದೇ ಮಾಡಿದ ಸಕಲಕರ್ಮಗಳೂ ವ್ಯರ್ಥ. ಪ್ರಕೃತವೂ ವೈಷ್ಣವನಾಗದೇ ಮಾಡಿದ, ಮಾಡುವ ತುಲಸಿಯ ಪೂಜೆಯೂ ವ್ಯರ್ಥವಾಗುತ್ತದೆಂದು ಈ ಸ್ಮೃತಿಯು ಸುಂದರವಾಗಿ ಸೂಚಿಸುತ್ತದೆ.

ದೀಪಾರಾಧನೆಯ ವಿಶೇಷವನ್ನು ತಿಳಿಸುವ ಮತ್ತೊಂದು ವಚನವಿದು-

**ಕಾರ್ತಿಕ್ಯಾಂ ಪೌರ್ಣಮಾಸ್ಯಾಂ ವಾ ಮಹಾದೀಪಂ ಸಮಾಚರೇತ್ ।**
**ಜ್ಞಾನಂ ಚ ವಿಪುಲಂ ಪ್ರಾಪ್ಯ ವಿಷ್ಣುಸೇವಾಧಿಕೋ ಭವೇತ್ ॥**

ಕಾರ್ತಿಕಮಾಸದಲ್ಲಿ ಪ್ರತಿನಿತ್ಯವೂ ಮಹಾದೀಪದಾನವನ್ನು ಮಾಡಬೇಕು. ಅರ್ಥಾತ್ ಎಷ್ಟು ಸಾಧ್ಯವೋ ಅಷ್ಟು ಹೆಚ್ಚು ದೀಪಗಳನ್ನು ತುಲಸಿಯ ಸನ್ನಿಧಿಯಲ್ಲಿ ಇರಿಸಬೇಕು. ಪ್ರತಿನಿತ್ಯ ಈ ರೀತಿಯಾಗಿ ದೀಪದಾನ ಮಾಡಲು ಸಾಧ್ಯವಾಗದಿದ್ದರೇ ಹುಣ್ಣಿಮೆಯ ದಿನದಲ್ಲಿಯಾದರೂ ಈ ದೀಪೋಪಚಾರವನ್ನು ಮಾಡಬೇಕು. ಇದರಿಂದ ಅಧಿಕವಾಗಿ ವಿಷ್ಣುವಿನ ಸೇವೆ ಮಾಡುವ ಸೌಭಾಗ್ಯವು ದೊರೆಯುತ್ತದೆ.

**ಬಿಂಬಮಪ್ಯರ್ಚಿತಂ ದೃಷ್ಟ್ವಾ ಸಹೋಮಾಸೇ ಚ ಮಾಮಕಮ್ ।**
**ತುಲಸೀಪತ್ರನಿಚಯೈಃ ಮುಚ್ಯತೇ ಬ್ರಹ್ಮಹತ್ಯಯಾ ॥**

ಕಾರ್ತಿಕಮಾಸದಲ್ಲಿ ನನ್ನನ್ನು ವಿಶೇಷವಾಗಿ ತುಲಸೀದಲಗಳ ಸಮೂಹಗಳಿಂದ ಪೂಜಿಸಬೇಕು. ಹೀಗೆ ಮಾಡಲು ಸಾಧ್ಯವಾಗದಿರುವಾಗ ತುಲಸಿಯಿಂದ ಅರ್ಚಿತವಾದ ಪರಮಾತ್ಮನ ಮೂರ್ತಿಯ ದರ್ಶನ ಪಡೆದುಕೊಳ್ಳಬೇಕು. ಭಕ್ತಿ-ಶ್ರದ್ಧೆಗಳಿಂದ ಹೀಗೆ ಮಾಡಿದರೆ ಬ್ರಹ್ಮಹತ್ಯಾದಿ ಪಾಪಗಳೂ ನಾಶವಾಗುತ್ತವೆ.

**ಸಂಪ್ರಾಪ್ತಂ ಕಾರ್ತಿಕಂ ದೃಷ್ಟ್ವಾ ನಿಯಮೇನ ಜನಾರ್ದನಃ ।**
**ಪೂಜನೀಯೋ ಮಹದ್ಭಿಶ್ಚ ಕೋಮಲೈಸ್ತುಲಸೀದಲೈಃ ॥**

ಕಾರ್ತಿಕಮಾಸದಲ್ಲಿ ಪರಮಾತ್ಮನನ್ನು ಕೋಮಲವಾದ ತುಲಸಿಯ ದಲಗಳಿಂದ ಪೂಜಿಸಬೇಕು. ಇದನ್ನು ಆ ಮಾಸದಲ್ಲಿ ನಿಯಮವಾಗಿ ಮಾಡಬೇಕು. ಮಹಾತ್ಮರಾದವರು ಕೂಡಾ ಈ ಪೂಜೆಯನ್ನು ತಪ್ಪಿಸಬಾರದು.

**ತುಲಸೀದಲಪುಷ್ಪಾಣಿ ಯೋ ದದ್ಯಾದ್ಧರಯೇ ಮುನೇ ।**
**ಕಾರ್ತಿಕೇ ಸಕಲಂ ಪಾಪಂ ಸೋಽತ್ರ ಜನ್ಮಾರ್ಜಿತಂ ದಹೇತ್ ॥**

ಕಾರ್ತಿಕಮಾಸದಲ್ಲಿ ವಿಶೇಷವಾಗಿ ತುಲಸೀಪತ್ರಗಳಿಂದ, ತುಲಸೀದಲಗಳಿಂದ ಅಥವಾ ತುಲಸೀಪುಷ್ಪಗಳಿಂದ ಪರಮಾತ್ಮನನ್ನು ಅರ್ಚಿಸಬೇಕು. ಹೀಗೆ ಮಾಡಿದ ಸಾಧಕನು ತಾನು ಈ ಜನ್ಮದಲ್ಲಿ ಸಂಪಾದಿಸಿದ ಪಾಪಗಳನ್ನೆಲ್ಲ ಕಳೆದುಕೊಳ್ಳುತ್ತಾನೆ. ಆ ಎಲ್ಲ ಪಾಪಗಳೂ ಸುಟ್ಟು ಭಸ್ಮವಾಗಿಹೋಗುತ್ತವೆ.

**ಮಾರ್ಗಶೀರ್ಷ ಮಾಸದಲ್ಲಿ ವಿಶೇಷ ಪೂಜೆ**

**ಮಾರ್ಗೇ ತುಲಸ್ಯಾ ಪೂಜಾ ಚ ಪಾಯಸಾನ್ನನಿವೇದನಮ್ ।**
**ಪ್ರತ್ಯಹಂ ಧೇನುಸಾಹಸ್ರದಾನಪುಣ್ಯಫಲಂ ನೃಣಾಮ್ ॥**

ಮಾರ್ಗಶಿರಮಾಸದಲ್ಲಿ ಪ್ರತಿನಿತ್ಯ ತುಲಸಿಯ ಉಪಚಾರವನ್ನು ವಿಶೇಷವಾಗಿ ಮಾಡಬೇಕು. ವಿಷ್ಣುನಿವೇದಿತವಾದ ಪಾಯಸಾನ್ನವನ್ನು ಪ್ರತಿನಿತ್ಯ ತುಲಸೀದೇವಿಗೆ ನೈವೇದ್ಯವಾಗಿ ಸಮರ್ಪಿಸಬೇಕು. ಹೀಗೆ ಮಾಡುವುದರಿಂದ ಪ್ರತಿನಿತ್ಯವೂ ಸಾವಿರ ಗೋದಾನಮಾಡಿದ ಪುಣ್ಯವು ಪ್ರಾಪ್ತವಾಗುತ್ತದೆ.

**ಪೌಷ ಮಾಸದ ಪೂಜೆ**

**ಪುಷ್ಯಮಾಸೇ ವಿಶೇಷೇಣ ಶುಕ್ಲಪಕ್ಷೇ ಭೃಗೋರ್ದಿನೇ ।**
**ಯಃ ಪೂಜಯೇತ್ ಷೋಡಶಭಿಃ ತುಲಸೀಮುಪಚಾರಕೈಃ ।**
**ತಸ್ಯ ಸಾ ವಾಂಛಿತಫಲಂ ಪ್ರಯಚ್ಛತಿ ನ ಸಂಶಯಃ ॥**

ಪುಷ್ಯಮಾಸದಲ್ಲಿಯೂ ತುಲಸಿಯ ಪೂಜೆಯು ವಿಶಿಷ್ಟವಾದ ಫಲವನ್ನು ನೀಡುತ್ತದೆ. ಸಮಗ್ರ ಪುಷ್ಯಮಾಸದಲ್ಲಿ ಸಾಧ್ಯವಾಗದಿದ್ದರೂ ಶುಕ್ಲಪಕ್ಷದ ಶುಕ್ರವಾರದ ದಿವಸ ವಿಶೇಷವಾಗಿ ತುಲಸಿಯನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ಈ ಉಪಚಾರದಿಂದ ಸಂತುಷ್ಟಳಾದ ತುಲಸಿಯು ತನ್ನನ್ನು ಪೂಜಿಸಿದವರಿಗೆ ಅಭೀಷ್ಟವಾದ ಫಲವನ್ನು ನೀಡುತ್ತಾಳೆ. ಈ ವಿಷಯದಲ್ಲಿ ಸರ್ವಥಾ ಸಂದೇಹವಿಲ್ಲ.

**ಮಾಘಮಾಸದಲ್ಲಿ ವಿಶೇಷ**

ಪ್ರತಿನಿತ್ಯವೂ ದೇವರಿಗೆ ಗಂಧವನ್ನು ಸಮರ್ಪಿಸಬೇಕು. ಮಾಘಮಾಸದಲ್ಲಿ ವಿಶೇಷವಾಗಿ ಗಂಧದಿಂದ ದೇವರನ್ನು ಅಲಂಕರಿಸಬೇಕು. ಈ ವಿಷಯವನ್ನು ತಿಳಿಸುವ ವಚನವಿದು-

**ಅಗಂಧಂ ಪೂಜಯೇದ್ಯಸ್ತು ಮಾಘೇ ಮಾಧವಮವ್ಯಯಮ್ ।**
**ನಾರಕೀಂ ಯಾತನಾಂ ಭುಕ್ತ್ವಾ ವಿಡ್ವರಾಹೋ ಭವೇದ್ ಧ್ರುವಮ್ ॥**

**ಶ್ರೀಖಂಡಂ ಚಂದನಂ ವಾಽಪಿ ತುಲಸೀಕಾಷ್ಠಸಂಯುತಮ್ ।**
**ಕರ್ಪೂರಾಗರುಸಂಯುಕ್ತಂ ದತ್ವಾ ಮಾಧವತೋಷಭಾಕ್ ॥**

ಮಾಘಮಾಸದಲ್ಲಿ ಗಂಧವಿಲ್ಲದೇ ದೇವರನ್ನು ಸರ್ವಥಾ ಪೂಜಿಸಬಾರದು. ಹೀಗೆ ಮಾಡಿದರೆ ನರಕದಲ್ಲಿ ಯಾತನೆಯನ್ನು ಅನುಭವಿಸಿ ಗ್ರಾಮಸೂಕರನಾಗಿ ಜನಿಸುತ್ತಾನೆ. ಆದ್ದರಿಂದ ವಿಶೇಷವಾಗಿ ಗಂಧವನ್ನು ದೇವರಿಗೆ ಸಮರ್ಪಿಸಬೇಕು.

ಇದಲ್ಲದೇ ಕರ್ಪೂರ-ಅಗರು-ತುಲಸಿಯನ್ನು ಶ್ರೀಖಂಡದ ಗಂಧದ ಜೊತೆ ತೇಯ್ದು ಮಾಘಮಾಸದಲ್ಲಿ ಭಗವಂತನಿಗೆ ಸಮರ್ಪಿಸುವುದರಿಂದ ಆ ಮಾಸನಿಯಾಮಕನಾದ ಕಮಲಾಮಾಧವನಿಗೆ ಸಂತೋಷವಾಗುತ್ತದೆ. ದೇವರನ್ನು ಸಂತೋಷಪಡಿಸುವುದು ಎಂದಿಗೂ ವ್ಯರ್ಥವಾಗುವುದಿಲ್ಲ. ಅದು ಅಲ್ಪಫಲಕವೂ ಅಲ್ಲ.

ಸ್ಮೃತಿಮಾಣಿಕ್ಯಸಂಗ್ರಹದಲ್ಲಿ ಉದಾಹೃತವಾದ ವಾಯುಪುರಾಣದ ವಚನಗಳಿವು-

**ದ್ವಾದಶ್ಯಾಂ ಮಾಘಮಾಸೇ ತು ಶುಕ್ಲಾಯಾಂ ಪೂಜಯೇತ್ ಸುಧೀಃ ।**
**ಅಶ್ವಮೇಧಫಲಂ ತಸ್ಯ ದದಾತಿ ತುಲಸೀ ಶುಭಾ ॥**

ಮಾಘಮಾಸದ ಶುಕ್ಲಪಕ್ಷದ ದ್ವಾದಶಿಯಂದು ತುಲಸಿಯನ್ನು ವಿಶೇಷವಾಗಿ ಜ್ಞಾನಪೂರ್ವಕವಾಗಿ ಪೂಜಿಸಬೇಕು. ಅಂಥವನಿಗೆ ಅಶ್ವಮೇಧಯಾಗದ ಫಲವನ್ನು ತುಲಸಿಯು ನೀಡುತ್ತಾಳೆ.

**ಫಾಲ್ಗುಣಮಾಸದ ಪೂಜೆ**

**ರಾಕಾಯಾಂ ಫಾಲ್ಗುನೇ ಮಾಸಿ ದರ್ಶೇ ವಾ ದ್ವಾದಶೀದಿನೇ ।**
**ರಾತ್ರೌ ದೀಪಪ್ರದಾನಾಚ್ಚ ಪರಮಾನ್ನಸಮರ್ಪಣಾತ್ ।**
**ಜನ್ಮಮೃತ್ಯುಜರಾಹೀನಃ ಮೋಕ್ಷಮಾರ್ಗಂ ಚ ವಿಂದತಿ ॥**

ಫಾಲ್ಗುಣಮಾಸ ಹುಣ್ಣಿಮೆಯಂದು ಅಥವಾ ದರ್ಶದ ದಿನ, ದ್ವಾದಶಿಯ ದಿನ ರಾತ್ರಿಯಲ್ಲಿ ತುಲಸಿಯ ಮುಂದೆ ದೀಪವನ್ನು ಬೆಳಗಿಸಬೇಕು. ಮತ್ತು ಹರಿನಿವೇದಿತವಾದ ಪರಮಾನ್ನವನ್ನು ನಿವೇದಿಸಬೇಕು. ಹೀಗೆ ಮಾಡುವುದರಿಂದ ಜನನ-ಮರಣಗಳಿಂದ ಮುಕ್ತನಾಗುತ್ತಾನೆ. ಸ್ವರೂಪಸುಖವನ್ನು ಅನುಭವಿಸುತ್ತಾನೆ. ಅರ್ಥಾತ್ ತುಲಸಿಯ ಪೂಜೆಯು ಜ್ಞಾನಜನಕವಾಗುವ ಮೂಲಕ ಮುಕ್ತಿಗೆ ಸಹಕಾರಿಯಾಗುತ್ತದೆಂದು ತಿಳಿಯಬೇಕು.

ಈ ಎಲ್ಲ ವಚನಗಳನ್ನು ಗಮನಿಸಿದಾಗ ತುಲಸೀಪೂಜೆಯ ವೈಶಿಷ್ಟ್ಯವೇನೆಂದು ಸಿದ್ಧವಾಗುತ್ತದೆ. ತುಲಸಿಯ ಮಹಿಮೆಯೂ ಇದರಿಂದ ತಿಳಿಯುತ್ತದೆ. ಮತ್ತು ಹನ್ನೆರಡೂ ತಿಂಗಳು ತುಲಸಿಯ ಪೂಜೆಯನ್ನು ಮಾಡುತ್ತಲೇ ಇರಬೇಕೆಂದು ಸ್ಪಷ್ಟವಾಗುತ್ತದೆ. ಇಲ್ಲಿಯ ವರೆಗೆ ತಿಳಿದಿರುವ ಮಾಸಪೂಜಾವಿಶೇಷಗಳನ್ನು ಮಾಡಲಾಗದಿದ್ದರೆ ಹೀಗೂ ಮಾಡಬಹುದೆಂದು ಈ ವಚನವು ತಿಳಿಸುತ್ತದೆ-

**ಉಕ್ತೇಷು ಮಾಸೇಷ್ವಪ್ಯೇಕಮಾಸಪೂಜಾಂ ಕರೋತಿ ಯಃ ।**
**ಸರ್ವಭೋಗಸಮಾಯುಕ್ತಃ ಮೋಕ್ಷಮಂತೇ ಪ್ರಪದ್ಯತೇ ॥**

**ಏವಂ ದ್ವಾದಶಮಾಸಾನಾಂ ಪೂಜಾ ನಾರೀ ನರೋಽಥವಾ ।**
**ಕರೋತಿ ತತ್ಫಲಂ ವಕ್ತುಂ ವಿಷ್ಣುನಾಽಪಿ ನ ಶಕ್ಯತೇ ॥**

ಪೂರ್ವೋಕ್ತ ಮಾಸಪೂಜಾಗಳನ್ನು ಎಲ್ಲವನ್ನೂ ಮಾಡಲು ಸಾಧ್ಯವಾಗದಿದ್ದಲ್ಲಿ ಯಾವ ಮಾಸದಲ್ಲಿ ಪೂಜೆಯನ್ನು ಮಾಡಲು ಅನುಕೂಲವಿರುತ್ತದೋ ಆ ಮಾಸದಲ್ಲಿಯ ವಿಶೇಷವಾದ ಪೂಜೆಯನ್ನು ಮಾಡಿದರೂ ಸಾಕು. ಹೀಗೆ ಮಾಡಿದವನು ಇಲ್ಲಿ ಸಕಲಭೋಗಗಳಿಂದ ಯುಕ್ತನಾಗುತ್ತಾನೆ. ವಿಹಿತವಾದ ಎಲ್ಲ ಭೋಗಗಳನ್ನು ಅನುಭವಿಸುತ್ತಾನೆ. ಮತ್ತು ಕೊನೆಗೆ ಮೋಕ್ಷವನ್ನು ಪಡೆಯುತ್ತಾನೆ. ಹೀಗೆ ಹನ್ನೆರಡೂ ಮಾಸದ ಪೂಜೆಯನ್ನು ಸ್ತ್ರೀಯಾಗಲೀ ಪುರುಷನಾಗಲೀ ತಪ್ಪದೇ ಮಾಡುವುದರಿಂದ ಅತಿವಿಶಿಷ್ಟವಾದ ಫಲವನ್ನು ಪಡೆಯುತ್ತಾನೆ. ಸ್ವಯಂ ವಿಷ್ಣುಭಕ್ತರಾದ ಜನರು ಕೂಡಾ ಈ ಫಲದ ಮಿತಿಯನ್ನು ಹೇಳಲಾರರು.

**ಚಾತುರ್ಮಾಸ್ಯದಲ್ಲಿ ತುಲಸಿಯ ಪೂಜಾವಿಶೇಷ**

**ಶಯನೇ ಪರಿವೃತ್ತೌ ಚ ಸಮುತ್ಥಾನೇ ಚ ಚಕ್ರಿಣಃ ।**
**ವಿಶೇಷಾತ್ ಪೂಜಿತಾ ದೇವೀ ಸಾಲೋಕ್ಯಾದಿಫಲಪ್ರದಾ ॥**

ಆಷಾಢ ಶುಕ್ಲ ಏಕಾದಶೀ ಶಯನೀ ಏಕಾದಶೀ. ಅವತ್ತಿನ ದಿನ ದೇವರು ಮಲಗುತ್ತಾನೆ. (ದೇವರಿಗೆ ಸರ್ವಥಾ ನಿದ್ರೆಯು ಇಲ್ಲ. ದೇವರ ನಿದ್ರೆ ಎಂದರೆ ಕಣ್ಣುಗಳನ್ನು ಮುಚ್ಚುವುದೇ ಹೊರತು ವಿಶ್ರಾಂತಿಯನ್ನು ಪಡೆಯುವುದು ಎಂದು ಅಲ್ಲ. ಈ ವಿಷಯದಲ್ಲಿ ಎಚ್ಚರಿಕೆಯಿಂದ ಇರಬೇಕು. ದೇವರಿಗೆ ನಿಜವಾಗಿ ನಮ್ಮ ಹಾಗೆ ಇಂದ್ರಿಯೋಪರತಿರೂಪವಾದ ನಿದ್ರೆ ಇದೆ ಎಂದು ತಿಳಿಯುವುದು ಅನರ್ಥಕರವಾಗಿದೆ) ಭಾದ್ರಪದ ಶುಕ್ಲ ಏಕಾದಶಿಯು ಪರಿವರ್ತಿನೀ ಏಕಾದಶೀ. ಅವತ್ತಿನ ದಿನ ಪರಮಾತ್ಮ ಮಗ್ಗಲಾಗುತ್ತಾನೆ. ಕಾರ್ತಿಕ ಶುಕ್ಲ ಏಕಾದಶೀ ಪ್ರಬೋಧಿ

ನೀ ಏಕಾದಶೀ. ಅವತ್ತಿನ ದಿನ ದೇವರು ಮುಚ್ಚಿದ ಕಣ್ಣುಗಳನ್ನು ತೆಗೆಯುತ್ತಾನೆ. ಈ ಮೂರು ಪ್ರಸಂಗದಲ್ಲಿಯೂ ತುಲಸಿಯನ್ನು ಶ್ರದ್ಧೆಯಿಂದ ಷೋಡಶೋಪಚಾರಗಳಿಂದ ಪೂಜಿಸಬೇಕು. ಇದರಿಂದ ಸಂತುಷ್ಟಳಾದ ತುಲಸಿಯು ಸಾಧಕನಿಗೆ ಸದ್ಗತಿಯನ್ನು ಕರುಣಿಸುತ್ತಾಳೆ.

**ತುಲಸೀ ಅರ್ಚನೆಗೆ ಪುಣ್ಯದಿನಗಳು**

ಒಟ್ಟಾರೆ ಯಾವ ದಿವಸಗಳಲ್ಲಿ ತುಲಸಿಯ ಪೂಜೆಯನ್ನು ವಿಶೇಷವಾಗಿ ಮಾಡಬೇಕೆಂಬುದನ್ನು ಸಂಗ್ರಹವಾಗಿ ತಿಳಿಸುವ ಸ್ಮೃತಿವಚನಗಳು ಈ ರೀತಿಯಾಗಿವೆ-

**ಜಯಂತೀ ರಾಮನವಮೀ ವಿಜಯಾ ದಶಮೀ ತಥಾ ।**
**ಪೌರ್ಣಮಾಸೀ ಚ ವೈಶಾಖೇ ಜ್ಯೇಷ್ಠಾಯಾಃ ಶುಕ್ಲಪಂಚಮೀ ॥**

**ಸಿತಾ ನವಮ್ಯಾಶ್ವಯುಜೇ ಕಾರ್ತಿಕ್ಯಾಂ ಕೃತ್ತಿಕಾಂತಿಕಾಃ ।**
**ಮಾರ್ಗೇ ತ್ರಿಂಶದ್ದಿನೇ ಚೈವ ಸಂಕ್ರಾಂತ್ಯಾಂ ಮಕರೇ ರವೌ ॥**

**ಏತೇ ಕಾಲಾ ಮಹಾಪುಣ್ಯಾಸ್ತಥಾ ಮನ್ವಾದಯೋಽಪಿ ಚ ।**
**ಪೂಜಯೇತ್ತೇಷು ಗೋವಿಂದಂ ಬಿಲ್ವೈಶ್ಚ ತುಲಸೀದಲೈಃ ॥**

**ಶತಪತ್ರೈಶ್ಚ ದೂರ್ವಾಭಿಃ ವ್ರತೀ ನಿತ್ಯಮತಂದ್ರಿತಃ ।**
**ತುಲಸೀಪತ್ರಸಂಯುಕ್ತಮಂಜರೀಭಿಃ ಸಹಸ್ರಕೈಃ ॥**

**ಏತತ್ಪೂಜಾಫಲಂ ವಕ್ತುಂ ಬ್ರಹ್ಮಕಲ್ಪೈರ್ನ ಪಾರ್ಯತೇ ।**
**ಕಿಂಚ ವಿಷ್ಣೋಃ ಪದಂ ಪ್ರಾಪ್ಯ ಪುನರ್ಜನ್ಮ ನ ವಿದ್ಯತೇ ॥**

ಶ್ರೀಕೃಷ್ಣಜಯಂತೀ, ರಾಮನವಮೀ, ವಿಜಯದಶಮೀ, ವೈಶಾಖ ಹುಣ್ಣಿಮೆ, ಜ್ಯೇಷ್ಠಮಾಸ ಶುಕ್ಲ ಪಂಚಮೀ, ಆಶ್ವಯುಜ ಶುಕ್ಲ ನವಮೀ, ಕಾರ್ತಿಕ ಮಾಸದಲ್ಲಿ ಕೃತ್ತಿಕಾ ನಕ್ಷತ್ರ ಬರುವ ತನಕ, ಮಾರ್ಗಶಿರ ಸಮಗ್ರ ಮಾಸ, ಸಂಕ್ರಾಂತಿ, ಸೂರ್ಯನು ಮಕರರಾಶಿಗೆ ಬಂದಿರುವಾಗ, ಮನ್ವಾದಿಗಳು ಈ ಎಲ್ಲ ದಿನಗಳು ಅತಿಶಯವಾದ ಪುಣ್ಯವನ್ನು ತಂದುಕೊಡುವ ದಿನಗಳಾಗಿವೆ. ಈ ದಿನಗಳಲ್ಲಿ ತುಲಸೀದಲಗಳಿಂದ, ಬಿಲ್ವಪತ್ರಗಳಿಂದ, ಕಮಲಗಳಿಂದ, ದೂರ್ವಾಗಳಿಂದ ವೇದಪ್ರತಿಪಾದ್ಯನಾದ ಪರಮಾತ್ಮನನ್ನು ಅರ್ಚಿಸಬೇಕು. ಮಂಜರೀಯುಕ್ತವಾದ ಸಾವಿರದಲಗಳಿಂದ ದೇವರನ್ನು ಅರ್ಚಿಸುವುದು ವಿಶಿಷ್ಟಫಲಪ್ರದ. ಇದೊಂದು ವ್ರತವೆಂದು ಭಾವಿಸಬೇಕು. ಆಲಸ್ಯವನ್ನು ದೂರ ಸರಿಸಬೇಕು. ಹೀಗೆ ಪ್ರತಿವರ್ಷವೂ ಮಾಡುವುದರಿಂದ ದೊರೆಯುವ ಫಲ ಬ್ರಹ್ಮಕಲ್ಪಗಳು ಕಳೆದರೂ ಹೇಳಲು ಸಾಧ್ಯವಿಲ್ಲ. ಅನಂತನ

ಅರ್ಚನೆ ಅನಂತಫಲಕ್ಕೆ ಕಾರಣವಾಗುತ್ತದೆ. ಈ ಅರ್ಚನೆಯಿಂದ ಸಾಧಕನು ವಿಷ್ಣುಪದವನ್ನು ಪಡೆಯುತ್ತಾನೆ. ಮತ್ತೆಂದಿಗೂ ಅವನು ಈ ಮರ್ತ್ಯಲೋಕಕ್ಕೆ ಮರಳಿ ಬರುವುದಿಲ್ಲ. ಅಪರೋಕ್ಷಜ್ಞಾನಿಯಾಗಿ ಭಗವತ್ಪ್ರಸಾದಕ್ಕೆ ಭಾಜನನಾಗಿ ಮುಕ್ತನಾಗಿ ಸುಖಿಸುತ್ತ ಇರುತ್ತಾನೆ. ಹೀಗೆ ತುಲಸಿಯಿಂದ ದೇವರನ್ನು ಅರ್ಚಿಸುವುದು ಪರಂಪರಯಾ ಮುಕ್ತಿಗೆ ಸಾಧನವಾದುದರಿಂದ ತುಲಸ್ಯರ್ಚನೆಯನ್ನು ವಿಶಿಷ್ಟವಾದ ರೀತಿಯಲ್ಲಿ ಮಾಡಬೇಕು.

**ತುಲಸೀಅರ್ಚನೆಯ ಫಲ**

**ಶ್ರೀಮತ್ತುಲಸ್ಯಾರ್ಚಯತೇ ಸಕೃಚ್ಚ ಪತ್ರೈಃ ಸುಗಂಧೈರ್ವಿಮಲೈಶ್ಚ ಖಂಡಿತೈಃ ।**
**ಯಸ್ತಸ್ಯ ಪಾಪಂ ಪಟಸಂಸ್ಥಿತಂ ತದಾ ನಿರೀಕ್ಷಯಿತ್ವಾ ಪರಿಮಾರ್ಜಯೇದ್ಯಮಃ ॥**

ಒಂದುಸಲವಾದರೂ ಸುಗಂಧವಾದ, ನಿರ್ಮಲವಾದ, ಶುದ್ಧವಾದ ರೀತಿಯಲ್ಲಿ ಚಯನ ಮಾಡಿರುವ ತುಲಸೀಪತ್ರಗಳಿಂದ ಪರಮಾತ್ಮನ ಪೂಜೆಯನ್ನು ಮಾಡಬೇಕು. ಇದರಿಂದ ಯಮ ಸಂತುಷ್ಟನಾಗುತ್ತಾನೆ. ಚಿತ್ರಗುಪ್ತಾದಿಗಳು ಬರೆದಿಟ್ಟ ಆ ವ್ಯಕ್ತಿಯ ಪಾಪಗಳ ಪಟ್ಟಿಯನ್ನು ಯಮದೇವರು ನೋಡಿ ಅದನ್ನೆಲ್ಲ ಅಳಿಸಿಬಿಡುತ್ತಾರೆ.

**ನಿರ್ಮಾಲ್ಯ ತುಲಸೀ ಅನಂತಪುಣ್ಯಪ್ರದ**

ದೇವರಿಗೆ ತುಲಸಿಯನ್ನು ಸಮರ್ಪಿಸುತ್ತೇವೆ. ದೇವರನ್ನು ಭುಜಂಗಿಸುವಾಗ ಆ ಎಲ್ಲ ತುಲಸಿಯನ್ನು ತೆಗೆದು ಬಿಡುತ್ತೇವೆ. ಆದರೆ ಮರುದಿನದ ತನಕ ಆ ತುಲಸಿಯು ದೇವರ ಪಾದದ ಸನ್ನಿಧಾನದಲ್ಲಿಯೇ ಇರಬೇಕು. ಇಂತಹ ತುಲಸೀನಿರ್ಮಾಲ್ಯವನ್ನು ಧರಿಸಬೇಕು. ಇದು ಮಹಾ ಪುಣ್ಯಕರವೆಂದು ಈ ವಚನವು ತಿಳಿಸುತ್ತದೆ-

**ವಿಷ್ಣುಪಾದಾಬ್ಜಸಂಲಗ್ನಾಮಹೋರಾತ್ರಾರ್ಪಿತಾಂ ಶುಭಾಮ್ ।**
**ತುಲಸೀಂ ಧಾರಯೇದ್ಯಸ್ತು ತಸ್ಯ ಪುಣ್ಯಮನಂತಕಮ್ ॥**

ಭಗವಂತನ ಪಾದಗಳಲ್ಲಿ ಅರ್ಪಿತವಾದ, ಅಲ್ಲಿಯೇ ಹಗಲು ರಾತ್ರಿ ಇದ್ದ ತುಲಸಿಯು ಪರಮಶುಭಕರವಾಗಿದೆ. ಇಂತಹ ತುಲಸಿಯನ್ನು ಧರಿಸುವುದರಿಂದ ಪ್ರಾಪ್ತವಾಗುವ ಪುಣ್ಯವು ಎಣಿಕೆಗೆ ನಿಲುಕುವುದಿಲ್ಲ.

**ಸ್ತ್ರೀಯರು ತುಲಸಿಯಿಂದ ಅರ್ಚಿಸಬಾರದು**

**ವಿಧವಾತ್ವಂ ನ ಚಾಽಪ್ನೋತಿ ನಾರೀ ಜನ್ಮನಿ ಜನ್ಮನಿ ।**
**ಮೌಲ್ಯಾದಾನೀಯ ಪುಷ್ಪಾದ್ಯಂ ಸ್ತ್ರೀಶೂದ್ರಾದ್ಯೈಃ ದ್ವಿಜೋತ್ತಮ ।**
**ಬ್ರಾಹ್ಮಣೈಃ ಕಾರಯೇತ್ಪೂಜಾಂ ಯಸ್ಮಾತ್ತುಷ್ಟಂ ಹರೇಃ ಪ್ರಿಯಮ್ ॥**

**ಸ್ತ್ರಿಯೋ ಮೌಲ್ಯೇನ ವಾ ವಿಷ್ಣುಂ ಪೂಜಯೇತ್ತುಲಸೀದಲೈಃ ।**
**ತಾಸ್ಸರ್ವಪಾತಕೈರ್ಮುಕ್ತಾ ಯಾಂತಿ ವಿಷ್ಣೋಃ ಪರಂ ಪದಮ್ ॥**

ಸ್ತ್ರೀಯರಾಗಲೀ ಶೂದ್ರರಾಗಲೀ ಎಂದಿಗೂ ತುಲಸಿಯಿಂದ ಪರಮಾತ್ಮನ ಅರ್ಚನೆಯನ್ನು ಮಾಡಬಾರದು. ತುಲಸ್ಯರ್ಚನೆಯಿಂದ ಲಭ್ಯವಾಗುವ ಫಲವನ್ನು ಬಯಸಿದಲ್ಲಿ ತುಲಸಿ ಅರ್ಚನೆಗೆ ವಿಹಿತವಾದ ದ್ರವ್ಯವನ್ನು ಬ್ರಾಹ್ಮಣರಿಗೆ ನೀಡಬೇಕು. ಅವರಿಂದ ತುಲಸ್ಯರ್ಚನೆಯನ್ನು ಮಾಡಿಸಬೇಕು. ಹೀಗೆ ಬ್ರಾಹ್ಮಣರಿಂದ ತುಲಸೀಪೂಜೆಯನ್ನು ಮಾಡಿಸುವುದರಿಂದ ನಾರಿಯು ಯಾವ ಜನ್ಮದಲ್ಲಿಯೂ ವಿಧವೆಯಾಗುವುದಿಲ್ಲ. ಇದಕ್ಕೆ ವಿರುದ್ಧವಾಗಿ ತಾವೇ ತುಲಸ್ಯರ್ಚನೆಯನ್ನು ಮಾಡಿದ ಪಕ್ಷದಲ್ಲಿ ಯೋಗ್ಯವಾದ ಫಲವು ಅವರಿಗೆ ದೊರಕುವುದಿಲ್ಲ, ವಿಪರೀತವಾದ ಫಲವೇ ದೊರಕುತ್ತದೆ. ಆದ್ದರಿಂದ ಈ ವಿಷಯದಲ್ಲಿ ಎಚ್ಚರಿಕೆಯಿಂದ ಇರಬೇಕು.

**ತುಲಸೀಛಾಯಾ ಪಿತೃಗಳಿಗೆ ಪ್ರಿಯ**

**ತುಲಸೀಕಾನನೋದ್ಭೂತಾ ಛಾಯಾ ಯತ್ರ ಭವೇನ್ಮುನೇ ।**
**ತತ್ರ ಶ್ರಾದ್ಧಂ ಪ್ರದಾತವ್ಯಂ ಪಿತೄಣಾಂ ತೃಪ್ತಿಹೇತವೇ ॥**

ತುಲಸೀವನದ ನೆರಳಿನಿಂದ ಯುಕ್ತವಾಗಿರುವ ಪ್ರಾಂತ ಪಿತೃಗಳಿಗೆ ಪ್ರಿಯವಾಗಿದೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ಇಂತಹ ಸ್ಥಳದಲ್ಲಿ ಶ್ರಾದ್ಧವನ್ನು ಮಾಡಬೇಕು. ಇದರಿಂದ ಪಿತೃಗಳು ತೃಪ್ತರಾಗುತ್ತಾರೆ.

**ತುಲಸೀಬೀಜನಿಕರೋ ಯಸ್ಮಿನ್ ಪತತಿ ವೈ ಮುನೇ ।**
**ತತ್‌ಸ್ಥಾನಂ ಪರಮಂ ಜ್ಞೇಯಂ ಪಿತೄಣಾಂ ಪ್ರೀತಿವರ್ಧನಮ್ ॥**

ತುಲಸಿಯ ಬೀಜಗಳ ಸಮೂಹವು ಯಾವ ಸ್ಥಳದಲ್ಲಿ ಬೀಳುತ್ತದೋ ಆ ಸ್ಥಳವು ಕೂಡಾ ಪರಮಪವಿತ್ರವಾಗಿದೆ. ಅಲ್ಲಿ ಶ್ರಾದ್ಧವನ್ನಾಚರಿಸಿದರೆ ಪಿತೃಗಳಿಗೆ ಸಂತೋಷವಾಗುತ್ತದೆ.

**ತುಲಸೀಗಂಧಮಹಿಮಾ**

**ತುಲಸೀಗಂಧಮಾದಾಯ ಯತ್ರ ಗಚ್ಛತಿ ಮಾರುತಃ ।**
**ದಿಶೋ ದಶ ಪುನಾತ್ಯಾಶು ಭೂತಗ್ರಾಮಾಂಶ್ಚತುರ್ವಿಧಾನ್ ॥**

ತುಲಸಿಯ ಗಂಧವನ್ನು ತೆಗೆದುಕೊಂಡ ವಾಯುವು ಎಲ್ಲೆಲ್ಲಿ ಸಂಚರಿಸುತ್ತದೋ ಆ ಎಲ್ಲ ಹತ್ತು ದಿಕ್ಕುಗಳು ಪವಿತ್ರವಾಗುತ್ತವೆ. ತುಲಸಿಯ ಗಂಧವು ನಲಿದಾಡುವ ಆ ಪ್ರದೇಶದಲ್ಲಿ ವಾಸವಾಗಿರುವ ಅಂಡಜ, ಉದ್ಭಿಜ್ಜ, ಸ್ವೇದಜ, ಜರಾಯುಜ ಎಂಬ ನಾಲ್ಕುವಿಧವಾದ ಭೂತಗಳ ಸಮೂಹವೂ ಪವಿತ್ರವಾಗುತ್ತದೆ.

**ಜೀವಚ್ಛವೋ ಭಾಗವತಾಂಘ್ರಿರೇಣುಂ**
**ನ ಜಾತು ಮರ್ತ್ಯೋಽಭಿಲಷೇತ ಯಸ್ತು ।**
**ಶ್ರೀವಿಷ್ಣುಪದ್ಯಾ ಮನುಜಸ್ತುಲಸ್ಯಾಃ**
**ಶ್ವಸಚ್ಛವೋ ಯಸ್ತು ನ ವೇದ ಗಂಧಮ್ ॥ -ಭಾಗ.೨.೨.೨೩**

ಭಗವದ್ಭಕ್ತರ ಪಾದಧೂಲಿಯನ್ನು ಸರ್ವಥಾ ಅಪೇಕ್ಷಿಸದ ಮಾನವ ಜೀವಚ್ಛವ. ಅವನ ಬದುಕು ಅನರ್ಥಪೂರ್ಣ. ಶ್ರೀವಿಷ್ಣುವಿನ ಪಾದಲಗ್ನವಾದ ತುಲಸಿಯ ಗಂಧವನ್ನು ಅಪೇಕ್ಷಿಸದ ಮಾನವನು ಕೂಡಾ ಶ್ವಾಸದಿಂದಿರುವ ಶವ. ಆದ್ದರಿಂದ ಪ್ರಯತ್ನಪೂರ್ವಕವಾಗಿ ತುಲಸಿಯನ್ನು ದೇವರಿಗೆ ಸಮರ್ಪಿಸಿ ಆ ತುಲಸಿಯ ಗಂಧವನ್ನು ಮೂಸುತ್ತ ಇರಬೇಕು. ತುಲಸಿಯು ಸಿಗದಿರುವಾಗ ? ಎಂದು ಮತ್ತೆ ಮತ್ತೆ ಪ್ರಶ್ನೆಯನ್ನು ಮಾಡಿಕೊಳ್ಳಬಾರದು. ಆವಾಗ ಪ್ರತಿನಿಧಿಗಳನ್ನು ಹೇಳಿದ್ದಾರೆ. ಅದಕ್ಕೆ ತಕ್ಕಂತೆ ನಡೆದುಕೊಳ್ಳಬೇಕು.

**ಸನಕಾದಿಗಳ ಮನಸ್ಸಿಗೂ ಮೋದದಾಯಕ**

**ತಸ್ಯಾರವಿಂದನಯನಸ್ಯ ಪದಾರವಿಂದ-**
**ಕಿಂಜಲ್ಕಮಿಶ್ರತುಲಸೀಮಕರಂದವಾಯುಃ ।**
**ಅಂತರ್ಗತಃ ಸ್ವವಿವರೇಣ ಚಕಾರ ತೇಷಾಂ**
**ಸಂಕ್ಷೋಭಮಕ್ಷರಜುಷಾಮಪಿ ಚಿತ್ತತನ್ವೋಃ ॥ -೩.೧೬. ೪೩**

ದೇವರ ಕಣ್ಣುಗಳು ಅರವಿಂದ. ದೇವರ ಪಾದಗಳೂ ಅರವಿಂದ. ಭಗವಂತನ ಪಾದಾರವಿಂದಗಳನ್ನು ಸನಕಾದಿಗಳು ಅರ್ಚಿಸಿದರು. ಸುಗಂಧಭರಿತವಾದ ಕಮಲಗಳಿಂದ, ಹರಿಪ್ರಿಯವಾದ ತುಲಸಿಯಿಂದ ಅರ್ಚಿಸಿದರು. ಸ್ವಯಂ ಸುಗಂಧಭರಿತವಾದ ಆ ಪುಷ್ಪಗಳು, ತುಲಸೀದಳಗಳು ಪಾದಾರವಿಂದದ ಸೌಗಂಧ್ಯವನ್ನು ತಮ್ಮಲ್ಲಿ ತುಂಬಿಕೊಂಡವು. ಹಿಂದೆ ಇಲ್ಲದ ಆ ಸೌಗಂಧ್ಯ ಘ್ರಾಣದ ಮೂಲಕ ಸನಕಾದಿಗಳ ಮನಸ್ಸನ್ನು ತಲುಪಿದವು. ಭಗವಂತನಿಂದಲೇ ಸನಕಾದಿಗಳಿಗೆ ಸಂತಸ. ದೇವರ ಭಾವನೆ ಮಾತ್ರ ಅವರ ಮನಸ್ಸನ್ನು ಕದಡುತ್ತದೆ. ಈಗ ದೇವರ ನಿರ್ಮಾಲ್ಯವಾದ ಈ ಪುಷ್ಪ ಮತ್ತು ತುಲಸಿಗಳ ಸೌಂಗಂಧ್ಯ ಅವರ ಮನಸ್ಸಿನಲ್ಲಿ ಹರ್ಷದ ಸೌಗಂಧ್ಯವನ್ನು ತುಂಬಿಸಿತು. ತನುವಿನಲ್ಲಿ ಪುಲಕದ ಸೌಗಂಧ್ಯವನ್ನೂ ತುಂಬಿಸಿತು. ನಿತ್ಯವಿರಾಗಿಗಳಾದ ಸನಕಾದಿಗಳ ಮನಸ್ಸನ್ನೂ ಕದಡಿತು. ಇದು ನಿರ್ಮಾಲ್ಯವಾಗಿರುವ ಪುಷ್ಪ-ತುಲಸಿಗಳ ಹಿರಿದಾದ ಹಿರಿಮೆ. ಇದು ಶ್ರೀಹರಿಯ ಹಿರಿಮೆಯೇ.

**ನಿತ್ಯವೂ ಹದಿನೆಂಟು ದಲಗಳನ್ನು ಸ್ವೀಕರಿಸಬೇಕು**

**ಚತುಃ ಕರ್ಣೇ ಮುಖೇ ಚೈಕಂ ನಾಭಾವೇಕಂ ತಥೈವ ಚ ।**
**ಶಿರಸ್ಯೇಕಂ ತಥಾ ಪ್ರೋಕ್ತಂ ತೀರ್ಥೇ ತ್ರೀಣಿ ತಥಾ ಕ್ರಮಾತ್ ॥**

**ಅನ್ನೋಪರಿ ತಥಾ ಪಂಚ ಭೋಜನಾಂತೇ ದಲತ್ರಯಮ್ ।**
**ಏವಂ ಶ್ರೀತುಲಸೀ ಧಾರ್ಯಾ ಅಷ್ಟಾದಶ ಮನೀಷಿಭಿಃ ॥**

ಪ್ರತಿನಿತ್ಯ ಹದಿನೆಂಟು ತುಲಸೀದಲಗಳನ್ನು ತಪ್ಪದೇ ಸ್ವೀಕರಿಸಬೇಕು. ನಾಲ್ಕುದಲಗಳನ್ನು ಎರಡು ಕಿವಿಗಳಲ್ಲಿ, ಮುಖದಲ್ಲಿ ಒಂದು, ನಾಭಿಯಲ್ಲಿ ಒಂದು, ತಲೆಯಲ್ಲಿ ಒಂದು, ತೀರ್ಥದಲ್ಲಿ ಮೂರು, ಅನ್ನದ ಮೇಲೆ ಐದು (ಪ್ರಾಣಾಹುತಿಯ ಸಂದರ್ಭದಲ್ಲಿ) ಊಟವಾದ ಮೇಲೆ ಮೂರುದಲಗಳು ಹೀಗೆ ಹದಿನೆಂಟು ದಲಗಳನ್ನು ನಿತ್ಯವೂ ಸೇವಿಸಬೇಕು.

**ಪಾಠಭೇದ**

ಇದೇ ವಿಧಾನ ಸ್ವಲ್ಪ ಪಾಠಭೇದದಿಂದ ಈ ರೀತಿಯಾಗಿ ಧರ್ಮಶಾಸ್ತ್ರ-ಪ್ರಬಂಧಗಳಲ್ಲಿ ಕಾಣಿಸುತ್ತದೆ-

**ಚತುಃ ಕರ್ಣೇ ಮುಖೇ ಚೈಕಂ ನಾಭಾವೇಕಂ ತಥೋದರೇ ।**
**ಶಿರಸ್ಯೇಕಂ ತಥಾ ಪ್ರೋಕ್ತಂ ತೀರ್ಥೇ ತ್ರೀಣಿ ತಥಾ ಕ್ರಮಾತ್ ॥**

**ಅನ್ನೋಪರಿ ತಥಾ ಪಂಚ ಭೋಜನಾಂತೇ ದಲದ್ವಯಮ್ ।**
**ಏವಂ ಶ್ರೀತುಲಸೀ ಧಾರ್ಯಾ ಅಷ್ಟಾದಶ ಮನೀಷಿಭಿಃ ॥**

ನಾಲ್ಕು ದಲಗಳನ್ನು ಎರಡು ಕಿವಿಗಳಲ್ಲಿ, ಮುಖದಲ್ಲಿ ಒಂದು, ನಾಭಿಯಲ್ಲಿ ಒಂದು, ಉದರದಲ್ಲಿ ಒಂದು, ತಲೆಯಲ್ಲಿ ಒಂದು, ತೀರ್ಥದಲ್ಲಿ ಮೂರು, ಅನ್ನದ ಮೇಲೆ ಐದು (ಪ್ರಾಣಾಹುತಿಯ ಸಂದರ್ಭದಲ್ಲಿ) ಊಟವಾದ ಮೇಲೆ ಎರಡು ದಲಗಳು ಹೀಗೆ ಹದಿನೆಂಟು ದಲಗಳನ್ನು ನಿತ್ಯವೂ ಸೇವಿಸಬೇಕು. ಹೀಗೆಂದು ಈ ಪ್ರಮಾಣವು ತಿಳಿಸುತ್ತದೆ. ಈ ಎರಡು ಪಕ್ಷಗಳಲ್ಲಿ ಮೊದಲ ಪಕ್ಷವನ್ನೇ ಸಾಂಪ್ರದಾಯಿಕವಾಗಿ ಎಲ್ಲರೂ ಅನುಸರಿಸಿಕೊಂಡು ಬಂದಿದ್ದಾರೆ.

ಈ ವಿಷಯದಲ್ಲಿ ಪ್ರಾಣೇಶದಾಸರ ಉಗಾಭೋಗವೂ ಮೊದಲಪಕ್ಷವನ್ನೇ ಅವಲಂಬಿಸಿದೆ. ಆ ವಚನವು ಹೀಗಿದೆ-

ನಾಲ್ಕು ಕರ್ಣದೊಳಗೊಂದು ಮುಖದೊಳು
ಏಕ ನಾಭಿಯೊಳಗೊಂದು ಶಿರದಲಿ
ಶ್ರೀಕರಾರ್ಚಿತಪದಜಲದಿ ತ್ರಯ ಅನ್ನದೊಳಗೈದು
ಹಾಕುವುದು ಮೂರ್ಭೋರ್ಜನೋತ್ತರ
ಸ್ವೀಕರಿಪುದಿಂತಷ್ಟದಶದಳ
ಶೋಕಹರ ಪ್ರಾಣೇಶವಿಠ್ಠಲಗೆ ಅರ್ಪಿಸಿದ ತುಲಸಿ ॥

ತುಲಸೀಸ್ವೀಕಾರ

ಯುಕ್ತೋ ಯದಿ ಮಹಾಪಾಪೈಃ ಸುಕೃತಂ ನಾಽರ್ಜಿತಂ ಕ್ವಚಿತ್ ।
ತಥಾಽಪಿ ಗೀಯತೇ ಮೋಕ್ಷೋ ತುಲಸೀ ಭಕ್ಷಿತಾ ಯದಿ ॥

ಮನುಷ್ಯ ಅನೇಕವಿಧವಾದ ಪಾಪಗಳನ್ನು, ಮಹಾಪಾತಕಗಳನ್ನು ಸಂಪಾದಿಸುತ್ತಾನೆ. ಆ ಎಲ್ಲ ಪಾಪಗಳು ಹಾಗೆಯೇ ತನ್ನಲ್ಲಿ ಇದ್ದರೆ ಸ್ನಾನ-ಸಂಧ್ಯಾದಿ ಯಾವ ಕರ್ಮಗಳಿಗೂ ಅರ್ಹನಾಗುವುದಿಲ್ಲ. ಆದ್ದರಿಂದ ಆಯಾ ಪಾಪಗಳಿಂದ ಮನುಷ್ಯ ಕಾಲ-ಕಾಲದಲ್ಲಿ ಮುಕ್ತನಾಗುತ್ತಲೇ ಇರಬೇಕು. ಅದಕ್ಕಾಗಿ ಅನೇಕ ಉಪಾಯಗಳನ್ನು ಸ್ಮೃತಿಗಳು ವಿಧಾನಮಾಡುತ್ತವೆ. ಅಂತಹ ಉಪಾಯಗಳಲ್ಲಿ ಶ್ರೇಷ್ಠವಾದ ಉಪಾಯ ಹರಿನಿವೇದಿತವಾದ ತುಲಸಿಯನ್ನು ಭಕ್ಷಿಸುವುದು. ಭಕ್ತಿಯಿಂದ ತುಲಸಿಯನ್ನು ಭಕ್ಷಿಸಿದರೆ ಅವನ ಅಂತಃಕರಣವು ಶುದ್ಧವಾಗುತ್ತದೆ. ಅಂಥವನಲ್ಲಿ ಪುಣ್ಯವು ಸ್ಥಿರವಾಗುತ್ತದೆ. ಅಪರೋಕ್ಷವನ್ನು ಪಡೆದು ಮುಕ್ತನಾಗುತ್ತಾನೆ. ಈ ವಿಷಯದಲ್ಲಿ ಸರ್ವಥಾ ಸಂದೇಹವಿಲ್ಲ.

ಕಿಂ ಕರಿಷ್ಯತಿ ಸುಸ್ನಾತಃ ಗಂಗಾಯಾಂ ಭೂಸುರೋತ್ತಮಃ ।
ಯೋ ವಹೇಚ್ಛಿರಸಾ ನಿತ್ಯಂ ತುಲಸೀಂ ವಿಷ್ಣುಸೇವಿತಾಮ್ ॥

ನಿತ್ಯವೂ ಗಂಗೆಯಲ್ಲಿ ಮೀಯಬೇಕೆಂಬ ಹಂಬಲ ಪ್ರತಿಯೊಬ್ಬ ಬ್ರಾಹ್ಮಣರಿಗೂ ಇರುತ್ತದೆ. ಆದರೆ ಅದು ಎಲ್ಲರಿಗೂ ಸಾಧ್ಯವಿಲ್ಲ. ಅಂತಹ ಪ್ರಸಂಗದಲ್ಲಿ ವಿಷ್ಣುಸೇವಿತವಾದ ತುಲಸಿಯನ್ನು ತಲೆಯಲ್ಲಿ ಧರಿಸಬೇಕು. ಗಂಗಾಸ್ನಾನದ ಪುಣ್ಯವು ಪ್ರತಿನಿತ್ಯವೂ ಅವನಿಗೆ ಒದಗಿ ಬರುತ್ತದೆ.

ಶತ್ರುಘ್ನಂ ಚ ಸುಪುಣ್ಯಂ ಚ ಶ್ರೀಕರಂ ಚಾಽಘನಾಶನಮ್ ।
ಕೃತ್ವಾ ಧರ್ಮಮವಾಪ್ನೋತಿ ಶಿರಸಾ ತುಲಸೀದಲಮ್ ॥

ತುಲಸೀನಿರ್ಮಾಲ್ಯವನ್ನು ಪ್ರತಿನಿತ್ಯ ಶಿರಸಾ ಧರಿಸಬೇಕು. ಇದರಿಂದ ಲೌಕಿಕವಾದ ಪ್ರಯೋಜನಗಳು ಕೂಡಾ ಈಡೇರುತ್ತವೆ. ತನ್ನ ಶತ್ರುಗಳೆಲ್ಲ ದೂರವಾಗುತ್ತಾರೆ. ಮತ್ತು ವಿಶಿಷ್ಟವಾದ ಪುಣ್ಯವು ಲಭ್ಯವಾಗುತ್ತದೆ. ಸಂಪತ್ಕರವೂ ಆಗಿದೆ. ಪಾಪಪರಿಹಾರಕವಾಗಿದೆ. ಮತ್ತು ವಿಶಿಷ್ಟವಾದ ಧರ್ಮವು ಲಭ್ಯವಾಗುತ್ತದೆ.

**ಪ್ರಾಣಾಹುತಿಪಂಚಕ-ಆಪೋಶನಗಳಲ್ಲಿ ತುಲಸಿಯ ಆವಶ್ಯಕತೆ**

**ಆಹುತಿಂ ತುಲಸೀಹೀನಾಂ ಯೋ ದದ್ಯಾತ್ ಪ್ರಾಣಪಂಚಕೇ ।**
**ತದನ್ನಂ ಮಾಂಸತುಲ್ಯಂ ಸ್ಯಾತ್ ತಜ್ಜಲಂ ಸುರಯಾ ಸಮಮ್ ॥**

ಪಂಚ ಪ್ರಾಣಾಹುತಿಗಳನ್ನು ತುಲಸೀಸಹಿತವಾಗಿಯೇ ಸ್ವೀಕರಿಸಬೇಕು. ತುಲಸಿ ಇಲ್ಲದೇ ಆಹುತಿಗಳನ್ನು ಸ್ವೀಕರಿಸಿದರೇ ಆ ಅನ್ನವು ಮಾಂಸತುಲ್ಯವೆನಿಸುತ್ತದೆ. ತುಲಸೀಸಹಿತವಾಗಿಯೆ ಆಪೋಶನವನ್ನು ತೆಗೆದುಕೊಳ್ಳಬೇಕು. ತುಲಸೀರಹಿತವಾದ ಆಪೋಶನಜಲ ಕೂಡಾ ಸುರೆಗೆ ಸಮವೆನಿಸುತ್ತದೆ.

ಇಲ್ಲಿ ಈ ವಿಷಯವನ್ನು ಗಮನಿಸಬೇಕು.

ಬೇಕಾದಷ್ಟು ತುಲಸಿಯು ಇರುತ್ತದೆ. ಆಲಸ್ಯದಿಂದ, ಸೇರುವುದಿಲ್ಲ ಎಂಬ ಕಾರಣದಿಂದ, ಮತ್ತಾವುದೋ ನಿಮಿತ್ತದಿಂದ ತುಲಸೀರಹಿತವಾಗಿಯೇ ಪಂಚಪ್ರಾಣಾಹುತಿಗಳನ್ನು ಸ್ವೀಕರಿಸುತ್ತಾ ಇರುತ್ತೇವೆ. ಹೀಗೆ ಎಂದಿಗೂ ಮಾಡಬಾರದು. ತುಲಸಿಯೇ ಇಲ್ಲದಿರುವಾಗ ಅದಕ್ಕೆ ಪ್ರತಿನಿಧಿಗಳನ್ನು ಹೇಳಿದ್ದಾರೆ. ಕೊನೆಗೆ ತುಲಸಿಯ ಸ್ಮರಣೆಯನ್ನಾದರೂ ಮಾಡುತ್ತಾ ಪಂಚಪ್ರಾಣಾಹುತಿಗಳನ್ನು ಸ್ವೀಕರಿಸಬೇಕು. ಹೀಗೆ ಮಾಡುವುದರಿಂದ ಯಾವುದೇ ರೀತಿಯಾದ ಪಾತಕವು ಪ್ರಾಪ್ತವಾಗುವುದಿಲ್ಲ.

ಮೇಲಿನ ಮಾತಿನಲ್ಲಿ ತುಲಸೀರಾಹಿತ್ಯದಿಂದ ಆಗುವ ಅನರ್ಥವನ್ನು ಹೇಳಿದರು. ಮತ್ತೊಂದು ಮಾತಿನಲ್ಲಿ ತುಲಸೀಸಾಹಿತ್ಯದಿಂದ ಆಗುವ ಲಾಭವನ್ನು ಈ ರೀತಿಯಾಗಿ ಹೇಳುತ್ತಿದ್ದಾರೆ-

**ತುಲಸೀಮಿಶ್ರಿತಂ ಚಾನ್ನಂ ಯೋ ದದ್ಯಾತ್ ಪ್ರಾಣಪಂಚಕೇ ।**
**ಸಿಕ್ಥೇ ಸಿಕ್ಥೇ ಭವೇತ್ತಸ್ಯ ಪುಣ್ಯಂ ಯಜ್ಞಶತಾಧಿಕಮ್ ॥**

ಪ್ರಾಣಪಂಚಕದಲ್ಲಿ, ಆಪೋಶನದಲ್ಲಿ ತುಲಸಿಯನ್ನು ಉಪಯೋಗಿಸುವುದು ಅತಿಪುಣ್ಯಕರವಾಗಿದೆ. ಸಾಮಾನ್ಯವಾದ ಪುಣ್ಯವಲ್ಲ. ನೂರುಯಜ್ಞಗಳನ್ನು

ಮಾಡುವುದರಿಂದ ಬರುವ ಪುಣ್ಯವು ಈ ಕಾರ್ಯದಿಂದ ಬರುತ್ತದೆ. ಒಂದೊಂದು ತುತ್ತಿಗೂ ಈ ಪುಣ್ಯವು ಬರುತ್ತದೆ. ಒಟ್ಟು ಐದು ಪ್ರಾಣಾಹುತಿಗಳಿಗೆ ಐದು ತುಲಸೀದಲಗಳನ್ನು ಉಪಯೋಗಿಸಿದಲ್ಲಿ ಐನೂರು ಯಜ್ಞಗಳನ್ನು ಮಾಡಿದಷ್ಟು ಪುಣ್ಯ ಪ್ರಾಪ್ತವಾಗುತ್ತದೆ. ಹೀಗಾಗಿ ಪ್ರಾಣಾಹುತಿಯಲ್ಲಿ ತುಲಸೀಸ್ವೀಕಾರವನ್ನು ಮರೆಯಬಾರದು.

**ಏಕಾದಶೀಯಂದು ತುಲಸೀಸ್ವೀಕಾರ ?**

ರುದ್ರದೇವರು ಪಾರ್ವತಿಗೆ ಹೇಳಿದ ವಿಷಯವಿದು. ಇದರಿಂದ ಶಿವ-ಪಾರ್ವತಿಯರು ಏಕಾದಶ್ಯುಪವಾಸವನ್ನು ನಿಯಮವಾಗಿ ಮಾಡುತ್ತಾರೆಂದೂ ಸಿದ್ಧವಾಗುತ್ತದೆ.

**ತುಲಸೀಮಿಶ್ರಿತಂ ತೋಯಮೇಕಾದಶ್ಯಾಂ ಕದಾಚನ ।**
**ನ ಗ್ರಾಹ್ಯಂ ವಿಷ್ಣುಭಕ್ತೈಸ್ತು ವ್ರತಂ ನಶ್ಯೇಚ್ಚ ಪಾರ್ವತಿ ॥**

ಏಕಾದಶಿಯ ದಿವಸ ತುಲಸೀಯಿಂದ ಯುಕ್ತವಾದ ತೀರ್ಥವನ್ನು ವೈಷ್ಣವರಾದವರು ಎಂದಿಗೂ ಸೇವಿಸಬಾರದು. ಮೋಹದಿಂದ ಸೇವಿಸಿದ್ದೇ ಆದರೆ ಏಕಾದಶೀವ್ರತವು ನಷ್ಟವಾಗುತ್ತದೆ. ಅರ್ಥಾತ್ ಏಕಾದಶ್ಯುಪವಾಸದ ಪುಣ್ಯವು ಅವರಿಗೆ ಪ್ರಾಪ್ತವಾಗುವುದಿಲ್ಲ.

**ಏಕಾದಶ್ಯಾಂ ತಿಥೌ ಪುಣ್ಯೇ ತುಲಸೀಂ ಭಕ್ಷಯಂತಿ ಯೇ ।**
**ತೇ ಯಾಂತಿ ನರಕಂ ಘೋರಂ ಮದ್ದ್ರೋಹೇಣ ನರಾಧಮಾಃ ॥**

ಪ್ರತಿನಿತ್ಯವೂ ತುಲಸಿಯನ್ನು ಭಕ್ಷಿಸಬೇಕೆಂದು ಈಗಾಗಲೇ ತಿಳಿದುಕೊಂಡಿದ್ದೇವೆ. ಈ ನಿಯಮ ಏಕಾದಶಿಯಲ್ಲೂ ಅನ್ವಯಿಸಿಕೊಳ್ಳಲು ಬರುವುದಿಲ್ಲ. ಅವತ್ತಿನ ದಿವಸ ತುಲಸೀಭಕ್ಷಣವನ್ನು ಸರ್ವಥಾ ಮಾಡಬಾರದು. ಸೇವಿಸಿದ್ದೇ ಆದರೇ ಆದು ಭಗವಂತನ ದ್ರೋಹವಾಗುತ್ತದೆ. ದೇವರ ದ್ರೋಹದಿಂದ ಅವರು ಘೋರವಾದ ನರಕವನ್ನು ಅನುಭವಿಸಬೇಕಾಗುತ್ತದೆ. ಆದ್ದರಿಂದ ಈ ವಿಷಯದಲ್ಲಿ ಜಾಗರೂಕರಾಗಿರಬೇಕು.

ಭರದ್ವಾಜಸಂಹಿತೆಯ ಮತ್ತೊಂದು ವಚನ ಹೀಗಿದೆ. ಪೂಜಾಕಲ್ಪಲತಾದಲ್ಲಿ ಈ ಪ್ರಮಾಣವನ್ನು ಉದಾಹರಿಸಿದ್ದಾರೆ-

**ವಿಷ್ಣುಪಾದೋದಕಂ ದಿವ್ಯಂ ತ್ರಿಃ ಪಿಬೇತ್ಸತತಂ ಬುಧಃ ।**
**ಏಕಾದಶ್ಯಾಮೇಕವಾರಂ ತೀರ್ಥಂ ತು ತುಲಸೀಂ ವಿನಾ ॥**

ಪ್ರತಿನಿತ್ಯವೂ ವಿಷ್ಣುಪಾದೋದಕವನ್ನು ತುಲಸೀಸಹಿತವಾಗಿ ಮೂರುಬಾರಿ ಸ್ವೀಕರಿಸಬೇಕು. ಏಕಾದಶಿಯಂದು ತೀರ್ಥವನ್ನು ಒಂದೇ ಬಾರಿ ಸ್ವೀಕರಿಸಬೇಕು. ತೀರ್ಥವನ್ನು ಸ್ವೀಕರಿಸುವಾಗ ತುಲಸಿಯನ್ನು ಸರ್ವಥಾ ಸ್ವೀಕರಿಸಬಾರದು.

**ತುಲಸೀಕಾಷ್ಠದ ಪ್ರತಿಮೆಗಳು**

ದೇವರ ಅರ್ಚನೆಗೆ ತುಲಸಿ ಬೇಕು. ಮಾಲೆಗೆ ತುಲಸೀಕಾಷ್ಠಬೇಕು. ಹೋಮಕ್ಕೆ, ದೀಪಕ್ಕೆ, ಧೂಪಕ್ಕೆ ತುಲಸೀಕಾಷ್ಠ ಬೇಕು. ಮತ್ತೊಂದು ವಿಶೇಷವೇನೆಂದರೆ ಪ್ರತಿಮೆಗಳಿಗೂ ತುಲಸೀಕಾಷ್ಠ ಬೇಕೆಂದು ನಾರದಪುರಾಣದ ಈ ವಚನವು ತಿಳಿಸುತ್ತದೆ-

**ರಾಮಂ ಕೃಷ್ಣಂ ಹಯಗ್ರೀವಂ ವಾಮನಂ ವಾ ವಿಶೇಷತಃ ।**
**ವಿಧಾಯ ತುಲಸೀಕಾಷ್ಠೈಃ ಪ್ರತಿಮಾಂ ರೂಪಕಾಮಿನಾ ॥**

**ಸೀತಾಂ ಭೂಮಿಂ ಮಹಾಲಕ್ಷ್ಮೀಂ ತುಲಸೀಂ ಭುವನೇಶ್ವರೀಮ್ ।**
**ದುರ್ಗಾದ್ಯಾ ದೇವತಾಶ್ಚಾಽಪಿ ತುಲಸೀಕಾಷ್ಠನಿರ್ಮಿತಾಃ ।**
**ಅರ್ಚಿತೇ ತು ಫಲಂ ವಕ್ತುಂ ನ ಜಾನೀತೇ ಪರಃ ಪುಮಾನ್ ॥**

ರಾಮ, ಕೃಷ್ಣ, ಹಯಗ್ರೀವ, ವಾಮನ, ಸೀತಾ ಭೂ, ಮಹಾಲಕ್ಷ್ಮೀ, ತುಲಸೀ, ಭುವನೇಶ್ವರೀ, ದುರ್ಗಾ ಮೊದಲಾದ ದೇವತೆಗಳ ಪ್ರತಿಮೆಗಳನ್ನು ತುಲಸೀಕಾಷ್ಠದಿಂದ ಸಿದ್ಧಪಡಿಸಬೇಕು. ಆ ಪ್ರತಿಮೆಗಳಲ್ಲಿ ದೇವತೆಗಳನ್ನು ಪೂಜಿಸಬೇಕು. ಇದರಿಂದ ಲಭ್ಯವಾಗುವ ಫಲವನ್ನು ಅಂದಾಜು ಮಾಡಲು ಬುದ್ಧಿವಂತನಿಂದಲೂ ಸಾಧ್ಯವಿಲ್ಲ. ಲೌಕಿಕವಾಗಿ ರೂಪ ಮೊದಲಾದ ಫಲಗಳು ಕೂಡಾ ಇದರಿಂದ ಲಭ್ಯವಾಗುತ್ತವೆ.

**ಮಾಲಾಧಾರಣೆ**

ತುಲಸೀಮಣಿಯ ಮಾಲೆಯನ್ನು ಧರಿಸುವುದು ಬೇರೆ. ಅದರ ವಿಚಾರವನ್ನು ಪ್ರಕೃತ ತಿಳಿಸುತ್ತಿಲ್ಲ. ಕಿಂತು ತುಲಸೀದಲಗಳ ಮಾಲೆಯ ಧಾರಣೆಯ ವಿಚಾರವನ್ನು ಈ ಮಾತು ತಿಳಿಸುತ್ತಿದೆ-

**ತುಲಸೀದಲಜಾಂ ಮಾಲಾಂ ಮಮೋತ್ತೀರ್ಣಾಂ ವಹೇತ್ತು ಯಃ ।**
**ಪತ್ರೇ ಪತ್ರೇಽಶ್ವಮೇಧಾನಾಂ ದಶಾನಾಂ ಲಭತೇ ಫಲಮ್ ॥**

ತುಲಸಿಯ ದಲಗಳಿಂದ ಮಾಲೆಯನ್ನು ರಚಿಸಬೇಕು. ಭಗವಂತನ ಕೊರಳಲ್ಲಿ ಅದನ್ನು ಹಾಕಬೇಕು. ಈ ನಿರ್ಮಾಲ್ಯವಾದ ತುಲಸೀದಲಮಾಲೆಯನ್ನು ಭಕ್ತಿಪೂರ್ವಕವಾಗಿ ಧರಿಸಬೇಕು. ಹೀಗೆ ಮಾಡುವುದರಿಂದ ಒಂದೊಂದು ಎಲೆಯ

ಧಾರಣೆಗಾಗಿ ಹತ್ತು ಹತ್ತು ಅಶ್ವಮೇಧಯಾಗಗಳ ಪುಣ್ಯವು ಆ ಭಕ್ತನಿಗೆ ಒದಗಿ ಬರುತ್ತದೆ.

**ತುಲಸೀಕಾಷ್ಠಮಾಲೆ ಧಾರಣೆ**

ಶಂಖಚಕ್ರಾದಿಗಳಿಂದ ದೀಕ್ಷಿತರಾಗುವ ವಿಧಾನವನ್ನು ಬ್ರಹ್ಮದೇವರು ಪರಮಾತ್ಮನಿಂದ ಉಪದೇಶಪಡೆದಿದ್ದಾರೆ. ನಂತರ ಮತ್ತೆ ತುಲಸೀಮಾಲೆಯ ವಿಷಯದಲ್ಲಿ ಪ್ರಶ್ನಿಸಿ ಅದರ ಮಹಿಮೆಯನ್ನೂ ದೇವರಿಂದ ತಿಳಿದಿದ್ದಾರೆ. ಆ ವಿಷಯಗಳು ಈ ರೀತಿಯಾಗಿವೆ-

**ತುಲಸೀಕಾಷ್ಠಜಾಂ ಮಾಲಾಂ ಕಂಠಸ್ಥಾಂ ವಹತೇ ತು ಯಃ ।**
**ಅಪ್ಯಶೌಚೋಽಪ್ಯನಾಚಾರೋ ಮಾಮೇವೈತಿ ನ ಸಂಶಯಃ ॥**

ತುಲಸೀಕಾಷ್ಠಗಳಿಂದ ನಿರ್ಮಿತವಾಗಿರುವ ಮಾಲೆಯನ್ನು ಕಂಠದಲ್ಲಿ ನಿತ್ಯವೂ ಧರಿಸಬೇಕು. ಅವನು ಅಶುಚಿಯಾಗಿದ್ದರೂ ಅನಾಚಾರಿಯಾಗಿದ್ದರೂ ನನ್ನ ಭಕ್ತನಾಗಿದ್ದಲ್ಲಿ ನನ್ನನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಸಂದೇಹವಿರುವುದಿಲ್ಲ. ಹಾಗೆಂದು ತುಲಸೀಮಾಲೆಯನ್ನು ಧರಿಸಿ ಅನಾಚಾರಗಳನ್ನು ಮಾಡಬೇಕೆಂದು ತಾತ್ಪರ್ಯವಲ್ಲ. ಆಕಸ್ಮಿಕವಾಗಿ ಘಟಿಸಿದ ಅನಾಚಾರಗಳನ್ನು ದೇವರು ದೂರಮಾಡುತ್ತಾನೆಂದು ತಾತ್ಪರ್ಯ.

ತುಲಸೀಮಾಲೆಯನ್ನು ಯಾವಾಗಲೂ ಧರಿಸಬೇಕು. ತುಲಸಿಯು ನಮ್ಮೆಲ್ಲರ ತಾಯಿ. ತಾಯಿಯ ಸನ್ನಿಧಾನದಲ್ಲಿ ಯಾವ ಮಗು ಪಾಪವನ್ನು ಮಾಡಲು ಬಯಸುತ್ತಾನೆ. ಹಾಗೆ ತುಲಸೀಮಾಲೆಯ ಸನ್ನಿಧಿಯಲ್ಲಿ ಮನುಷ್ಯ ಉದ್ದೇಶಪೂರ್ವಕ-ವಾಗಿ ಯಾವ ಪಾಪಗಳನ್ನೂ ಮಾಡುವುದಿಲ್ಲ ಎಂದು ತಾತ್ಪರ್ಯ. ಆದ್ದರಿಂದ ತುಲಸೀಮಾಲೆಯನ್ನು ಧರಿಸಿದ್ದೇನೆ ಎಂಬ ಎಚ್ಚರ ಯಾವಾಗಲೂ ಇರಬೇಕು.

**ಧಾತ್ರೀಫಲಕೃತಾ ಮಾಲಾ ತುಲಸೀಕಾಷ್ಠಸಂಭವಾ ।**
**ದೃಶ್ಯತೇ ಯಸ್ಯ ದೇಹೇ ತು ಸ ವೈ ಭಾಗವತೋ ನರಃ ॥**

ಧಾತ್ರೀಫಲಗಳಿಂದ ರಚಿತವಾಗಿರುವ ಮಾಲೆ ಮತ್ತು ತುಲಸೀಮಾಲೆಯು ಯಾವನ ದೇಹದಲ್ಲಿ ಕಂಗೊಳಿಸುತ್ತದೋ ಅವನು ಭಾಗವತನೆಂದು ತಿಳಿಯಬೇಕು. ಹೀಗಾಗಿ ಭಾಗವತರು ಅವಶ್ಯವಾಗಿ ಈ ಮಾಲೆಗಳನ್ನು ಧರಿಸಬೇಕು.

**ಮೌಕ್ತಿಕಂ ಚ ಪ್ರವಾಲಂ ಚ ಪದ್ಮಾಕ್ಷಂ ತುಲಸೀಮಣಿಮ್ ।**
**ಜಪಪೂಜನವೇಲಾಯಾಂ ಧಾರಿತೋ ಯಸ್ಸದೈವಿಕಃ ॥**

ಜಪಮಾಡುವಾಗ, ಪೂಜೆಮಾಡುವಾಗ, ಹೋಮಾದಿಸತ್ಕರ್ಮಗಳನ್ನು ಮಾಡುವಾಗ ಮುತ್ತಿನ ಮಾಲೆಯನ್ನು ಧರಿಸಬೇಕು. ಹವಳದ ಮಾಲೆಯನ್ನು ಧರಿಸಬೇಕು. ಕಮಲಾಕ್ಷಮಾಲೆಯನ್ನು ಧರಿಸಬೇಕು. ತುಲಸೀಮಾಲೆಯನ್ನು ಧರಿಸಬೇಕು. ಮುಕ್ತಾದಿಮಾಲೆಗಳಿಲ್ಲದಿದ್ದರೂ ಅಡ್ಡಿಯಿಲ್ಲ. ಕಡ್ಡಾಯವಾಗಿ ತುಲಸೀಮಾಲೆಯನ್ನು ಧರಿಸಬೇಕು. ಅವನು ಮಾಡಿದ ಕರ್ಮಗಳೆಲ್ಲ ಸಾಂಗವಾಗುತ್ತವೆ. ಫಲಪ್ರದವಾಗುತ್ತವೆ.

**ತುಲಸೀಕಾಷ್ಠಜಾಂ ಮಾಲಾಂ ಧರ್ಮಕಾಮಾರ್ಥಮೀಪ್ಸುಭಿಃ ।**
**ಧಾರ್ಯಾ ಪುಣ್ಯಾರ್ಥಕಾರ್ಯೇಷು ಹೋಮಾರ್ಚಾಜಪಕರ್ಮಣಿ ॥ -ಸ್ಕಂ.ಪು**

ಧರ್ಮಾರ್ಥಕಾಮಗಳು ಎಲ್ಲ ಪುರುಷರಿಂದ ಪ್ರಾರ್ಥ್ಯಮಾನವಾಗಿವೆ. ಅವುಗಳನ್ನು ಪಡೆಯಲೆಂದೇ ಹೋಮ, ಅರ್ಚನೆ, ಜಪ ಮುಂತಾದ ಪುಣ್ಯಕರ್ಮಗಳನ್ನು ಎಲ್ಲ ಪುರುಷರೂ ಮಾಡುತ್ತಾರೆ. ಆ ಪುಣ್ಯಕರ್ಮದಿಂದ ಪುರುಷಾರ್ಥಗಳು ಸಿದ್ಧಿಸಬೇಕಾದರೆ ಕಡ್ಡಾಯವಾಗಿ ತುಲಸೀಮಾಲೆಯನ್ನು ಧರಿಸಬೇಕು.

**ಯಥೈವ ಪೂಜನಂ ವಿಷ್ಣೋಃ ಯಥೈವಾತಿಥಿಪೂಜನಮ್ ।**
**ತಥೈವ ತುಲಸೀಕಾಷ್ಠಧಾರಣಂ ಪುಣ್ಯಕಾರಣಮ್ ॥ -ಶಾಂ.ಸಂ.ಹಿ.೭೧**

ಭಗವಂತ ಸರ್ವೋತ್ತಮ. ಅವನ ಪೂಜೆ ಪರಮಪುಣ್ಯಕರ. ಬಂದ ಅತಿಥಿಗಳಲ್ಲಿ ಅತಿಥಿನಾಮಕನಾಗಿ ದೇವರು ಇರುತ್ತಾನೆ. ಹೀಗಾಗಿ ಅತಿಥಿಯ ಪೂಜೆಯೂ ಪುಣ್ಯಪ್ರದ. ಹಾಗೆಯೇ ತುಲಸೀಕಾಷ್ಠಮಾಲೆಯನ್ನು ಧರಿಸುವುದು ಕೂಡಾ ಪುಣ್ಯಪ್ರದವಾಗಿದೆ. ತುಲಸೀಕಾಷ್ಠದಲ್ಲಿ ದೇವತೆಗಳು ಸನ್ನಿಹಿತರಾಗಿರುತ್ತಾರೆ. ಸ್ವಯಂ ಪರಮಾತ್ಮನೇ ಅಲ್ಲಿ ಸನ್ನಿಹಿತನಾಗಿರುತ್ತಾನೆ.

**ಮಾಲೆ ಮಲಿನವಾದಾಗ**

**ತ್ರುಟಿತಾಂ ಮಲಸಂದಿಗ್ಧಾಂ ಲಿಪ್ತಾಂ ವಾಽಶುಚಿವಸ್ತುಭಿಃ ।**
**ವಿಮಲೀಕೃತ್ಯ ಸಂಧಾರ್ಯಾ ತದನ್ಯಾ ವಾಽಪಿ ತತ್ಕ್ಷಣೇ ॥ -ಶಾಂ.ಸಂ.ಹಿ.೫೪**

ತುಲಸೀಮಾಲೆಯು ಹರಿದಾಗ, ಮಲಿನವಾಗಿದೆ ಎಂದು ಸಂದೇಹ ಬಂದಾಗ, ಅಶುದ್ಧವಾದ ಪದಾರ್ಥಗಳ ಸಂಪರ್ಕದಿಂದ ಸ್ವಯಂ ಮಲಿನವಾದಾಗ ಆ ತುಲಸೀಮಾಲೆಯನ್ನು ಶುದ್ಧಮಾಡಿ ಮತ್ತೆ ಧರಿಸಬೇಕು. ಅಥವಾ ಆ ಕ್ಷಣದಲ್ಲಿಯೇ ಮತ್ತೊಂದು ಮಾಲೆಯನ್ನು ಧರಿಸಬೇಕು. ಮಲಿನವಾದ ಮಾಲೆಯನ್ನು ಶುದ್ಧವಾದ ಪ್ರದೇಶದಲ್ಲಿ ವಿಸರ್ಜಿಸಬೇಕು.

**ಯಾವಾಗಲೂ ಧರಿಸಬೇಕು**

**ಶಯನೇ ಭೋಜನೇ ಚೈವ ಮಲಮೂತ್ರವಿಸರ್ಜನೇ ।**
**ನ ತ್ಯಜೇತ್ತುಲಸೀಮಾಲಾಂ ತ್ಯಾಗೇ ಚ ಬ್ರಹ್ಮಹಾ ಭವೇತ್ ॥**

ತುಲಸೀಮಾಲೆಯನ್ನು ಯಾವ ಕಾರಣಕ್ಕಾಗಿಯೂ ತೆಗೆದು ಇಡಬಾರದು. ಮಲಗುವಾಗ, ಊಟಮಾಡುವಾಗ, ಮಲ-ಮೂತ್ರವಿಸರ್ಜನೆ ಮಾಡುವಾಗಲೂ ತುಲಸಿಯನ್ನು ಪರಿತ್ಯಜಿಸಬಾರದು. ತುಲಸಿಯ ಪರಿತ್ಯಾಗ ಬ್ರಹ್ಮಹತ್ಯೆಗೆ ಸಮವೆಂದು ಈ ವಚನವು ನಮಗೆ ತಿಳಿಸುತ್ತದೆ. ಮಾಲೆಯನ್ನು ಪರಿತ್ಯಜಿಸಬಾರದೆಂದು ತಾತ್ಪರ್ಯ.

ಇಲ್ಲಿ ಸಾಂಪ್ರದಾಯಿಕವಾಗಿ ಬಂದಿರುವ ವಿಷಯವನ್ನು ಈ ರೀತಿಯಾಗಿ ತಿಳಿಯಬೇಕು. ಎರಡು ತುಲಸೀಮಾಲೆಯನ್ನು ಮಾಡಿಕೊಳ್ಳಬೇಕು. ಯಾವಾಗಲೂ ಹಾಕಿಕೊಳ್ಳುವ ತುಲಸೀಮಾಲೆ ಒಂದು ಇರಬೇಕು. ದೇವರ ಪೂಜೆಯಲ್ಲಿ ಧರಿಸಲು ಮತ್ತೊಂದು ತುಲಸೀಮಾಲೆ ಇರಬೇಕು. ಪೂಜೆಯ ಸಂದರ್ಭದಲ್ಲಿ ಮಾತ್ರ ಅದನ್ನು ಧರಿಸಬೇಕು. ಪೂಜೆಯಾದ ನಂತರ ಅದನ್ನು ತೆಗೆದಿಡಬೇಕು. ಮತ್ತೊಂದನ್ನು ಮಾತ್ರ ಎಂದಿಗೂ ಪರಿತ್ಯಜಿಸಬಾರದು.

ಇದೇ ವಿಷಯವನ್ನು ಪ್ರಸಂಗವಿಶೇಷಗಳಿಂದ ಸಹಿತವಾಗಿ ತಿಳಿಸುವ ಮತ್ತೊಂದು ವಚನ-

**ಸ್ನಾನೇ ಮೂತ್ರಪುರೀಷೇ ಚ ಮೈಥುನೇ ಪಾಪಕರ್ಮಸು ।**
**ನ ತ್ಯಜೇತ್ತುಲಸೀಮಾಲಾಂ ತ್ಯಾಗೇ ಚ ಬ್ರಹ್ಮಹಾ ಭವೇತ್ ॥**

**ಯಜ್ಞೋಪವೀತವದ್ಧಾರ್ಯಾ ಕಂಠೇ ತುಲಸಿಮಾಲಿಕಾ ।**
**ಕ್ಷಣಮಾತ್ರಪರಿತ್ಯಾಗಾತ್ ವಿಷ್ಣುದ್ರೋಹೀ ಭವೇನ್ನರಃ ॥**

ಸ್ನಾನಮಾಡುವಾಗ, ಮೂತ್ರ-ಪುರೀಷವಿಸರ್ಜನೆ ಮಾಡುವಾಗ, ಮೈಥುನಕಾಲದಲ್ಲಿ, ಯಾವುದೇ ಕರ್ಮಗಳನ್ನು ಮಾಡುವಾಗ ತುಲಸೀಮಾಲೆಯನ್ನು ಸರ್ವಥಾ ಪರಿತ್ಯಜಿಸಬಾರದು.

ಯಜ್ಞೋಪವೀತವು ಹೇಗೆ ನಿತ್ಯವೂ ಧಾರ್ಯವೋ ಹಾಗೆ ತುಲಸೀಮಾಲೆಯೂ ನಿತ್ಯವೂ ಧಾರ್ಯವಾಗಿದೆ. ಒಂದು ಕ್ಷಣಕಾಲವೂ ತುಲಸಿಯನ್ನು ಪರಿತ್ಯಜಿಸಬಾರದು.

**ತುಲಸೀಮಾಲಾ ದಾನ**

**ಯೋ ದದ್ಯಾತ್ತುಲಸೀಕಾಷ್ಠಂ ವಿಪ್ರಾಯ ಹರಿಸೇವಿನೇ ।**
**ಬ್ರಹ್ಮಾಂಡಶತಕೋಟೀನಾಂ ದಾನಸ್ಯ ಫಲಮಶ್ನುತೇ ॥ -ಶಾಂ.ಸಂ.೩.೭೨**

ತುಲಸೀಮಾಲೆಯನ್ನು ದಾನಮಾಡಬೇಕು. ಹಾಗಂತ ಕಂಡವರಿಗೆಲ್ಲ ದಾನಮಾಡಬಾರದು. ಶ್ರೀಹರಿಯನ್ನು ನಿತ್ಯವೂ ಸೇವಿಸುವ ಭಕ್ತರಿಗೆ ದಾನಮಾಡಬೇಕು. ಇದರಿಂದ ಕೋಟಿಬ್ರಹ್ಮಾಂಡಗಳನ್ನು ದಾನಮಾಡಿದ ಪುಣ್ಯವು ಬರುತ್ತದೆ. ಈ ದಾನದಿಂದ ಅತಿಶಯವಾದ ಪುಣ್ಯವು ಬರುತ್ತದೆಂದು ಭಾವ.

**ತುಲಸೀಕಾಷ್ಠಮಾಲಾಂ ಯೋ ದದ್ಯಾದ್ಧೇಮ್ನಾಽಪಿ ಸಂಯುತಾಮ್ ।**
**ಲಕ್ಷ್ಮೀನಾರಾಯಣಂ ದೇವಂ ಸ ಕರೋತಿ ವಶಂ ಧ್ರುವಮ್ ॥ -ಶಾಂ.ಸಂ.೩.೭೩**

ಬಂಗಾರದ ತಂತಿಗಳಿಂದ ತುಲಸೀಮಾಲೆಯನ್ನು ಸಿದ್ಧಪಡಿಸಬೇಕು. ಇಂತಹ ಮಾಲೆಯನ್ನು ಬ್ರಾಹ್ಮಣರಿಗೆ ದಾನವಾಗಿ ನೀಡಬೇಕು. ಇದರಿಂದ ಶ್ರೀಹರಿಯು ಬೇಗನೇ ಒಲಿಯುತ್ತಾನೆ. ಎಲ್ಲ ವಿಧವಾದ ಕಾಮನೆಗಳನ್ನು ಪೂರ್ಣ ಮಾಡುತ್ತಾನೆ.

**ತುಲಸ್ಯಾಂ ವಸತೇ ವಿಷ್ಣುಃ ಕನಕೇ ತು ರಮೇಶ್ವರೀ ।**
**ತಸ್ಮಾತ್ಸುವರ್ಣಸಂಯುಕ್ತಾ ಮಾಲಿಕಾ ಸರ್ವಕಾಮದಾ ॥- ಶಾಂ.ಸಂ.೩.೭೬**

ಶ್ರೀಹರಿಯ ಪ್ರೀತಿ ಸುಮ್ಮನೆ ಆಗುವುದಿಲ್ಲ. ತುಲಸಿಯಲ್ಲಿ ಸಾಕ್ಷಾತ್ ಪರಮಾತ್ಮ ಸನ್ನಿಹಿತನಾಗಿರುತ್ತಾನೆ. ರಮಾದೇವಿಯ ಆವಾಸವೂ ತುಲಸಿಯಲ್ಲಿದೆ. ಅಲ್ಲದೇ ಬಂಗಾರದಲ್ಲಿ ಸರ್ವಸಮರ್ಥಳಾದ ಲಕ್ಷ್ಮೀದೇವಿಯು ಸನ್ನಿಹಿತಳಾಗಿರುತ್ತಾಳೆ. ಹೀಗಾಗಿ ಸ್ವರ್ಣಯುಕ್ತವಾದ ತುಲಸೀಮಾಲೆಯನ್ನು ದಾನಮಾಡುವುದರಿಂದ ಎಲ್ಲ ಕಾಮನೆಗಳೂ ಪರಿಪೂರ್ಣವಾಗುತ್ತವೆ.

**ತುಲಸೀಮಾಲೆ ಕಟ್ಟಿಗೆಯಲ್ಲ**

**ತುಲಸೀಕಾಷ್ಠಮಾಲಾ ತು ಭಕ್ತಿರೂಪಾ ನ ಕಾಷ್ಠಜಾ ॥ -ಶಾಂ.ಸಂ.೩.೧೫**

ತುಲಸೀಮಾಲೆಯನ್ನು ಕಟ್ಟಿಗೆ ಎಂದು ವ್ಯವಹರಿಸಬಾರದು. ಅದು ವ್ಯಾವಹಾರಿಕವಾಗಿ ಕಟ್ಟಿಗೆಯಾದರೂ ಅದು ಭಕ್ತಿರೂಪವಾಗಿದೆ. ಭಕ್ತಿಯ ಚಿಹ್ನೆಯಾಗಿದೆ. ತುಲಸೀಮಾಲೆಯನ್ನು ಧರಿಸುವುದು ಭಕ್ತಿಗೆ ಸೂಚಕವಾಗಿದೆ. ಆದ್ದರಿಂದ ಕಟ್ಟಿಗೆ ಎಂಬ ದೃಷ್ಟಿಯನ್ನು ಸರ್ವಥಾ ಪರಿತ್ಯಜಿಸಬೇಕು. ಅದನ್ನು ಸರ್ವಥಾ ಕೆಳಗೆ ಇಡಬಾರದು.

**ಮಾಲೆಯಲ್ಲಿ ಮಣಿಗಳ ಸಂಖ್ಯೆ**

ತುಲಸೀಮಾಲೆಯನ್ನು ನಿರ್ಮಿಸಬೇಕಾದರೆ ಹೇಗೆಂದರೆ ಹಾಗೆ ಪೋಣಿಸಬಾರದು. ಅದಕ್ಕೆ ಮಣಿಗಳ ನಿಯಮವನ್ನು ಶಾಂಡಿಲ್ಯಸಂಹಿತಾದಲ್ಲಿಯ ಈ ಮಾತು ತಿಳಿಸುತ್ತದೆ-

**ದ್ವಾದಶೈಃ ಸಪ್ತವಿಂಶತ್ಯಾ ಚತುರ್ಭಿಶ್ಚ ಶತಾರ್ಧಕೈಃ ।**
**ಅಷ್ಟೋತ್ತರಶತೈರ್ಮಾಲಾ ಮಣಿಕೈರ್ವಿಜಯೇ ಮತಾ ॥೩.೮೦॥**

ಹನ್ನೆರಡು, ಇಪ್ಪತ್ತೇಳು, ಐವತ್ತುನಾಲ್ಕು, ನೂರ ಎಂಟು ಮಣಿಗಳಿಂದ ಮಾಲೆಯನ್ನು ರಚಿಸಬೇಕು. ಇಂತಹ ಮಾಲೆ ವಿಜಯಮಾಲೆಯಾಗುತ್ತದೆ ಈ ಮಾಲೆಯನ್ನು ಧರಿಸಿದವರು ಎಲ್ಲ ಕಾರ್ಯಗಳಲ್ಲಿ ವಿಜಯವಂತರಾಗುತ್ತಾರೆ.

**ಮಾಲೆಯನ್ನು ದೇವರಿಗೆ ಸಮರ್ಪಿಸಬೇಕು**

**ನಿವೇದ್ಯ ಭಕ್ತ್ಯಾ ಮೇ ಮಾಲಾಂ ತುಲಸೀಕಾಷ್ಠಸಂಭವಾಮ್ ।**
**ವಹತೇ ಯೋ ನರೋ ಭಕ್ತ್ಯಾ ತಸ್ಯ ವೈ ನಾಽಸ್ತಿ ಪಾತಕಮ್ ॥**

ತುಲಸೀಕಾಷ್ಠದ ಮಾಲೆಯನ್ನು ಧರಿಸುವಾಗಲೂ ಅದನ್ನು ಭಗವಂತನಿಗೆ ಭಕ್ತಿಯಿಂದ ಸಮರ್ಪಿಸಬೇಕು. ನಂತರ ಸ್ವಯಂ ತಾನು ಭಕ್ತಿಯುಕ್ತನಾಗಿ ಆ ಮಾಲೆಯನ್ನು ಧರಿಸಬೇಕು. ಹೀಗೆ ತುಲಸೀಮಾಲೆಯನ್ನು ಧರಿಸಿ ಸತ್ಕರ್ಮಗಳನ್ನು ಆಚರಿಸುವುದರಿಂದ ಪಾತಕಗಳು ಅವನನ್ನು ಕಾಡುವುದಿಲ್ಲ. ಅಲ್ಲದೇ ತುಲಸೀಮಾಲೆಯನ್ನು ಮಾಡಿದಾಗ ಅದನ್ನು ಧರಿಸುವುದಕ್ಕಿಂತಲೂ ಮುಂಚೆ ಹೋಮವನ್ನು ಮಾಡಬೇಕು. ಹೋಮವನ್ನು ಮಾಡಿ ದೇವರಿಗೆ ಸಮರ್ಪಿಸಿ ನಂತರ ತಾನು ಧರಿಸಬೇಕು.

**ಸದಾ ಪ್ರೀತಮನಾಸ್ತಸ್ಯ ವತ್ಸ ಪ್ರಾಣತರೋ ಹಿ ಸಃ ।**
**ತುಲಸೀಕಾಷ್ಠಸಂಭೂತಾಂ ಯೋ ಮಾಲಾಂ ವಹತೇ ನರಃ ।**
**ಪ್ರಾಯಶ್ಚಿತ್ತಂ ನ ತಸ್ಯಾಽಸ್ತಿ ನಾಽಶೌಚಂ ತಸ್ಯ ವಿದ್ಯತೇ ॥**

ಯಾವ ವ್ಯಕ್ತಿಯು ತುಲಸೀಮಾಲೆಯನ್ನು ಧರಿಸುತ್ತಾನೋ ಅವನು ಭಗವಂತನಿಗೆ ಪ್ರಿಯನಾಗುತ್ತಾನೆ. ಕರುವಿನ ಮೇಲೆ ಆಕಳು ತನ್ನ ಪ್ರಾಣವನ್ನೇ ಇಟ್ಟಿರುತ್ತದೆ. ಆ ರೀತಿಯಲ್ಲಿ ತುಲಸೀಮಾಲೆಯನ್ನು ಧರಿಸಿದ ತನ್ನ ಭಕ್ತನನ್ನು ಪ್ರೀತಿಸುತ್ತಾನೆ. ಮತ್ತು ಅವನು ಮಾಡಿದ ಸಣ್ಣ-ಪುಟ್ಟ ಪಾಪಗಳಿಗೆಲ್ಲ ತುಲಸೀಮಾಲಧಾರಣೆಯು ಪ್ರಾಯಶ್ಚಿತ್ತರೂಪವಾಗಿರುತ್ತದೆ. ಅವನು ಸಣ್ಣಕಾರಣಗಳಿಗಾಗಿ ಅಶುದ್ಧನಾಗುವುದಿಲ್ಲ

**ಕಂಠದಲ್ಲಿ ಮಾತ್ರವಲ್ಲ**

ಸಾಮಾನ್ಯವಾಗಿ ತುಲಸೀಮಾಲೆಯನ್ನು ಕಂಠದಲ್ಲಿಯೇ ನಾವೆಲ್ಲರೂ ಧರಿಸುತ್ತೇವೆ. ಅದು ಮಾತ್ರವಲ್ಲ ಮತ್ತಿಷ್ಟು ಕಡೆಗೂ ತುಲಸೀಮಾಲೆಯನ್ನು ಧರಿಸಬೇಕೆಂದು ಈ ವಚನವು ತಿಳಿಸುತ್ತದೆ-

**ತುಲಸೀಕಾಷ್ಠಸಂಭೂತಂ ಶಿರೋಬಾಹುವಿಭೂಷಣಮ್ ।**
**ಬಾಹ್ವೋಃ ಕರೇ ಚ ಮರ್ತ್ಯಸ್ಯ ದೇಹೇ ಯಸ್ಯ ಸ ಮೇ ತನುಃ ॥**

ತುಲಸೀಕಾಷ್ಠದಿಂದ ನಿರ್ಮಿತವಾಗಿರುವ ಮಾಲೆಯನ್ನು ಕೇವಲ ಕಂಠದಲ್ಲಿ ಮಾತ್ರ ಧರಿಸುವುದಲ್ಲ. ಕಿಂತು ಜಟೆಯನ್ನು ಕಟ್ಟಿಕೊಂಡು ತಲೆಯ ಮೇಲೆ ಕೂಡಾ ಧರಿಸಬೇಕು. ಎರಡು ಬಾಹುಗಳಲ್ಲಿ ಮತ್ತು ಮುಂಗೈಯಲ್ಲಿಯೂ ತುಲಸೀಮಾಲೆಯನ್ನು ಧರಿಸಬೇಕು. ಅವನಲ್ಲಿ ಪರಮಾತ್ಮ ನೆಲೆಸುತ್ತಾನೆ.

ಈ ರೀತಿಯಾಗಿ ತುಲಸೀಮಾಲೆಯನ್ನು ಧರಿಸಿದ ಋಷಿಗಳ ಚಿತ್ರಗಳು ಸಾಕಷ್ಟು ಕಡೆಗೆ ನೋಡಲು ಸಿಗುತ್ತವೆ.

**ಮಾಲೆಯನ್ನು ಧರಿಸುವ ಕ್ರಮ**

ಮಾಲೆಯನ್ನು ಕೊಳ್ಳುತ್ತೇವೆ. ಕೊರಳಲ್ಲಿ ಹಾಕಿಕೊಳ್ಳುತ್ತೇವೆ. ಜಪಿಸಲು ಉಪಯೋಗಿಸುತ್ತೇವೆ. ಹೀಗೆ ಸುಮ್ಮನೇ ಮಾಲೆಯನ್ನು ಉಪಯೋಗಿಸುವುದು ಯೋಗ್ಯವಲ್ಲ. ಮಾಲೆಯನ್ನು ಉಪಯೋಗಿಸುವುದಕ್ಕೂ ಮೊದಲು ಮಾಡಬೇಕಾದ ವಿಧಾನಗಳನ್ನು ಈ ವಚನಗಳು ತಿಳಿಸುತ್ತವೆ-

**ಕ್ಷಾಲಿತಾಂ ಪಂಚಗವ್ಯೇನ ಮೂಲಮಂತ್ರೇಣ ಮಂತ್ರಿತಾಮ್ ।**
**ಗಾಯತ್ರ್ಯಾ ಚಾಷ್ಟಕೃತ್ವೋ ವೈ ಮಂತ್ರಿತಾಂ ಧೂಪಯೇಚ್ಚ ತಾಮ್ ॥**
**ವಿಧಿವತ್ಪರಯಾ ಭಕ್ತ್ಯಾ ಸದ್ಯೋಜಾತೇನ ಪೂಜಯೇತ್ ॥ -ಸ್ಕಂ.ಪು**

ಸಿದ್ಧವಾದ ತುಲಸೀಮಾಲೆಯನ್ನು ಮೊದಲು ಪಂಚಗವ್ಯದಿಂದ ತೊಳೆಯಬೇಕು. ನೂರಎಂಟು ಬಾರಿ ನಾರಾಯಣಾಷ್ಟಾಕ್ಷರಮಂತ್ರದಿಂದ, ಎಂಟು ಬಾರಿ ಗಾಯತ್ರೀಮಂತ್ರದಿಂದ ಅಭಿಮಂತ್ರಿಸಬೇಕು. ನಂತರ ಅದಕ್ಕೆ ಧೂಪ-ದೀಪಾದಿ ಉಪಚಾರಗಳನ್ನು ಸಮರ್ಪಿಸಬೇಕು. ''ಸದ್ಯೋ ಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮೋ ನಮಃ'' ಎಂಬ ತೈತ್ತರೀಯೋಪನಿಷತ್ತಿನ ಮಂತ್ರವನ್ನು ಪಠಿಸುತ್ತಾ ಪೂಜಿಸಬೇಕು.

**ಸನ್ನಿವೈದ್ಯೈವ ಹರಯೇ ತುಲಸೀಕಾಷ್ಠಸಂಭವಾಮ್ ।**
**ಮಾಲಾಂ ಪಶ್ಚಾತ್ ಸ್ವಯಂ ಧತ್ತೇ ಸ ವೈ ಭಾಗವತೋತ್ತಮಃ ॥ -ಸ್ಕಂ.ಪು**

ಹೀಗೆ ತುಲಸೀಮಾಲೆಯ ಪೂಜೆಯನ್ನು ಮಾಡಿದ ಮೇಲೆ ಸ್ವಯಂ ಭಗವಂತನಿಗೆ ಆ ಮಾಲೆಯನ್ನು ಸಮರ್ಪಿಸಬೇಕು. ನಂತರ ಮಾಲೆಯನ್ನು ಧರಿಸಬೇಕು. ಅಂಥವನು ಉತ್ತಮ ಭಗವದ್ಭಕ್ತನಾಗುತ್ತಾನೆ. ಅವನಲ್ಲಿಯ ಭಗವದ್ಭಕ್ತಿಯು ಬೆಳೆಯುತ್ತದೆ.

**ಹರಯೇ ನಾರ್ಪಯೇದ್ಯಸ್ತು ತುಲಸೀಕಾಷ್ಠಸಂಭವಾಮ್ ।**
**ಮಾಲಾಂ ಧತ್ತೇ ಸ್ವಯಂ ಮೂಢಃ ಸ ಯಾತಿ ನರಕಂ ಧ್ರುವಮ್ ॥ -ಸ್ಕಂ.ಪು**

ದೇವರಿಗೆ ಸಮರ್ಪಿಸದೇ ಮಾಲೆಯನ್ನು ಧರಿಸುವುದು ನಿಷಿದ್ಧವಾಗಿದೆ. ಹಾಗೆ ಮಾಡಿದಲ್ಲಿ ಅವನಿಗೆ ನರಕಾದ್ಯನರ್ಥವಾಗುತ್ತದೆ. ತುಲಸಿಯ ಉತ್ಪತ್ತಿಯಾದದ್ದೇ ದೇವರ ಸೇವೆಗಾಗಿ. ಅಂತಹ ತುಲಸಿಯನ್ನು ದೇವರಿಗೆ ಸಮರ್ಪಿಸದಿದ್ದಲ್ಲಿ ಈ ವಿಧವಾದ ಶಿಕ್ಷೆಯಾಗುವುದು ನಿಶ್ಚಿತ. ಆದ್ದರಿಂದ ಈ ವಿಷಯದಲ್ಲಿ ಜಾಗರೂಕರಾಗಿ ಇರಬೇಕು.

**ಯೇ ಕಂಠಲಗ್ನತುಲಸೀನಲಿನಾಕ್ಷಮಾಲಾಃ**
**ಯೇ ಬಾಹುಮೂಲಪರಿಚಿಹ್ನಿತಶಂಖಚಕ್ರಾಃ ।**
**ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಃ**
**ತೇ ವೈಷ್ಣವಾ ಭುವನಮಾಶು ಪವಿತ್ರಯಂತಿ ॥**

ಹೋಮ ಮಾಡಿ ಧಾರಣೆ ಮಾಡುವುದಂತೂ ಮತ್ತಿಷ್ಟು ಪ್ರಶಸ್ತವಾದ ವಿಧಾನವಾಗಿದೆ.

**ಮಾಲಾಧಾರಣ ಮಂತ್ರಗಳು**

ಕೆಲವರು ಅಲಂಕಾರ ಅಂತಲೇ ತುಲಸೀಮಾಲೆ-ಗಂಧ ಇತ್ಯಾದಿಗಳನ್ನು ಧರಿಸುತ್ತಾರೆ. ಈ ಭಾವನೆ ಸರಿಯಾದುದಲ್ಲ. ತುಲಸೀಮಾಲೆ, ಗಂಧಾದಿ-ಧಾರಣೆಗಳಿಂದ ಮನುಷ್ಯನಲ್ಲಿಯ ದೋಷಗಳೆಲ್ಲ ದೂರವಾಗುತ್ತವೆ. ಇದನ್ನು ತಿಳಿಸುವ ವಚನವಿದು-

**ಯಾನಿ ಕಾನಿ ಚ ಮಾಲ್ಯಾನಿ ಯತ್ಕಿಂಚಿದನುಲೇಪನಮ್ ।**
**ಅಲಕ್ಷ್ಮೀಪರಿಹಾರಾಯ ನಿತ್ಯಂ ಸೇವೇತ ವೈ ಬುಧಃ ॥**

ಮಾಲೆಗಳನ್ನು ಮತ್ತು ಗಂಧಾದ್ಯನುಲೇಪನಗಳನ್ನು ಧರಿಸುವುದರಿಂದ ಅಲಕ್ಷ್ಮಿಯ ಪರಿಹಾರವಾಗುತ್ತದೆ. ಪಾಪಗಳು, ದೋಷಗಳು, ದಾರಿದ್ರ್ಯ, ಕಲಹ ಇತ್ಯಾದಿಗಳೆಲ್ಲ ಅಲಕ್ಷ್ಮಿಯೇ. ತುಲಸೀಮಾಲೆಯ ಧಾರಣೆಯಿಂದ ಈ ಎಲ್ಲ ತರಹದ ಅಶುಭಗಳು ದೂರವಾಗುತ್ತವೆ. ಆದ್ದರಿಂದ ಜ್ಞಾನಿಯಾದವನು, ಜ್ಞಾನವನ್ನು ಬಯಸುವವನು ನಿತ್ಯವೂ ತುಲಸೀಮಾಲೆಯನ್ನು ಧರಿಸಬೇಕು. ಮತ್ತು ಗಂಧಾದ್ಯನುಲೇಪನಗಳನ್ನು ಮಾಡಿಕೊಳ್ಳಬೇಕು.

ತುಲಸೀಮಾಲೆಯನ್ನು ಧರಿಸಲು ಒಂದು ಕ್ರಮವಿದೆ. ಪಂಚಾಮೃತಾದಿಗಳಿಂದ ಮಾಲೆಯನ್ನು ಅರ್ಚಿಸಬೇಕು. ನಂತರ ಅದನ್ನು ಭಗವಂತನಿಗೆ ಸಮರ್ಪಿಸಬೇಕು. ಆಮೇಲೆ ಆ ಮಾಲೆಯನ್ನು ಧರಿಸಬೇಕು. ಈ ವಿಷಯಗಳನ್ನೆಲ್ಲ ತಿಳಿದಿದ್ದೇವೆ. ಮಾಲೆಯನ್ನು ಧರಿಸುವಾಗ ಹೇಳಬೇಕಾದ ಶ್ಲೋಕಗಳು, ಮಾಡಬೇಕಾದ ಚಿಂತನೆ, ಮತ್ತು ತುಲಸಿಯ ಪ್ರಾರ್ಥನೆ ಏನೆಂಬುದನ್ನು ಸ್ಕಂದಪುರಾಣದ ಈ ವಚನಗಳು ತಿಳಿಸುತ್ತವೆ-

**ತುಲಸೀಕಾಷ್ಠಸಂಭೂತೇ ಮಾಲೇ ಕೃಷ್ಣಜನಪ್ರಿಯೇ ।**
**ಬಿಭರ್ಮಿ ತ್ವಾಮಹಂ ಕಂಠೇ ಕುರು ಮಾಂ ಕೃಷ್ಣವಲ್ಲಭಮ್ ॥**

**ಯಥಾ ತ್ವಂ ವಲ್ಲಭಾ ವಿಷ್ಣೋಃ ನಿತ್ಯಂ ವಿಷ್ಣುಜನಪ್ರಿಯೇ ।**
**ತಥಾ ಮಾಂ ಕುರು ದೇವೇಶಿ ನಿತ್ಯಂ ವಿಷ್ಣುಜನಪ್ರಿಯಮ್ ॥**

ತುಲಸೀಕಾಷ್ಠದಿಂದ ನೀನು ನಿರ್ಮಿತವಾಗಿರುವಿ. ಕೃಷ್ಣನಿಗೆ, ಕೃಷ್ಣನ ಭಕ್ತರಿಗೆ ಪರಮಪ್ರಿಯಳಾಗಿರುವಿ. ನಾನು ನಿನ್ನನ್ನು ಕಂಠದಲ್ಲಿ ಧರಿಸುತ್ತೇನೆ. ನಿನ್ನಂತೆಯೇ ನಾನೂ ಕೃಷ್ಣನಿಗೆ ಪ್ರಿಯನಾಗಬೇಕು. ಹಾಗೆ ನನ್ನನ್ನು ಮಾಡು.

**ಲಾ ಧಾತುರುಕ್ತೋ ಹ್ಯಾದಾನೇ ಲಾಸಿ ಮಾಂ ಹರಿವಲ್ಲಭೇ ।**
**ಭಕ್ತೇಭ್ಯಶ್ಚ ಸಮಸ್ತೇಭ್ಯಃ ತೇನ ಮಾಲಾ ನಿಗದ್ಯಸೇ ॥**

**ಮಾ** ಎಂದರೆ ನನ್ನನ್ನು ಎಂದು ಅರ್ಥ. **ಲಾ** ಎಂಬುದು ಕ್ರಿಯಾಪದ, ಅದಕ್ಕೆ ಆದಾನ ಸ್ವೀಕರಿಸುವುದು ಎಂದು ಅರ್ಥ. ಭಗವಂತನ ಭಕ್ತನೆಂದು ನಮ್ಮನ್ನು ಸ್ವೀಕರಿಸುತ್ತದೆ ಆದ್ದರಿಂದ ಇದಕ್ಕೆ **ಮಾಲಾ** ಎಂದು ಕರೆದದ್ದು ಅನ್ವರ್ಥಕವಾಗಿದೆ. ತುಲಸೀ ವಿಷ್ಣುಭಕ್ತೆ. ತುಲಸೀಮಾಲೆ ವೈಷ್ಣವಚಿಹ್ನೆ. ಇದನ್ನು ಧರಿಸುವುದರಿಂದ ನಾವು ವೈಷ್ಣವರು ಅರ್ಥಾತ್ ವಿಷ್ಣುಭಕ್ತರು ಎಂದು ಸಿದ್ಧವಾಗುತ್ತದೆ.

**ಏವಂ ಸಂಪ್ರಾರ್ಥ್ಯ ವಿಧಿವತ್ ಮಾಲಾಂ ಕೃಷ್ಣಗಲೇಽರ್ಪಿತಾಮ್ ।**
**ಧಾರಯೇದ್ವೈಷ್ಣವೋ ಯೋಽಸೌ ಸ ಗಚ್ಛೇದ್ವೈಷ್ಣವಂ ಪದಮ್ ॥**
**ಸಮಾಪ್ತೇ ಕರ್ಮಣಿ ತಥಾ ಪ್ರಾರ್ಥ್ಯ ಗುಪ್ತಾಂ ನಿಧಾರಯೇತ್ ॥ -ಸ್ಕಂ.ಪು**

ಈ ರೀತಿಯಾಗಿ ತುಲಸಿಯನ್ನು ಪ್ರಾರ್ಥಿಸಬೇಕು. ವಿಧ್ಯುಕ್ತವಾಗಿ ಶ್ರೀಕೃಷ್ಣನ ಕೊರಳಿಗೆ ಹಾಕಿದ ಮಾಲೆಯನ್ನು ಸ್ವಯಂ ತಾನು ಧರಿಸಬೇಕು. ಅವನು ವೈಷ್ಣವನೆನಿಸಿಕೊಳ್ಳುತ್ತಾನೆ. ಮತ್ತು ವೈಷ್ಣವಪದವೇ ಅವನಿಗೆ ದೊರೆಯುತ್ತದೆ. ಮಾಡುವ ಕರ್ಮಗಳು ಮುಗಿದಾಗ ಆ ಮಾಲೆಯನ್ನು ಗುಪ್ತವಾಗಿಯೇ ಧರಿಸಬೇಕು. ಧರಿಸಿದ ಮಾಲೆಯು ಯಾರಿಗೂ ಕಾಣಬಾರದು. ಹಾಗೆ ಮಾಲೆಯನ್ನು ಧರಿಸಬೇಕು.

**ಶ್ರಾದ್ಧಾದಿಗಳಲ್ಲಿ ವಿಶೇಷ**

ಯಜ್ಞ-ಯಾಗಾದಿಪ್ರಸಂಗಗಳಲ್ಲಿ, ಕನ್ಯಾದಾನ-ಬ್ರಹ್ಮೋಪದೇಶದ ಪ್ರಸಂಗಗಳಲ್ಲಿ, ಶ್ರಾದ್ಧಾದಿಪ್ರಸಂಗಗಳಲ್ಲಿ ತುಲಸೀಮಾಲೆಯನ್ನು ಧರಿಸಿದರೆ ವಿಶಿಷ್ಟವಾದ ಪುಣ್ಯವಿದೆ ಎಂದು ಈ ವಚನವು ತಿಳಿಸುತ್ತದೆ-

**ತುಲಸೀಕಾಷ್ಠಮಾಲಾಭಿಃ ಭೂಷಿತಃ ಪುಣ್ಯಮಾಚರೇತ್ ।**
**ಪಿತೃಣಾಂ ದೇವತಾನಾಂ ಚ ಪುಣ್ಯಂ ಕೋಟಿಗುಣಂ ಕಲೌ ॥ -ಗ.ಪು**

ತುಲಸೀಕಾಷ್ಠದ ಮಾಲೆಯನ್ನು ಧರಿಸಿಯೇ ದೈವಕರ್ಮಗಳನ್ನು ಮತ್ತು ಪಿತೃಕರ್ಮಗಳನ್ನು ಆಚರಿಸಬೇಕು. ಹೀಗೆ ಮಾಡಿದರೇ ದೇವತೆಗಳಿಗೆ ಮತ್ತು ಪಿತೃಗಳಿಗೆ ಸಂತೃಪ್ತಿಯಾಗುತ್ತದೆ. ಕೋಟಿಪಟ್ಟು ಪುಣ್ಯವು ಆ ಕರ್ಮದಿಂದ ಪ್ರಾಪ್ತವಾಗುತ್ತದೆ.

**ಸರ್ವಭಯನಿವಾರಕ**

ಮನುಷ್ಯರ ಭಯಗಳು ಅನೇಕವಿಧವಾಗಿವೆ. ''ಸರ್ವಂ ವಸ್ತು ಭಯಾನ್ವಿತಂ'' ಈ ಪ್ರಪಂಚದಲ್ಲಿಯ ಪ್ರತಿಯೊಂದು ಪದಾರ್ಥಗಳೂ ಭಯಪ್ರದವಾಗಿಯೇ ಇವೆ ಎಂದು ಭರ್ತೃಹರಿ ಹೇಳುತ್ತಾನೆ. ಮರಣದ ಪ್ರಸಂಗದಲ್ಲಿಯಂತೂ ಮನುಷ್ಯರ ಭಯ ಹೇಳತೀರದು. ಯಮದೂತರು ಕ್ರೂರವಾದ ರೂಪದಿಂದ ಕಾಣಿಸಿಕೊಳ್ಳುತ್ತಾರೆ. ಅವರ ದರ್ಶನದಿಂದ ಮನುಷ್ಯ ಹೆದರುತ್ತಾನೆ. ಆವಾಗ ಏನು ಮಾಡಬೇಕೆಂದು ಅವನಿಗೆ ತೋಚುವುದಿಲ್ಲ. ಭಯ ಇಲ್ಲದಿರುವಾಗ ಮಾತ್ರ ಕರ್ತವ್ಯ ಕರ್ಮಗಳು ಸ್ಮೃತಿಗೆ ಬರುತ್ತವೆ. ಆದ್ದರಿಂದ ಸಾರ್ವಕಾಲಿಕವಾದ ಭಯವನ್ನು ಪರಿಹರಿಸಿಕೊಳ್ಳಲು ತುಲಸೀಮಾಲೆಯನ್ನು ಧರಿಸಬೇಕು. ಇದನ್ನು ಈ ವಚನಗಳು ತಿಳಿಸುತ್ತವೆ-

**ತುಲಸೀಕಾಷ್ಠಮಾಲಾಭಿಃ ಭೂಷಿತೇ ಭುವಿ ಮಾನವೇ ।**
**ದುಃಸ್ವಪ್ನಂ ದುರ್ನಿಮಿತ್ತಂ ಚ ನ ಭಯಂ ಶಾತ್ರವಂ ಕ್ವಚಿತ್ ॥**

ದುಃಸ್ವಪ್ನಗಳು, ದುಃಶಕುನಗಳು, ಶತ್ರುಗಳ ಭಯ ಮನುಷ್ಯನನ್ನು ಪದೇಪದೇ ಕಾಡುತ್ತಲೇ ಇರುತ್ತವೆ. ತುಲಸೀಕಾಷ್ಠದ ಮಾಲೆಯನ್ನು ಧರಿಸುವುದರಿಂದ ಈ ಎಲ್ಲ ಭಯಗಳು ದೂರವಾಗುತ್ತವೆ.

**ತುಲಸೀಕಾಷ್ಠಮಾಲಾಭಿಃ ಭೂಷಿತೋ ಭ್ರಮತೇ ಯದಿ ।**
**ದುಃಸ್ವಪ್ನಂ ದುರ್ನಿಮಿತ್ತಂ ಚ ನ ಭಯಂ ಶಸ್ತ್ರಜಂ ಕ್ವಚಿತ್ ॥ -ಸ್ಕಂ.ಪು**

ಕೆಟ್ಟ ಸ್ವಪ್ನಗಳಿಂದ, ಅಪಶಕುನಗಳಿಂದ ಮನುಷ್ಯ ತತ್ತರಿಸಿಹೋಗುತ್ತಾನೆ. ಮತ್ತು ಶಸ್ತ್ರಾಸ್ತ್ರಗಳಿಂದ ಸದಾ ಭೀತನಾಗಿಯೇ ಇರುತ್ತಾನೆ. ಯಾವಾಗಲೂ ತುಲಸೀಮಾಲೆಯನ್ನು ಧರಿಸಿದ ಮನುಷ್ಯನಿಗೆ ದುಃಸ್ವಪ್ನಾದಿಗಳು ಭಯಾನಕವಾಗುವುದಿಲ್ಲ. ದುಃಸ್ವಪ್ನಾದಿಗಳಿಂದ ಭಯ ಬಂದರೂ ಅದು ತೀವ್ರವಾಗುವುದಿಲ್ಲ. ಸ್ವಲ್ಪದರಲ್ಲಿಯೇ ಅತಿಶಯಿತವಾದ ಅನರ್ಥವು ತಪ್ಪಿಹೋಗುತ್ತದೆ. ಆದ್ದರಿಂದ ಯಾವಾಗಲೂ ತುಲಸೀಮಾಲೆಯನ್ನು ಧರಿಸಿಯೇ ಇರಬೇಕು.

**ತುಲಸೀಕಾಷ್ಠಸಂಭೂತಾಂ ಯೋ ಮಾಲಾಂ ಧಾರಯೇನ್ನರಃ ।**
**ಪ್ರಾಯಶ್ಚಿತ್ತಂ ನ ತಸ್ಯಾಽಸ್ತಿ ನಾಽಶೌಚಂ ತಸ್ಯ ವಿಗ್ರಹೇ ॥ -ಪ.ಪು**

ತುಲಸೀಕಾಷ್ಠಮಾಲೆಯನ್ನು ಧರಿಸಬೇಕು. ಅಂಥವ ಪಾಪಗಳನ್ನು ಮಾಡಲು ಹೆದರುತ್ತಾನೆ. ಪಾಪಗಳ ಪ್ರಸಕ್ತಿ ಇಲ್ಲದಾಗ ಪ್ರಾಯಶ್ಚಿತ್ತಗಳ ಆವಶ್ಯಕತೆಯೇ ಇರುವುದಿಲ್ಲ. ತುಲಸೀಮಾಲೆಯನ್ನು ಧರಿಸಿದವನು ಸಣ್ಣ ಸಣ್ಣ ಕಾರಣಕ್ಕಾಗಿ ಅಶುಚಿಯಾಗುವುದಿಲ್ಲ. ಯಾವಾಗಲೂ ಶುದ್ಧನಾಗಿಯೇ ಇರುತ್ತಾನೆ. ಪಾಪಗಳಿಂದ ದೂರವಿರುವುದಕ್ಕಾಗಿ, ಸದಾ ಶುದ್ಧನಾಗಿ ಇರುವುದಕ್ಕಾಗಿ ತುಲಸೀಮಾಲೆಯನ್ನು ಅವಶ್ಯವಾಗಿ ಧರಿಸಬೇಕು.

**ಸದಾ ಸಂಧಾರಯೇದ್ಯಸ್ತು ತುಲಸೀಮಣಿಮಾಲಿಕಾಮ್ ।**
**ಭೂತಪ್ರೇತಪಿಶಾಚೈಶ್ಚ ನ ದೃಷ್ಟೋ ವರ್ತತೇ ಸುಖೀ ॥**

ಭೂತ-ಪ್ರೇತ-ಪಿಶಾಚಾದಿಗಳ ದೃಷ್ಟಿ ಮನುಷ್ಯನ ಸುಖ-ಸಮಾಧಾನ ಇತ್ಯಾದಿಗಳನ್ನು ಕೆಡಿಸುತ್ತದೆ. ಯಾವಾಗಲೂ ತುಲಸೀಮಾಲೆಯನ್ನು ಧರಿಸಿದ ವ್ಯಕ್ತಿಯನ್ನು ನೋಡಲು ಭೂತಾದಿಗಳು ಸಮರ್ಥವಾಗುವುದಿಲ್ಲ. ಭೂತಾದಿಗಳ ದೃಷ್ಟಿ ತಾಕದಿರುವ ಮನುಷ್ಯ ಯಾವಾಗಲೂ ಸುಖವಾಗಿ ಇರುತ್ತಾನೆ.

**ತುಲಸೀಕಾಷ್ಠಮಾಲಾಂ ತು ಪ್ರೇತರಾಜಸ್ಯ ದೂತಕಾಃ ।**
**ದೃಷ್ಟ್ವಾ ನಶ್ಯಂತಿ ದೂರೇಣ ವಾತೋದ್ಧೂತಾ ಯಥಾ ಘನಾಃ ॥ -ಗ.ಪು**

ತುಲಸೀಕಾಷ್ಠದ ಮಾಲೆಯನ್ನು ಧರಿಸಬೇಕು. ಇಂಥವನನ್ನು ನೋಡಿದ ಯಮದೂತರು ಗಾಳಿಯಿಂದ ಮೇಘಮಾಲೆಗಳು ದೂರ ಓಡುವಂತೆ ದೂರ ಓಡುತ್ತಾರೆ. ತುಲಸೀಮಾಲೆಯನ್ನು ಧರಿಸಿದವರು ವಿಷ್ಣುಭಕ್ತರೆಂಬ ಕಾರಣಕ್ಕಾಗಿ ಇವರ ಹತ್ತಿರ ಯಮದೂತರು ಸರ್ವಥಾ ಸುಳಿಯುವುದಿಲ್ಲವೆಂದು ಅಭಿಪ್ರಾಯ. ಎಲ್ಲ ವಸ್ತುಗಳು ಭಯಪ್ರದ ನಿಜ. ಆದರೆ ಭಗವಂತ ಮಾತ್ರ ಭಯಪರಿಹಾರಕ. ಹಾಗೆಯೆ

ಭಗವಂತನ ಸಂಬಂಧಿಯಾದ ಪದಾರ್ಥಗಳು ಕೂಡಾ ಭಯಪ್ರದವಲ್ಲ. ಭಯಪ್ರದ ಅಲ್ಲ ಎಂದಿಷ್ಟೇ ಅಲ್ಲ. ಭಗವಂತ, ಭಾಗವತರು, ಭಗವದರ್ಪಿತವಾದ ತುಲಸ್ಯಾದಿಗಳು ಕೂಡಾ ಸಜ್ಜನರ ಸರ್ವವಿಧವಾದ ಭಯವನ್ನು ಪರಿಹರಿಸಲು ಸಮರ್ಥವಾಗಿವೆ. ಈ ವಿಷಯವನ್ನು ಗಮನದಲ್ಲಿಟ್ಟುಕೊಳ್ಳಬೇಕು.

**ತುಲಸೀಮಣಿಮಾಲಾಂ ಚ ಗಲೇ ಧೃತ್ವಾರ್ಚಯೇದ್ಧರಿಮ್ ।**
**ಸಾಲಗ್ರಾಮನಿವಾಸಸ್ಥಂ ನ ಸ ಯಾತಿ ಯಮಾಲಯಮ್ ॥**

ತುಲಸೀಮಣಿಗಳ ಮಾಲೆಯನನ್ನು ಧರಿಸಿ ಸಾಲಗ್ರಾಮದಲ್ಲಿ ನಿತ್ಯವೂ ಅಭಿವ್ಯಕ್ತನಾಗಿರುವ ದೇವರನ್ನು ಅರ್ಚಿಸಬೇಕು. ಪೂಜಾಕಾಲದಲ್ಲಿ ವಿಶೇಷವಾಗಿ ಪದ್ಮಾಕ್ಷಮಾಲೆಯನ್ನು ಧಾತ್ರೀಮಾಲೆಯನ್ನು ಧರಿಸಬೇಕು. ಹೀಗೆ ಮಾಡುವವನಿಗೆ ನರಕವಾಗುವುದಿಲ್ಲ. ಉತ್ತಮವಾದ ಸ್ವರ್ಗಾದಿಲೋಕಗಳನ್ನು ಸೇರಿ ಅಲ್ಲಿ ಸುಖಿಸುತ್ತಾನೆ.

**ಮನೆಯಲ್ಲಿ ಪಾಪ ಪ್ರವೇಶಿಸುವುದಿಲ್ಲ**

ಧರ್ಮವನ್ನು ಮಾಡುವುದಕ್ಕಾಗಿಯೇ ನಮ್ಮ ಮನೆ. ಆ ಮನೆಯಲ್ಲಿ ಪಾಪಕರ್ಮಗಳು ಸರ್ವಥಾ ನಡೆಯಬಾರದು. ಪಾಪಿಗಳಿಗೆ ನಮ್ಮ ಮನೆ ಸರ್ವಥಾ ಆವಾಸವಾಗಬಾರದು. ನಮ್ಮ ಮನೆಯನ್ನು ನಮ್ಮ ಮನಸ್ಸನ್ನು ಪಾಪಗಳು ಪ್ರವೇಶಿಸಬಾರದು. ಅದಕ್ಕೂ ಉಪಾಯ ತುಲಸೀಧಾರಣೆ ಎಂದು ಈ ಮಾತು ತಿಳಿಸುತ್ತದೆ-

**ಯದ್ದೇಹೇ ತುಲಸೀಕಾಷ್ಠಂ ಪತ್ರಂ ಶುಷ್ಕಮಥಾರ್ದ್ರಕಮ್ ।**
**ಭರತೇ ತದ್ಗೃಹೇ ನೈವ ಪಾಪಂ ಸಂಕ್ರಮತೇ ಕಲೌ ॥**

ಯಾವ ವ್ಯಕ್ತಿಯು ತುಲಸೀಕಾಷ್ಠದ ಮಾಲೆಯನ್ನಾಗಲಿ, ಹಸಿತುಲಸಿಯ ಎಲೆಯನ್ನಾಗಲಿ, ಒಣಗಿದ ತುಲಸಿಯನ್ನಾಗಲಿ ಧರಿಸಿದ್ದಾನೆಯೋ ಅವನ ಮನೆಯಲ್ಲಿ ಪಾಪಗಳು ಪ್ರವೇಶಮಾಡುವುದಿಲ್ಲ. ವಿಶೇಷವಾಗಿ ಕಲಿಯುಗದಲ್ಲಿ ಈ ರೀತಿಯಾದ ಫಲವು ಪ್ರಾಪ್ತವಾಗುತ್ತದೆ.

**ತುಲಸೀಪತ್ರಸಂಭೂತಾಂ ಯೋ ಮಾಲಾಂ ವಹತೇ ನರಃ ।**
**ಫಲಂ ಯಚ್ಛಾಮ್ಯಹಂ ವತ್ಸ ಪ್ರತ್ಯಹಂ ದ್ವಾರಕೋದ್ಭವಮ್ ॥**

ತುಲಸೀಪತ್ರಗಳಿಂದ ನಿರ್ಮಿತವಾದ ಮಾಲೆಯನ್ನು ಭಗವಂತನಿಗೆ ಸಮರ್ಪಿಸಿ ಆ ಮಾಲೆಯನ್ನು ಸ್ವಯಂ ತಾನು ಧರಿಸಬೇಕು. ಇಂಥವನಿಗೆ ಪ್ರತಿನಿತ್ಯವೂ

ದ್ವಾರಕೆಯಲ್ಲಿ ವಾಸಮಾಡುವುದರಿಂದ ಪ್ರಾಪ್ತವಾಗುವ ಪುಣ್ಯವನ್ನು ನಾನು ನೀಡುತ್ತೇನೆ. ಹಿಗೆಂದು ಪರಮಾತ್ಮನೇ ಹೇಳಿದ್ದಾನೆ.

**ಹೇತುವಾದ ಅನರ್ಥಕಾರಿ**

ಲೋಕದಲ್ಲಿ ಯಜಮಾನ ಹೇಳಿದ ಕಾರ್ಯಗಳನ್ನೆಲ್ಲ ಪಿಸು ಮಾತನ್ನೂ ಆಡದೇ ಕೇಳುತ್ತಾನೆ ಮನುಷ್ಯ. ಯಾಕೆ ? ಏನು ? ಅಂತ ಎದುರಾಡುವುದಿಲ್ಲ. ಆದರೆ ಧರ್ಮವನ್ನು ಆಚರಿಸುವ ಪ್ರಸಂಗ ಬಂದಾಗ ಅದೇ ಮನುಷ್ಯ ಹೇತುವಾದಿಯಾಗುತ್ತಾನೆ. ಹಿತವಾದಿಗಳಾದ ಋಷಿಗಳು ಈ ಧರ್ಮಗಳನ್ನು ಹೇಳಿದ್ದಾರೆ ಎಂದರೆ ಎಂದರೆ ನಂಬುವುದಿಲ್ಲ. ಇದರಿಂದ ಏನಾದೀತು ? ಇದೆಲ್ಲ ಮೂಢನಂಬಿಕೆ ಎಂದು ಧರ್ಮಗಳನ್ನು ತಳ್ಳಿ ಹಾಕುತ್ತಾನೆ.

ಒಬ್ಬ ಮನುಷ್ಯನ ಸುಖದ ಹಿನ್ನೆಲೆಯಲ್ಲಿ ಮಾತ್ರ ಧರ್ಮಗಳು ನಿರ್ಮಿತವಾಗಿಲ್ಲ. ಅನೂಚಾನಸಂಪ್ರದಾಯದಿಂದ ಬಂದಿರುವ ಧರ್ಮಗಳಲ್ಲಿ ಜೀವಕೋಟಿಯ ಹಿತವಿದೆ. ಇಂತಹ ಧರ್ಮಗಳ ಬಗ್ಗೆ ಹೇತುವಾದಿಯಾದರೆ ಅನರ್ಥವಾಗುತ್ತದೆ. ಈ ವಿಷಯವನ್ನು ತಿಳಿಸುವ ಮಾತು ಇದು-

**ಧಾರಯಂತಿ ನ ಮೇ ಮಾಲಾಂ ಹೈತುಕಾಃ ಪಾಪಬುದ್ಧಯಃ ।**
**ನರಕಾನ್ನ ನಿವರ್ತಂತೇ ದಗ್ಧಾಃ ಕೋಪಾಗ್ನಿನಾ ಮಮ ॥**

ಹೇತುವಾದಿಗಳಾಗಿರುವ ಪಾಪಿಗಳು ತುಲಸೀಮಾಲೆಯನ್ನು ಧರಿಸದೇ ನನ್ನ ಕೆಂಗಣ್ಣಿಗೆ ತುತ್ತಾಗುತ್ತಾರೆ. ಅಂಥವರು ಮತ್ತೆ ತಿರುಗಿ ಬಾರದ ದುಃಖದ ಲೋಕಗಳನ್ನು ಪಡೆಯುತ್ತಾರೆ. ಆದ್ದರಿಂದ ತುಲಸೀಮಾಲಾಧಾರಣದ ವಿಷಯದಲ್ಲಿ ಹೇತುವಾದಿಗಳಾಗಬಾರದು.

**ಭಾಗವತರು ರುದ್ರಾಕ್ಷಾದಿಗಳನ್ನು ಧರಿಸಬಾರದು**

ಸ್ವಯಂ ಭಗವಂತನೇ ಶುದ್ಧಭಾಗವತ ಧರ್ಮನಿರತರಾದ ಬ್ರಹ್ಮದೇವರಿಗೆ ಹೇಳಿದ ಮಾತು ಇದು-

**ರುದ್ರಾಕ್ಷಸ್ಫಟಿಕಾದೀನಾಂ ಮಾಲಾಂ ಯೋ ವಹತೇ ನರಃ ।**
**ನ ಮೇ ಭಕ್ತಃ ಸ ಪಾಪಾತ್ಮಾ ನರಕಾನ್ ಪ್ರತಿಪದ್ಯತೇ ।**

ಶೈವರಾದವರು ರುದ್ರಾಕ್ಷಮಾಲೆಯನ್ನು ಸ್ಫಟಿಕಮಾಲೆಗಳನ್ನು ಧರಿಸಲಿ. ಆದರೆ ವೈಷ್ಣವರಾದವರು ರುದ್ರಾಕ್ಷಮಾಲೆಯನ್ನು, ಸ್ಫಟಿಕಮಾಲೆಯನ್ನು ಸರ್ವಥಾ

ಧರಿಸಬಾರದು. ಅವನು ನನ್ನ ಭಕ್ತನಲ್ಲ. ಅವನು ಪಾಪಿಯು. ನರಕವನ್ನು ಅವನು ಪಡೆಯುತ್ತಾನೆ.

**ತಸ್ಮಾದ್ಧಾರ್ಯಾ ಪ್ರಯತ್ನೇನ ಮಾಲಾ ತುಲಸಿಸಂಭವಾ ।**
**ಪದ್ಮಾಕ್ಷನಿರ್ಮಿತಾ ಭಕ್ತ್ಯಾ ಫಲೈಃ ಧಾತ್ರ್ಯಾಃ ಸುಪುಣ್ಯದಾ ॥**

ತುಲಸೀಮಾಲೆಯನ್ನು ಧರಿಸುವುದರಿಂದ ಅನೇಕ ಪ್ರಯೋಜನಗಳಿವೆ. ಮತ್ತು ವಿಶೇಷವಾಗಿ ವೈಷ್ಣವದೀಕ್ಷೆಯ ಪ್ರತೀಕವಾಗಿದೆ. ಅಲ್ಲದೇ ವಿಷ್ಣುಭಕ್ತಿಯನ್ನು ಬೆಳೆಸುವುದಾಗಿದೆ. ಈ ಎಲ್ಲ ಕಾರಣಗಳಿಂದಾಗಿ ಪ್ರಯತ್ನಪೂರ್ವಕವಾಗಿ ತುಲಸೀಮಾಲೆಯನ್ನು ಧರಿಸಬೇಕು. ಮತ್ತು ಪದ್ಮಾಕ್ಷಗಳಿಂದ ನಿರ್ಮಿತವಾದ ಮಾಲೆಯನ್ನು, ಧಾತ್ರೀಫಲಗಳಿಂದ ನಿರ್ಮಿತವಾದ ಮಾಲೆಯನ್ನು ಧರಿಸುವುದರಿಂದ ವಿಶಿಷ್ಟವಾದ ಪುಣ್ಯವು ಸಾಧಕನಿಗೆ ಒದಗಿಬರುತ್ತದೆ.

**ತುಲಸೀಮಾಲೆಯಿಂದ ಜಪ**

**ತುಲಸೀಮಾಲಯಾ ಜಪ್ತಂ ತಜ್ಜಪ್ತಂ ಹರಿಸನ್ನಿಧೌ ।**
**ಹರೇಸ್ತು ಸನ್ನಿಧೌ ಜಪ್ತಂ ತದನಂತಫಲಪ್ರದಮ್ ॥ಶಾಂ.ಸಂ.೩.೮೧॥**

''ಅನಂತಂ ವಿಷ್ಣುಸನ್ನಿಧೌ'' ಶ್ರೀಹರಿಯ ಸನ್ನಿಧಾನದಲ್ಲಿ ಮಂತ್ರಗಳನ್ನು ಜಪಿಸಬೇಕು. ಅದು ಅನಂತಫಲಪ್ರದವಾಗಿದೆ. ಭಗವಂತನ ಸನ್ನಿಧಾನವಿಲ್ಲದಿದ್ದ ಪಕ್ಷದಲ್ಲಿ ತುಲಸೀಮಾಲೆಯಿಂದ ಸಂಖ್ಯೆಯನ್ನು ಎಣಿಸುತ್ತಾ ಮಂತ್ರಗಳನ್ನು ಜಪಿಸಬೇಕು. ತುಲಸೀಯಲ್ಲಿ ಪರಮಾತ್ಮನು ಸನ್ನಿಹಿತನಾಗಿರುತ್ತಾನೆ. ಹೀಗಾಗಿ ಶ್ರೀಹರಿಯ ಸನ್ನಿಧಾನದಲ್ಲಿ ಜಪ ಮಾಡಿದ ಪುಣ್ಯವೇ ಅವರಿಗೆ ಬರುತ್ತದೆ.

**ತುಲಸೀಧೂಪ**

**ಯೋ ದದಾತಿ ಹರೇರ್ಧೂಪಂ ತುಲಸೀಕಾಷ್ಠವಹ್ನಿನಾ ।**
**ಮೇರುತುಲ್ಯಂ ಭವೇದ್ದತ್ತಂ ತದ್ದತ್ತಂ ಕೇಶವಸ್ಯ ಹಿ ॥**

ಯಾವುದೋ ಅಗ್ನಿಯಲ್ಲಿ ಧೂಪವನ್ನು ಹಾಕಿ ದೇವರಿಗೆ ಸಮರ್ಪಿಸುತ್ತೇವೆ. ಅದಕ್ಕಿಂತಲೂ ತುಲಸೀಕಾಷ್ಠದ ಕೆಂಡದಲ್ಲಿ ಧೂಪವನ್ನು ಹಾಕಿ ದೇವರಿಗೆ ಸಮರ್ಪಿಸಬೇಕು. ಹೀಗೆ ಮಾಡುವುದರಿಂದ ಮೇರುವಿಗೆ ಸರಿಯಾದಷ್ಟು ಧೂಪವನ್ನು ಕೇಶವನಿಗೆ ಸಮರ್ಪಿಸಿದಷ್ಟು ಪುಣ್ಯವು ಬಂದೊದಗುತ್ತದೆ. ನಿತ್ಯ ಹೀಗೆ ಮಾಡಲು ಸಾಧ್ಯವಾಗದಿದ್ದರೂ ಅನುಕೂಲವಾದಾಗ ಈ ರೀತಿಯಾಗಿ ಧೂಪವನ್ನು ಸಮರ್ಪಿಸುವುದು ಶ್ರೇಯಸ್ಕರವಾಗಿದೆ.

**ತುಲಸೀಕಾಷ್ಠದಿಂದಲೇ ದೀಪ**

ಮನೆಯಲ್ಲಿ, ದೇವಾಲಯಗಳಲ್ಲಿ ದೀಪಗಳನ್ನು ಹಚ್ಚುವಾಗ ಯಾವುದೋ ಕಡ್ಡಿಗಳನ್ನು ಉಪಯೋಗಿಸುತ್ತಾರೆ. ತಿಳಿದವರು ಹಲವರು ತುಲಸೀಕಾಷ್ಠವನ್ನು ಇಟ್ಟುಕೊಂಡಿರುತ್ತಾರೆ. ಆ ತುಲಸೀಕಾಷ್ಠದಿಂದಲೇ ದೀಪವನ್ನು ಬೆಳಗಿಸುತ್ತಾರೆ. ಈ ಆಚರಣೆ ನಿರ್ಮೂಲವೇನಲ್ಲ. ಇದಕ್ಕೆ ಆಧಾರವಾದ ಸ್ಕಂದಪುರಾಣದ ವಚನ ಹೀಗಿದೆ-

**ತುಲಸೀಪಾವಕೇನ್ನೈವ ದೀಪಂ ಯಃ ಕುರುತೇ ಹರೇಃ ।**
**ದೀಪಲಕ್ಷಸಹಸ್ರಾಣಾಂ ಪುಣ್ಯಂ ಭವತಿ ದೈತ್ಯಜ ॥ -ಸ್ಕಂ.ಪು**

ತುಲಸೀಕಾಷ್ಠದ ಅಗ್ನಿಯಿಂದಲೇ ದೇವರ ಸನ್ನಿಧಾನದಲ್ಲಿ ದೀಪವನ್ನು ಬೆಳಗಿಸಬೇಕು. ಹೀಗೆ ಮಾಡುವುದರಿಂದ ಹತ್ತುಕೋಟಿ ದೀಪಗಳ ದಾನದಿಂದ ಲಭ್ಯವಾಗುವ ಪುಣ್ಯವು ಸಂಪಾದಿತವಾಗುತ್ತದೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ಎಲ್ಲರೂ ತಮ್ಮ ತಮ್ಮ ಮನೆಗಳಲ್ಲಿ ದೇವಾಲಯಗಳಲ್ಲಿ ತುಲಸೀಕಾಷ್ಠದಿಂದಲೇ ದೀಪವನ್ನು ಬೆಳಗಿಸುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬೇಕು.

**ವೈಶ್ವದೇವದಲ್ಲಿ ತುಲಸೀ**

ವೈಶ್ವದೇವದ ವಿಷಯವನ್ನು ತಿಳಿಸುವಾಗ ಶ್ರೀನಿವಾಸತೀರ್ಥರು ಹಲವು ಅಪರೂಪವಾದ ಪ್ರಮಾಣವಚನಗಳನ್ನು ಈ ರೀತಿಯಾಗಿ ಉದಾಹರಿಸಿದ್ದಾರೆ-

**ತುಲಸೀದಲೇನ ರಹಿತಂ ವೈಶ್ವದೇವಂ ಕರೋತಿ ಯಃ ।**
**ದೇವತಾಸ್ತನ್ನ ಗೃಹ್ಣಂತಿ ಗೃಹ್ಣಂತಿ ಬ್ರಹ್ಮರಾಕ್ಷಸಾಃ ॥**

ವೈಶ್ವದೇವದಲ್ಲಿ ಆಹುತಿಗಳನ್ನು ನೀಡುವಾಗ ಪ್ರತಿಯೊಂದು ಆಹುತಿಯ ಜೊತೆ ತುಲಸಿಯನ್ನು ಸೇರಿಸಿ ಅಗ್ನಿಯಲ್ಲಿ ಸಮರ್ಪಿಸಬೇಕು. ತುಲಸೀ ಇಲ್ಲದೇ ವೈಶ್ವದೇವವನ್ನು ಸರ್ವಥಾ ಮಾಡಬಾರದು. ತುಲಸೀರಹಿತವಾದ ಆಹುತಿಗಳನ್ನು ದೇವತೆಗಳು ಸ್ವೀಕರಿಸುವುದಿಲ್ಲ. ಆ ಪುಣ್ಯವೆಲ್ಲ ದೈತ್ಯರ ಪಾಲಾಗುತ್ತದೆ. ತುಲಸಿಯು ಇಲ್ಲದಿರುವಾಗ ತುಲಸಿಯ ಸ್ಮರಣೆಯನ್ನು ಮಾಡುತ್ತಲೇ ಪ್ರತಿಯೊಂದು ಆಹುತಿಯನ್ನು ಸಮರ್ಪಿಸಬೇಕು. ಕನಿಷ್ಠ ಒಂದಾದರೂ ಆಹುತಿಯನ್ನು ತುಲಸೀದಲಸಹಿತವಾಗಿ ಹಾಕಬೇಕು.

**ತುಲಸೀವಹ್ನಿಯಲ್ಲಿ ಹೋಮ**

ಪ್ರತಿಯೊಂದು ಹೊಮದಲ್ಲಿಯೂ ತುಲಸೀಕಾಷ್ಠ ಪರಮಪವಿತ್ರವಾಗಿದೆ. ಕರ್ಮಪರಿಪೂರಕವಾಗುತ್ತದೆ ಎಂಬುದನ್ನು ತಿಳಿಸುತ್ತದೆ ಈ ವಚನ-

**ಹೋಮಂ ಕುರ್ವಂತಿ ಯೇ ವಿಪ್ರಾಃ ತುಲಸೀಕಾಷ್ಠವಹ್ನಿನಾ ।**
**ಸಿಕ್ಥೇ ಸಿಕ್ಥೇ ತಿಲೇ ವಾಪಿ ಅಗ್ನಿಷ್ಟೋಮಫಲಂ ಭವೇತ್ ॥**

ಹೋಮ ಮಾಡುವಾಗ ತುಲಸಿಯ ಕಾಷ್ಠಗಳನ್ನು ಇಂಧನಕ್ಕಾಗಿ ಉಪಯೋಗಿಸಬೇಕು. ತುಲಸೀಕಾಷ್ಠದ ವಹ್ನಿಯಲ್ಲಿಯೇ ಆಹುತಿಗಳನ್ನು ಸಮರ್ಪಿಸಬೇಕು. ಪ್ರತಿಯೊಂದು ಆಹುತಿಗೂ ಅಗ್ನಿಷ್ಟೋಮದ ಫಲವು ಪ್ರಾಪ್ತವಾಗುತ್ತದೆ. ವೈಶ್ವದೇವ ಮಾಡುವಾಗಲೂ ಅಗ್ನಿಯಲ್ಲಿ ತುಲಸೀಕಾಷ್ಠವನ್ನು ಹಾಕಿ ಆ ವಹ್ನಿಯಲ್ಲಿ ಆಹುತಿಗಳನ್ನು ಹಾಕಬೇಕು. ನಿತ್ಯವೂ ಈ ವಿಧವಾದ ಆಚರಣೆಯನ್ನು ಅನೇಕರು ಮಾಡುತ್ತಾರೆ.

**ಪಾರಣೆಯಲ್ಲಿ ತುಲಸಿಯು ಪುಣ್ಯಪ್ರದ**

**ಉಪೋಷ್ಯ ದ್ವಾದಶೀಂ ಶುದ್ಧಾಂ ಪಾರಣೇ ತುಲಸೀದಲಮ್ ।**
**ಪ್ರಾಶಯೇದ್ಯದಿ ವಿಪ್ರೇಂದ್ರಶ್ಚಾಶ್ವಮೇಧಾಷ್ಟಕಂ ಲಭೇತ್ ॥**

ಏಕಾದಶಿಯ ದಿನ ಉಪವಾಸವನ್ನು ಮಾಡಬೇಕು. ಅದು ಕೂಡಾ ಶುದ್ಧೋಪವಾಸ. ಯಾವುದೇ ಆಹಾರ-ಪಾನೀಯಗಳನ್ನು ಆ ದಿನ ಸೇವಿಸಬಾರದು. ಇಂತಹ ಶುದ್ಧೋಪವಾಸವು ಪುಣ್ಯಪ್ರದ. ಸಕಲಪಾಪನಿವಾರಕವೂ ಆಗಿದೆ. ಉಪವಾಸದಷ್ಟೇ ಪಾರಣೆಯೂ ಮಹತ್ತ್ವವನ್ನು ಪಡೆದಿದೆ. ಏಕಾದಶಿಯ ದಿನ ಉಪವಾಸ ಮಾಡಿದ ಹಾಗೆ ಕಡ್ಡಾಯವಾಗಿ ದ್ವಾದಶಿಯ ದಿನ ಪಾರಣೆಯನ್ನು ಸಕಾಲದಲ್ಲಿ ಮಾಡಬೇಕು. ಹೀಗೆ ಮಾಡಿದಾಗಲೇ ಏಕಾದಶಿಯ ಪುಣ್ಯವು ಪ್ರಾಪ್ತವಾಗುತ್ತದೆ. ತುಲಸೀದಲವನ್ನು ಮೊದಲು ಸ್ವೀಕಾರ ಮಾಡುವ ಮೂಲಕ ಪಾರಣೆಯನ್ನು ಆಚರಿಸಬೇಕು. ಹೀಗೆ ಮಾಡುವುದರಿಂದ ಎಂಟು ಅಶ್ವಮೇಧಯಾಗಗಳನ್ನು ಮಾಡಿದ ಪುಣ್ಯವನ್ನು ಸುಲಭವಾಗಿ ಪಡೆಯಬಹುದಾಗಿದೆ.

**ತುಲಸೀವನದಲ್ಲಿ ವಿಶ್ರಾಂತಿಯೂ ಪಾಪನಾಶಕ**

ಇದೇನು ತುಲಸೀವನದಲ್ಲಿ ವಿಶ್ರಾಂತಿಯೇ !!! ಎಂದು ಆಶ್ಚರ್ಯಪಡಬೇಕಿಲ್ಲ. ಭಾರ ಹೊತ್ತ ಮನುಷ್ಯನಿಗೆ ವಿಶ್ರಾಂತಿ ಅನಿವಾರ್ಯ. ಮುಂದೆ ಸಾಗುವುದು ಮತ್ತಿಷ್ಟು ಅನಿವಾರ್ಯ. ಅವನು ನೆರಳಿನಲ್ಲಿ ವಿಶ್ರಾಂತಿಯನ್ನು ಅಪೇಕ್ಷಿಸುತ್ತಾನೆ. ತನ್ನ ದಣಿವನ್ನೆಲ್ಲ ಪರಿಹರಿಸಿಕೊಳ್ಳುತ್ತಾನೆ. ಸಂತೋಷದಿಂದ ಮತ್ತೆ ಮುಂದೆ ಸಾಗುತ್ತಾನೆ.

ಮನುಷ್ಯ ಕೋಟಿ-ಕೋಟಿ ವರ್ಷಗಳ ಪಾಪದ ಭಾರವನ್ನು ಹೊತ್ತಿದ್ದಾನೆ. ಇದರ ಪರಿಕಲ್ಪನೆ ಬಂದಾಗ ನಿಶ್ಚಿತವಾಗಿಯೂ ಮೈ ನವಿರೇಳುತ್ತದೆ. ಹೇಗಪ್ಪಾ ! ಇದನ್ನು ಪರಿಹರಿಸಿಕೊಳ್ಳಬೇಕು ಎಂದು ತತ್ತರಿಸುತ್ತಾನೆ. ದಿಕ್ಕು ತೋಚದೇ ಕಂಗಾಲಾಗುತ್ತಾನೆ. ಅಂತಹ ಭಕ್ತರನ್ನು ತುಲಸೀಮಾತೆ ತನ್ನ ಮಡಿಲಲ್ಲಿ ಮಲಗಿಸಿಕೊಳ್ಳುತ್ತದೆ. ನೂರುಕೋಟಿ ಜನ್ಮಗಳ ಪಾಪದ ಭಾರವನ್ನು ಪರಿಹರಿಸುತ್ತದೆ. ಈ ವಿಷಯವನ್ನು ಈ ವಚನ ಎಷ್ಟು ಚೆನ್ನಾಗಿ ತಿಳಿಸುತ್ತದೆ ನೋಡಿ-

**ತುಲಸೀಕಾನನೇ ಯಸ್ತು ಮುಹೂರ್ತಮಪಿ ವಿಶ್ರಮೇತ್ ।**
**ಕೋಟಿಜನ್ಮಶತಾತ್ ಪಾಪಾತ್ ಮುಚ್ಯತೇ ನಾಽತ್ರ ಸಂಶಯಃ ॥ -ಸ್ಕಂ.ಪು**

ತುಲಸಿಯ ವನದಲ್ಲಿ ಮುಹೂರ್ತದಷ್ಟು ಕಾಲ ವಿಶ್ರಾಂತಿಯನ್ನು ಪಡೆದರೂ ಸಾಕು. ಅವನು ನೂರುಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಪಾಪವೆಲ್ಲವೂ ದೂರವಾಗುತ್ತದೆ. ಈ ವಿಷಯದಲ್ಲಿ ಸರ್ವಥಾ ಸಂದೇಹವಿಲ್ಲ.

ಹೀಗೆ ಮುಹೂರ್ತದಲ್ಲಿಯೇ ತನ್ನ ಪಾಪದ ಭಾರವನ್ನೆಲ್ಲ ಕಳೆದುಕೊಳ್ಳುತ್ತಾನೆ. ಸಂತೋಷದಿಂದ ಮತ್ತೆ ತನ್ನ ಸಂಸಾರದ ಪಯನವನ್ನು ಮುಂದುವರಿಸುತ್ತಾನೆ.

**ಮರಣದಲ್ಲಿಯೂ ತುಲಸಿಯ ಸಾನ್ನಿಧ್ಯ**

**ಯಸ್ಯ ಸ್ಯಾತ್ತುಲಸೀಪತ್ರಂ ಮುಖೇ ಶಿರಸಿ ಕರ್ಣಯೋಃ ।**
**ಮೃತ್ಯುಕಾಲೇ ದ್ವಿಜಶ್ರೇಷ್ಠ ತಸ್ಯ ಸ್ವಾಮೀ ನ ಭಾಸ್ಕರಿಃ ॥ -ಪ.ಪು**

ಮುಖದಲ್ಲಿ, ಶಿರಸ್ಸಿನಲ್ಲಿ, ಕಿವಿಗಳಲ್ಲಿ ತುಲಸಿಯನ್ನು ಧರಿಸಬೇಕು. ಮೃತ್ಯುಕಾಲದಲ್ಲಿ ಯಾರು ಈ ರೀತಿಯಾಗಿ ತುಲಸಿಯನ್ನು ಧರಿಸುತ್ತಾರೋ ಅವರಿಗೆ ಯಮನು ಸ್ವಾಮಿಯಾಗುವುದಿಲ್ಲ. ಅರ್ಥಾತ್ ಅವರಿಗೆ ಯಮನಿಂದ ಬಾಧೆಯಾಗುವುದಿಲ್ಲ.

**ತುಲಸೀಮಂಜರೀಯುಕ್ತೋ ಯಸ್ತು ಪ್ರಾಣಾನ್ ವಿಮುಂಚತಿ ।**
**ಯಮೋ ನ ವೀಕ್ಷಿತುಂ ಶಕ್ತೋ ಯುಕ್ತಃ ಪಾಪಶತೈರಪಿ ॥**

ಮರಣಸಮಯದಲ್ಲಿ ಹರಿನಿರ್ಮಾಲ್ಯವಾಗಿರುವ ತುಲಸೀಮಂಜರಿಯನ್ನು ಧರಿಸಬೇಕು. ಇಂತಹ ಮಾನವನು ಮಾಡಿದ ಪಾಪಗಳೆಲ್ಲ ದೂರವಾಗುತ್ತವೆ. ಮರಣಸಮಯದಲ್ಲಿ ತುಲಸೀಮಂಜರಿಯನ್ನು ಧರಿಸಬೇಕು. ಎಲ್ಲ ಪಾಪಗಳಿಗೆ ಇದು ಪ್ರಾಯಶ್ಚಿತ್ತವಾಗಿದೆ.

**ಶರೀರಂ ದಹ್ಯತೇ ಯೇಷಾಂ ತುಲಸೀಕಾಷ್ಠವಹ್ನಿನಾ ।**
**ನ ತೇಷಾಂ ಪುನರಾವೃತ್ತಿಃ ವಿಷ್ಣುಲೋಕಾತ್ ಕಥಂಚನ ॥**

ತುಲಸಿಯ ಸನ್ನಿಧಾನ ಸಾಧಕರಿಗೆ ಅತ್ಯಂತಪ್ರಧಾನವಾಗಿದೆ. ಮರಣಕಾಲದಲ್ಲಿಯೂ ತುಲಸಿಯ ಸನ್ನಿಧಾನದಲ್ಲಿಯೇ ಮೃತನಾಗುವುದರಿಂದ ಸ್ವರ್ಗಾದಿಲೋಕಗಳು ಆಗುತ್ತವೆ ಎಂದು ಗರುಡಾದಿ ಪುರಾಣಗಳು ತಿಳಿಸುತ್ತವೆ. ಅಲ್ಲದೇ ಆ ದೇಹವನ್ನು ದಹನ ಮಾಡುವಾಗ ತುಲಸೀಕಾಷ್ಠಗಳನ್ನು ಉಪಯೋಗಿಸಬೇಕು. ತುಲಸೀಕಾಷ್ಠದ ವಹ್ನಿಯಲ್ಲಿ ಯಾರ ದೇಹವು ದಗ್ಧವಾಗಿದೆಯೋ ಅವನು ವಿಷ್ಣುಲೋಕಗಳನ್ನು ಪಡೆಯುತ್ತಾನೆ.

**ಗ್ರಸ್ತೋ ಯದಿ ಮಹಾಪಾಪೈಃ ಅಗಮ್ಯಾಗಮನಾದಿಭಿಃ ।**
**ಮೃತಃ ಶುದ್ಧ್ಯತಿ ದಾಹೇನ ತುಲಸೀಕಾಷ್ಠವಹ್ನಿನಾ ॥**

ತುಲಸೀಕಾಷ್ಠವಹ್ನಿಯಿಂದ ದೇಹದ ದಹನ ಮಾಡಬೇಕು. ಅವನು ಅಗಮ್ಯಾಗಮನ, ಅಪೇಯಪಾನ, ಅಭಕ್ಷ್ಯಭಕ್ಷಣ ಮುಂತಾದ ಮಹಾಪಾಪಗಳಿಂದ ಯುಕ್ತನಾಗಿದ್ದರೂ ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಪರಿಶುದ್ಧನಾಗುತ್ತಾನೆ. ಸುಖಲೋಕಗಳನ್ನು ಪಡೆಯುತ್ತಾನೆ.

**ದತ್ವಾ ತು ತುಲಸೀಕಾಷ್ಠಂ ಸರ್ವಾಂಗೇಷು ಮೃತಸ್ಯ ಚ ।**
**ಪಶ್ಚಾದ್ಯಃ ಕುರುತೇ ದಾಹಂ ಸೋಽಪಿ ಪಾಪಾತ್ಪ್ರಮುಚ್ಯತೇ ॥**

ಮೃತನಾದವನ ಎಲ್ಲ ಅಂಗಗಳಲ್ಲಿ ತುಲಸೀಕಾಷ್ಠವನ್ನಿಡಬೇಕು. ನಂತರ ದೇಹವನ್ನು ದಹನ ಮಾಡಬೇಕು. ಅಂಥವನು ಎಲ್ಲ ವಿಧವಾದ ಪಾಪಗಳಿಂದ ಮುಕ್ತನಾಗುತ್ತಾನೆ.

**ತೀರ್ಥಂ ಯದಿ ನ ಸಂಪ್ರಾಪ್ತಂ ಕೀರ್ತನಂ ಸ್ಮರಣಂ ಹರೇಃ ।**
**ತುಲಸೀಕಾಷ್ಠದಗ್ಧಸ್ಯ ನ ತಸ್ಯ ಪುನರಾವೃತಿಃ ॥**

ತಾನು ವಾಸಮಾಡುವ ಪ್ರದೇಶ ದೊಡ್ಡ ಕ್ಷೇತ್ರವಾಗಿದ್ದರೂ ಹತ್ತಿರದಲ್ಲಿಯ ಸಣ್ಣಕ್ಷೇತ್ರಕ್ಕೆ ಹೋಗಿ ಅಲ್ಲಿಯೇ ಪ್ರಾಣಪರಿತ್ಯಾಗವನ್ನು ಮಾಡಬೇಕು. ಆದರೆ ಎಲ್ಲರಿಗೂ ಈ ಸೌಭಾಗ್ಯ ದೊರೆಯುವುದಿಲ್ಲ. ಇಂಥವರು ಶ್ರೀಹರಿಯ ಕೀರ್ತನೆಯನ್ನು ಮಾಡಬೇಕು. ಶ್ರೀಹರಿಯನ್ನು ಸ್ಮರಿಸಬೇಕು. ಅವನ ದೇಹವನ್ನು ತುಲಸೀಕಾಷ್ಠದಿಂದ ದಹನಮಾಡಬೇಕು. ಅವನು ವಿಷ್ಣುಲೋಕವನ್ನು ಸೇರಿ ಸುಖಿಸುತ್ತಾನೆ.

**ಯದ್ಯೇಕಂ ತುಲಸೀಕಾಷ್ಠಂ ಮಧ್ಯೇ ಕಾಷ್ಠಶತಸ್ಯ ಹಿ ।**
**ದಾಹಕಾಲೇ ಭವೇನ್ಮುಕ್ತಿಃ ಪಾಪಕೋಟಿಯುತಸ್ಯ ಚ ॥**

ದಹನ ಮಾಡುವಷ್ಟು ತುಲಸೀಕಾಷ್ಠಗಳು ದೊರೆಯಲು ಸಾಧ್ಯವಿಲ್ಲ. ಇಂತಹ ವಿಧಾನವನ್ನು ಹೇಗೆ ಮಾಡಿದರು ಎಂದು ತಿಳಿಯಬೇಡಿ. ತುಲಸೀಕಾಷ್ಠಗಳು ಸಿಗದಿದ್ದರೂ ಪರವಾಗಿಲ್ಲ. ದಹನಕ್ಕೆ ಬೇಕಾದ ನೂರಾರು ಕಟ್ಟಿಗೆಗಳ ಮಧ್ಯದಲ್ಲಿ ಒಂದು ತುಲಸೀಕಾಷ್ಠವನ್ನಿಟ್ಟರೂ ಸಾಕು. ಕೋಟಿ-ಕೋಟಿಪಾಪಗಳೆಲ್ಲ ನಷ್ಟವಾಗುತ್ತವೆ.

**ಗಂಗಾಂಭಸೋ ವಿಶೇಷೇಣ ಯಾಂತಿ ತೋಯಾನಿ ಪುಣ್ಯತಾಮ್ ।**
**ತುಲಸೀಕಾಷ್ಠಮಿಶ್ರಾಣಿ ಯಾಂತಿ ದಾರೂಣಿ ಪೂತತಾಮ್ ॥**

ಗಂಗಾಜಲದ ಸಂಪರ್ಕದಿಂದ ಜಲವೆಲ್ಲವೂ ಪುಣ್ಯಪ್ರದವಾಗುತ್ತದೆ. ಗಂಗಾಜಲ ಎಂದೇ ಆ ಎಲ್ಲ ಜಲವನ್ನು ವ್ಯವಹರಿಸುತ್ತೇವೆ. ಹಾಗೆಯೇ ತುಲಸೀಕಾಷ್ಠದಿಂದ ಮಿಶ್ರವಾದ ಕಟ್ಟಿಗೆಗಳೆಲ್ಲವೂ ಪವಿತ್ರವಾಗುತ್ತವೆ. ಅವೆಲ್ಲವೂ ತುಲಸೀಕಾಷ್ಠದಷ್ಟೇ ಪವಿತ್ರವಾಗುತ್ತವೆ. ದಾಹಕಾಲದಲ್ಲಿ ಒಂದು ತುಲಸೀಕಾಷ್ಠವಿದ್ದರೂ ಎಲ್ಲ ಕಟ್ಟಿಗೆಗಳೂ ತುಲಸೀಕಾಷ್ಠಗಳಾಗುತ್ತವೆ. ತುಲಸೀಕಾಷ್ಠವಹ್ನಿಯಿಂದ ದಗ್ಧನಾದವನು ಪಾಪಗಳಿಂದ ಮುಕ್ತನಾಗುತ್ತಾನೆ.

**ದಹ್ಯಮಾನಂ ನರಂ ದೃಷ್ಟ್ವಾ ತುಲಸೀಕಾಷ್ಠವಹ್ನಿನಾ ।**
**ನೀಯಮಾನೋ ಯಮೇನಾಶು ವಿಷ್ಣುಲೋಕಂ ಸ ಗಚ್ಛತಿ ॥**

ಬ್ರಹ್ಮಹತ್ಯಾದಿಪಾಪಗಳನ್ನು ಮಾಡಿದ್ದಾನೆ. ಅವನನ್ನು ದಹನ ಮಾಡುವಾಗ ಯೋಗಾಯೋಗದಿಂದ ತುಲಸೀಕಾಷ್ಠವು ಪ್ರಾಪ್ತವಾಗಿದೆ. ಅವನ ಪಾಪಗಳನ್ನು ನೋಡಿ ನರಕಕ್ಕೆ ಒಯ್ಯಲು ಯಮಭಟರು ಬರುತ್ತಾರೆ. ತುಲಸೀಕಾಷ್ಠದಿಂದ ದಗ್ಧನಾಗಿದ್ದಾನೆ ಆದ್ದರಿಂದ ವಿಷ್ಣುದೂತರೂ ಬರುತ್ತಾರೆ. ಬಂದ ವಿಷ್ಣುದೂತರು ಯಮದೂತರನ್ನು ನಿಗ್ರಹಿಸಿ ಆ ಜೀವನನ್ನು ಅನುಗ್ರಹಿಸುತ್ತಾ ಸ್ವರ್ಗಾದಿಲೋಕಗಳಿಗೆ ಕರೆದೊಯ್ಯುತ್ತಾರೆ.

**ಜನ್ಮಕೋಟಿಸಹಸ್ರೈಸ್ತು ಪೂಜಿತೋ ಯೈಃ ಜನಾರ್ದನಃ ।**
**ದಹ್ಯಂತೇ ತೇ ನರಾಃ ಸರ್ವೇ ತುಲಸೀಕಾಷ್ಠವಹ್ನಿನಾ ॥**

ಕೋಟಿ-ಕೋಟಿವರ್ಷಗಳಿಂದ ಶ್ರೀಹರಿಯನ್ನು ಪೂಜಿಸಿ ಪುಣ್ಯವನ್ನು ಸಂಪಾದಿಸಿರಬೇಕು. ಆ ಪುಣ್ಯದ ಪ್ರಭಾವದಿಂದಲೇ ದಹನಕಾಲದಲ್ಲಿ ತುಲಸೀಕಾಷ್ಠಗಳು ಲಭ್ಯವಾಗುತ್ತವೆ. ತುಲಸೀಕಾಷ್ಠದ ವಹ್ನಿಯಿಂದ ದಗ್ಧವಾಗುವ ಯೋಗ ಅಂತಹ ಮಹಾನುಭಾವರಿಗೆ ಮಾತ್ರ ಪ್ರಾಪ್ತವಾಗುತ್ತದೆ.

**ತುಲಸೀಮೂಲಕ್ಕೆ ತರ್ಪಣೋದಕ**

**ತುಲಸೀಮೂಲಮಧ್ಯೇ ತು ಯಃ ಕ್ಷಿಪೇತ್ತರ್ಪಣೋದಕಮ್ ।**
**ಭವಂತಿ ಪಿತರಸ್ತೃಪ್ತಾಃ ದ್ವಾದಶಾಬ್ದಾನಿ ಭೂಮಿಪ ॥**

ಪಿತೃಗಳ ತೃಪ್ತಿಗಾಗಿ ನಿತ್ಯವೂ ತರ್ಪಣವನ್ನು ನೀಡಬೇಕು. ಎಲ್ಲರೂ ನೀಡುತ್ತೇವೆ. ತರ್ಪಣದ ಆ ಜಲವನ್ನು ತುಲಸಿಯ ಮೂಲದಲ್ಲಿ ವಿಸರ್ಜಿಸಬೇಕು. ಹೀಗೆ ಮಾಡುವುದರಿಂದ ಹನ್ನೆರಡು ವರ್ಷಗಳ ತನಕ ಪಿತೃಗಳು ತೃಪ್ತರಾಗುತ್ತಾರೆ.

**ತುಲಸ್ಯಾ(ಂ) ತರ್ಪಣಂ ಯೇ ಚ ಪಿತ್ರ್ಯನುದ್ದಿಶ್ಯ ಮಾನವಾಃ ।**
**ಕುರ್ವಂತಿ ತೇಷಾಂ ಪಿತರಃ ತೃಪ್ತಾ ವರ್ಷಾಯುತಂ ಜಲೈಃ ॥ -ಪ.ಪು**

ತುಲಸೀತರ್ಪಣವನ್ನು ತುಲಸೀಮೂಲದಲ್ಲಿ ಕೊಡಬೇಕೆಂದು ಪದ್ಮಪುರಾಣದ ಈ ವಚನವು ತಿಳಿಸುತ್ತದೆ. ತುಲಸಿಯನ್ನು ಕೈಯಲ್ಲಿ ಧರಿಸಿಯೂ ತರ್ಪಣವನ್ನು ನೀಡಬೇಕೆಂದೂ ಹಲವರು ಹೇಳುತ್ತಾರೆ. ತುಲಸೀಮೂಲದಲ್ಲಿ ತರ್ಪಣವನ್ನು ನೀಡಿದರೂ, ತುಲಸಿಯನ್ನು ಕೈಯಲ್ಲಿ ಧರಿಸಿ ತರ್ಪಣವನ್ನೂ ನೀಡಿದರೂ ಪಿತೃಗಳು ಹತ್ತುಸಾವಿರವರ್ಷದ ವರೆಗೆ ಸಂತುಷ್ಟರಾಗುತ್ತಾರೆ. ಅರ್ಥಾತ್ ಅಷ್ಟು ಪ್ರಿಯಕರವಾಗುತ್ತದೆ ಎಂದು ತಾತ್ಪರ್ಯ.

**ಪಿಂಡಗಳಿಗೆ ತುಲಸ್ಯರ್ಚನೆ**

**ಪಿತೃಪಿಂಡಾರ್ಚನಂ ಶ್ರಾದ್ಧೇ ಯೈಃ ಕೃತಂ ತುಲಸೀದಲೈಃ ।**
**ತರ್ಪಿತಾಃ ಪಿತರೋಽತ್ಯರ್ಥಂ ಯಾವಚ್ಚಂದ್ರಾರ್ಕಮೇದಿನೀ ॥ -ಗ.ಪು**

ಶ್ರಾದ್ಧದಲ್ಲಿ ತುಲಸೀದಲಗಳಿಂದ ಪಿತೃಪಿಂಡಗಳ ಅರ್ಚನೆಯನ್ನು ಮಾಡಬೇಕು. ಹೀಗೆ ಮಾಡುವುದರಿಂದ ಪಿತೃಗಳಿಗೆ ಅತಿಯಾದ ಸಂತೋಷವಾಗುತ್ತದೆ. ಚಂದ್ರ-ಸೂರ್ಯ-ಭೂಮಿ ಇರುವ ತನಕ ಪಿತೃಗಳು ತೃಪ್ತರಾಗುತ್ತಾರೆ. ಆದರೆ ಆ ತುಲಸೀ ಶ್ರೀಹರಿಯ ನಿರ್ಮಾಲ್ಯವಾಗಿರಬೇಕು. ನಿರ್ಮಾಲ್ಯವಾಗಿರದ ತುಲಸಿಯನ್ನು ಸರ್ವಥಾ ಉಪಯೋಗಿಸಬಾರದು. ಈ ವಿಷಯದಲ್ಲಿ ಎಚ್ಚರವಿರಬೇಕು.

**ನೈವೇದ್ಯಂ ಪಚ್ಯತೇ ಯಸ್ತು ತುಲಸೀಕಾಷ್ಠಪಾವಕೇ ।**
**ಮೇರುತುಲ್ಯಂ ಭವೇದನ್ನಂ ಪಿತೃಣಾಂ ದತ್ತಮಕ್ಷಯಮ್ ॥**

ತುಲಸೀಕಾಷ್ಠದಿಂದಲೇ ದೇವರ ನೈವೇದ್ಯವನ್ನು ಸಿದ್ಧಪಡಿಸಬೇಕು. ಆದರೆ ಅಷ್ಟು ಕಾಷ್ಠಗಳು ಪ್ರತಿನಿತ್ಯ ದೊರೆಯುವುದು ಅಸಾಧ್ಯ. ಕಟ್ಟಿಗೆಗಳ ಮಧ್ಯದಲ್ಲಿ ಒಂದು ತುಲಸೀಕಾಷ್ಠವನ್ನಾದರೂ ಇಡಬೇಕು. ತುಲಸೀಕಾಷ್ಠವಹ್ನಿಯಲ್ಲಿ ಪಕ್ವವಾದ ಅನ್ನವು

ಮೇರುವಿಗೆ ಸಮವಾಗುತ್ತದೆ. ಆ ಅನ್ನವನ್ನು ದೇವರಿಗೆ ನಿವೇದಿಸಬೇಕು. ನಂತರ ಪಿತೃಗಳಿಗೆ ಸಮರ್ಪಿಸಬೇಕು. ಅಕ್ಷಯವಾದ ತೃಪ್ತಿಯು ಪಿತೃಗಳಿಗಾಗುತ್ತದೆ.

**ಗಯಾಶ್ರಾದ್ಧ ಮಾಡಲಾಗದಿದ್ದರೆ**

**ನ ದದಾತಿ ಗಯಾಂ ಗತ್ವಾ ಪಿಂಡಂ ಪುತ್ರೋ ಮಹಾಮುನೇ ।**
**ತುಲಸೀಕಾನನೇ ಶ್ರಾದ್ಧಂ ದತ್ವಾ ಸಂತಾರಯೇತ್ಪಿತೃನ್ ॥**

ಅದೆಷ್ಟೋ ಜನರಿಗೆ ಗಯಾದಲ್ಲಿ ಶ್ರಾದ್ಧವನ್ನು ಮಾಡಲಾಗುವುದೇ ಇಲ್ಲ. ಅಂಥವರು ತುಲಸಿಯ ವನದಲ್ಲಿ ಶ್ರಾದ್ಧವನ್ನು ಆಚರಿಸಬೇಕು. ಗಯಾಶ್ರಾದ್ಧಕ್ಕೆ ಇದು ಪ್ರತಿನಿಧಿಯಾಗಿದೆ ಎಂದು ತಿಳಿಯಬೇಕು. ಇದರಿಂದ ಪಿತೃಗಳ ಉದ್ಧಾರವಾಗುತ್ತದೆ.

ಗಯಾಕ್ಕೆ ಹೋಗಿ ಶ್ರಾದ್ಧ ಮಾಡುವ ಕಾರಣವಿಲ್ಲ ಎಂದು ಭಾವಿಸುವುದು ಸರಿಯಲ್ಲ. ಪ್ರಯತ್ನಪೂರ್ವಕವಾಗಿ ಗಯಾಕ್ಕೆ ಹೋಗಿ ಶ್ರಾದ್ಧವನ್ನು ಮಾಡಲೇಬೇಕು. ಬಲವತ್ಕಾರಣಗಳಿಂದ ಇದು ಸಾಧ್ಯವಾಗದಿರುವಾಗ ಮಾತ್ರ ಈ ರೀತಿಯಾಗಿ ಮಾಡಬೇಕು.

**ತುಲಸೀಲಕ್ಷಾರ್ಚನೆ**

**ತುಲಸೀದಲಲಕ್ಷೇಣ ಯೋಽರ್ಚಯೇದ್ರುಕ್ಮಿಣೀಪತಿಮ್ ।**
**ಜನ್ಮಾರ್ಜಿತಸಹಸ್ರಸ್ಯ ಪಾಪಸ್ಯ ಕುರುತೇ ಕ್ಷಯಮ್ ॥ -ಪ.ಪು**

ಲಕ್ಷತುಲಸೀದಳಗಳಿಂದ ಶ್ರೀಕೃಷ್ಣನನ್ನು ಅರ್ಚಿಸಬೇಕು. ಅರ್ಚಿತನಾದ ಶ್ರೀಕೃಷ್ಣ ಸಂತುಷ್ಟನಾಗುತ್ತಾನೆ. ಅರ್ಚಕನ ಅನಂತಜನ್ಮಗಳ ಪಾಪಗಳನ್ನು ಪರಿಹರಿಸುತ್ತಾನೆ.

**ಸುಗಂಧಿತುಲಸೀಪತ್ರೈಃ ಪ್ರತಿಮಾಯಾಃ ಸಮಂತತಃ ।**
**ನಿಶ್ಛಿದ್ರಮಾಚರೇದ್ಯಸ್ತು ಸೋಽನಂತಫಲಮಾಪ್ನುಯಾತ್ ॥**

ತುಲಸೀಪತ್ರ ಸುಗಂಧಿಯಾಗಿರುತ್ತದೆ. ಅಂತಹ ತುಲಸೀಪತ್ರಗಳಿಂದ ದೇವರ ಪ್ರತಿಮೆಯನ್ನು ಅರ್ಚಿಸಬೇಕು. ಅರ್ಚಿಸುವಾಗ ಸುತ್ತಲೂ ಯಾವ ಛಿದ್ರವೂ ಇಲ್ಲದ ಹಾಗೆ ನೋಡಿಕೊಳ್ಳಬೇಕು. ಹೀಗೆ ಮಾಡುವುದರಿಂದ ನಿಶ್ಚಿತವಾಗಿಯೂ ಅನಂತವಾದ ಫಲವನ್ನು ಪಡೆಯುತ್ತಾನೆ. ಅಂತೂ ಲಕ್ಷಾರ್ಚನೆಯಿಂದ ಪಾಪಗಳನ್ನು ಕಳೆದುಕೊಳ್ಳುತ್ತಾನೆ. ನಿಶ್ಛಿದ್ರವಾಗಿಸುವುದರಿಂದ ಅನಂತಫಲರೂಪವಾದ ಮುಕ್ತಿಯನ್ನು ಪಡೆಯುತ್ತಾನೆ.

**ಶ್ರೀವಿದ್ಯಾಧೀಶರು ಮಾಡಿದ ಕೋಟಿ ತುಲಸ್ಯರ್ಚನೆ**

ಶ್ರೀಮದುತ್ತರಾದಿಮಠದಲ್ಲಿ ವಿರಾಜಿತರಾದ ಯತಿಸಾರ್ವಭೌಮರು ಶ್ರೀವಿದ್ಯಾಧೀಶತೀರ್ಥರು. ಅವರ ಅತಿದಿವ್ಯವಾದ ಚರಿತೆಯನ್ನು ವರ್ಣಿಸುವ ಕಾವ್ಯ ಶ್ರೀವಿದ್ಯಾಧೀಶವಿಜಯ. ಅಲ್ಲಿ ಮೂಡಿಬಂದ ಇತಿಹಾಸ ಈ ರೀತಿಯಾಗಿದೆ-

**ತುಲಸೀದಲಕೋಟಿಭಿರ್ಮುದಾ ಕಲಶೇ ಸಂಭೃತಪಾವನಾಂಬುಭಿಃ ।**
**ವಿಧಿವಚ್ಚುಚಿರೇಷ ವಿಗ್ರಹಂ ಯತಿರಾಡಾರ್ಚಿಚದಚ್ಯುತಾಸ್ಪದಮ್ ॥೬.೩೧॥**

ಶ್ರೀಪಾದರು ಯಾತ್ರಾಕ್ರಮೇಣ ಶ್ರೀಕ್ಷೇತ್ರ ಉಡುಪಿಗೆ ಬಂದರು. ಚಂದ್ರನ ಕಾಂತಿಯನ್ನೂ ಧಿಕ್ಕರಿಸುವ ಶ್ರೀಕೃಷ್ಣನನ್ನು ಉಡುಪಿಯಲ್ಲಿ ದರ್ಶನಮಾಡಿಕೊಂಡರು. ಆ ಕೃಷ್ಣನಿಗೆ ಅತಿಪಾವನವಾದ ಜಲದಿಂದ ಅಭಿಷೇಕಮಾಡಿದರು. ನಂತರ ಕೋಟಿ ತುಲಸೀದಲಗಳಿಂದ ಶ್ರೀಕೃಷ್ಣನನ್ನು ಅರ್ಚಿಸಿದರು.

ಶ್ರೀವಿದ್ಯಾಧೀಶರು ತೋರಿದ ಪವಾಡಗಳಲ್ಲಿ ಇದು ಅತ್ಯದ್ಭುತವಾದ ಪವಾಡವೆಂದು ಖಂಡಿತವಾಗಿಯೂ ಉಲ್ಲೇಖಿಸಬಹುದು. ಅಜ್ಞಾನಿಗಳಾದ ನಮಗೆ ಈ ಇತಿಹಾಸವನ್ನು ಕೇಳಿದಾಗ ಅನೇಕ ಸಂಶಯಗಳು ಬರುವಲ್ಲಿ ಸಂದೇಹವಿಲ್ಲ. ಆದರೆ ವಿದ್ಯಾಧೀಶತೀರ್ಥರು ನಮ್ಮಂತೆ ಸಾಮಾನ್ಯರಲ್ಲ ಎಂಬುದಂತೂ ನಿಶ್ಚಿತ. ಅಂಥವರಿಗೆ ಇದಾವುದೂ ಅಸಾಧ್ಯವಲ್ಲ ಎಂದು ತಿಳಿಯಬೇಕು.

ಭಗವದರ್ಚಿತವಾದ ತುಲಸಿಯಲ್ಲಿ ಶ್ರೀವಿದ್ಯಾಧೀಶರಿಗೆ ಅಪಾರವಾದ ಶ್ರದ್ಧೆ ಹೇಗಿತ್ತೆಂಬುದು ಈ ವೃತ್ತಾಂತದಿಂದ ತಿಳಿದುಬರುತ್ತದೆ-

**ಹರಿಪಾದಾರ್ಪಿತೈಃ ನಿತ್ಯಂ ತುಲಸೀದಲಮಾತ್ರಕೈಃ ।**
**ಉಪದಂಶವದಂಧಾಶ್ನನ್ನಿಂಧೇ ಸ್ಮ ಯತಿಸಿಂಧುರಃ ॥೭.೫೭॥**

ಮತ್ತೊಂದು ಪ್ರಸಂಗ. ಶ್ರೀವಿದ್ಯಾಧೀಶತೀರ್ಥರು ಶ್ರೀಕ್ಷೇತ್ರ ಉಡುಪಿಯಲ್ಲಿ ಚಾತುರ್ಮಾಸ್ಯಕ್ಕೆ ಕುಳಿತಿದ್ದಾರೆ. ಚಾತುರ್ಮಾಸ್ಯದ ಪವಿತ್ರವಾದ ಸಂದರ್ಭದಲ್ಲಿ ಅವರು ವಿಷ್ಣ್ವರ್ಪಿತವಾದ ತುಲಸಿಯನ್ನು ಮಾತ್ರ ಅನ್ನದ ಜೊತೆ ಸೇರಿಸಿಕೊಂಡು ಭೋಜನ ಮಾಡುತ್ತಿದ್ದರು. ತುಪ್ಪ-ಉಪ್ಪು-ಕಟ್ಟು-ಹಿಟ್ಟು-ಪಲ್ಯ-ಮೊಸರು-ಮಜ್ಜಿಗೆ ಇತ್ಯಾದಿಗಳನ್ನು ಪರಿತ್ಯಜಿಸಿದರು. ತುಲಸೀದಲ-ಅನ್ನವನ್ನು ಮಾತ್ರ ಸ್ವೀಕರಿಸಿದರು. ಹೀಗೆ ಮಾಡುವುದರಿಂದ ಶ್ರೀವಿದ್ಯಾಧೀಶತೀರ್ಥರು ಮತ್ತಿಷ್ಟು ಪ್ರಕಾಶಪುಂಜರಾದರು.

ತುಲಸಿಯ ಅರ್ಚನೆಯಿಂದ, ವಿಷ್ಣುನಿರ್ಮಾಲ್ಯತುಲಸೀಸ್ವೀಕಾರದಿಂದ ಅತಿಶಯವಾದ ಫಲವು ಸಿಗುತ್ತದೆ ಎನ್ನುವುದನ್ನು ಶ್ರೀವಿದ್ಯಾಧೀಶತೀರ್ಥರು ಪ್ರತ್ಯಕ್ಷವಾಗಿ ಎಲ್ಲರಿಗೂ ತೋರಿಸಿಕೊಟ್ಟರು.

**ಸರ್ವವೂ ತುಲಸೀಯುಕ್ತವಾಗಬೇಕು**

ಹೆಚ್ಚೇನು ಹೇಳುವುದು. ಎಲ್ಲವೂ ತುಲಸೀಯುಕ್ತವಾಗಬೇಕೆಂದು ಪದ್ಮಪುರಾಣದ ಈ ವಚನವು ತಿಳಿಸುತ್ತದೆ-

**ಪೂಜಾ ನ ಸಾ ಯಾ ತುಲಸೀಂ ವಿನಾ ಕೃತಾ**
**ಸ್ನಾನಂ ನ ತದ್ಯತ್ತುಲಸೀಂ ವಿನಾ ಕೃತಮ್ ।**
**ಭುಕ್ತಂ ನ ತದ್ಯತ್ತುಲಸೀವಿವರ್ಜಿತಮ್**
**ಪೀತಂ ನ ತದ್ಯತ್ತುಲಸೀವಿವರ್ಜಿತಮ್ ।। -ಪ.ಪು**

ತುಲಸಿ ಇಲ್ಲದೇ ಮಾಡಿದ ಪೂಜೆ ಪೂಜೆಯಲ್ಲ. ತುಲಸಿ ಇಲ್ಲದೇ ಮಾಡಿದ ಸ್ನಾನ ಸ್ನಾನವಲ್ಲ. ಅರ್ಥಾತ್ ಸ್ನಾನ ಮಾಡುವಾಗ ತುಲಸೀದಲದಿಂದ ಪ್ರೋಕ್ಷಣೆಮಾಡಿಕೊಳ್ಳಬೇಕು. ಅಥವಾ ತುಲಸೀಸನ್ನಿಧಿಯಲ್ಲಿ ಸ್ನಾನ ಮಾಡಬೇಕು. ಅಥವಾ ತುಲಸಿಯನ್ನು ಸ್ಮರಿಸುತ್ತಾ ಸ್ನಾನ ಮಾಡಬೇಕೆಂದು ತಾತ್ಪರ್ಯ. ಆದ್ದರಿಂದಲೇ ''ತುಲಸೀಸನ್ನಿಧಾನೇ ಸ್ನಾನಮಹಂ ಕರಿಷ್ಯೇ'' ಎಂಬುದಾಗಿ ಸ್ನಾನಸಂಕಲ್ಪದ ಸಂಪ್ರದಾಯ ಹಿರಿಯರಲ್ಲಿದೆ ಎಂಬುದನ್ನು ತಿಳಿಯಬೇಕು. ತುಲಸಿ ಇಲ್ಲದ ಭೋಜನ ಭೋಜನವಲ್ಲ. ತುಲಸೀ ಇಲ್ಲದ ಪಾನ ಅದು ಪಾನವೂ ಅಲ್ಲ.

ಆದ್ದರಿಂದ ಈ ಎಲ್ಲ ಪ್ರಸಂಗದಲ್ಲಿ ತುಲಸಿಯನ್ನು ಉಪಯೋಗಿಸಬೇಕು. ಕುಡಿಯುವ ನೀರಿಗೆ, ತಿನ್ನುವ ಪದಾರ್ಥಕ್ಕೆ ಒಂದು ದಲ ಶ್ರೀತುಲಸಿಯನ್ನು ಹಾಕಿ ನೈವೇದ್ಯ ಮಾಡಿ ಅದೇ ನೀರನ್ನು ಕುಡಿಯಲು ಉಪಯೋಗಿಸಬೇಕು. ತುಲಸಿಯ ಸ್ಮರಣೆಯನ್ನಾದರೂ ಮಾಡಬೇಕು.

**ತುಲಸಿಯಿಂದಲೇ ದಾನವೂ ಪೂರ್ಣ**

**ತುಲಸ್ಯಾ ಸಹಿತಂ ದತ್ತಂ ತತ್ ಶ್ರೀಕೃಷ್ಣಸ್ಯ ತುಷ್ಟಯೇ ।**
**ತುಲಸ್ಯಾ ಸಹಿತಂ ದಾನಂ ತದ್ದಾನಂ ಚ ಸುಖಾಪ್ತಯೇ ।।ಶಾಂ.ಸಂ।।**

ವಿಹಿತವಾದ ಪದಾರ್ಥಗಳನ್ನು ದಾನಮಾಡಬೇಕು. ದಾನಮಾಡುವಾಗ ಶ್ರೀಕೃಷ್ಣನಿಗೆ ಆಯಾ ಪದಾರ್ಥಗಳನ್ನು ಸಮರ್ಪಿಸಬೇಕು. ಮತ್ತು ಅದರ ಮೇಲೆ ನಿರ್ಮಾಲ್ಯವಾದ ತುಲಸಿಯನ್ನು ಇಡಬೇಕು. ತುಲಸೀಯುಕ್ತವಾಗಿಯೇ

ಪದಾರ್ಥಗಳನ್ನು ದಾನಮಾಡಬೇಕು. ಈ ರೀತಿಯಾದ ವಿಧಾನದಿಂದಲೇ ಶ್ರೀಹರಿ ಪ್ರಸನ್ನನಾಗುತ್ತಾನೆ. ಸಂತುಷ್ಟನಾಗುತ್ತಾನೆ. ಈವಿಧವಾದ ದಾನದಿಂದಲೇ ಮನುಷ್ಯನಿಗೆ ಸುಖವಾಗುತ್ತದೆ.

**ಒಂದು ದಳ ಶ್ರೀತುಳಸಿ ಬಿಂದುಗಂಗೋದಕವ**
**ಇಂದಿರಾರಮಣಗೆ ಅರ್ಪಿತವೆನ್ನುತ ।**
**ಒಂದೇ ಮನದಲಿ ಸಿಂಧುಶಯನ ಮುಕುಂದ ಎನೆ**
**ಎಂದೆಂದು ವಾಸಿಪನಾಮಂದಿರದೊಳಗೆ ॥**

**ಹೂವ ತರುವರ ಮನೆಗೆ ಹುಲ್ಲ ತರುವ ।**
**ಅವ್ವ ಲಕುಮಿಯ ರಮಣ ಅವಗಿಲ್ಲ ಗರುವ ॥**

ಪುರಂದರ ದಾಸರ ಅದ್ಭುತವಾದ ಭಾವಗಳಿಗೆ ಸೆರೆಮನೆಯಾಗಿದೆ ಈ ಪದ್ಯ. ಭಗವಂತನಿಗೆ ಬೇಕಾದದ್ದು ಕೇವಲ ಒಂದು ದಳ ತುಲಸಿಮಾತ್ರ. ಒಂದು ಬಿಂದು ಗಂಗೋದಕ. ವಿಹಿತವಾದದ್ದು ಎಷ್ಟು ಸ್ವಲ್ಪವಿದ್ದರೂ ದೇವರು ಸ್ವೀಕರಿಸುತ್ತಾನೆ. ಸ್ವಲ್ಪ ಎಂದು ಸಂಕೋಚ ಮಾಡಿಕೊಳ್ಳುವ ಕಾರಣವಿಲ್ಲ. ವಿಹಿತವಾದ ಪದಾರ್ಥವನ್ನು ಭಕ್ತಿಪೂರ್ವಕವಾಗಿ ಸ್ವಲ್ಪ ನೀಡಿದರೂ ಅವನನ್ನು ಅನುಗ್ರಹದೃಷ್ಟಿಯಿಂದ ನೋಡುತ್ತಾನೆ.

ಪರ್ವತದಷ್ಟು ಅವಿಹಿತವಾದ ಪದಾರ್ಥಗಳನ್ನು ತಂದಿಟ್ಟರೂ ದೇವರು ಆ ಕಡೆ ನೋಡುವುದಿಲ್ಲ. ಅವನನ್ನು ನಿಗ್ರಹದೃಷ್ಟಿಯಿಂದಲೇ ನೋಡುತ್ತಾನೆ ಭಗವಂತ. ನಮಗಿರುವ ಮನಸ್ಸು ಒಂದೇ. ಅಲ್ಲಿ ದೇವರು ಮಾತ್ರ ಇರಬೇಕು. ಶ್ರೀಹರಿಮಹಿಮಾಸಿಂಹಗರ್ಜನೆ ಮಾತ್ರ ಹೃದಯಗುಹೆಯಲ್ಲಿ ಮೊಳಗುತ್ತಿರಬೇಕು. ಆಗ ನಾಯಿ-ನರಿಗಳಂತಹ ವಿಷಯಗಳು ಗುಹೆಯನ್ನು ಬಿಟ್ಟು ಓಡಿಹೋಗುತ್ತವೆ. ಅಂತಹ ಹೃದಯಗುಹೆಯಲ್ಲಿ ಭಗವಂತ ಬಂದು ಆನಂದದಿಂದ ನೆಲೆಸುತ್ತಾನೆ.



# ಬೃಹದ್ಧರ್ಮಪುರಾಣದಲ್ಲಿಬಂದಿರುವ ವಿಶಿಷ್ಟವಾದ ''ತುಲಸೀಮಹಿಮೆ''

ರುದ್ರದೇವರು ಪ್ರತ್ಯಕ್ಷವಾಗಿರುವಾಗಲೇ ತುಲಸಿಯು ದೇವರನ್ನು ಸ್ತುತಿಸಿದಳು. ಶ್ರೀಕೃಷ್ಣ ಆ ಸ್ತುತಿಯಿಂದ ಸಂತುಷ್ಟನಾದ. ತುಲಸಿಗೆ ವರಪ್ರದವಾದ ಮಾತುಗಳನ್ನಾಡಿದ.

ನಿನ್ನಲ್ಲಿ ರಮೆಯ ಸನ್ನಿಧಾನವಿದೆ. ಹೀಗಾಗಿ ಶ್ರೇಷ್ಠಳಾಗಿರುವಿ. ವೃಂದೆಗೂ ಪ್ರಿಯಳಾಗಿರುವಿ. ಚಂದ್ರ-ನಕ್ಷತ್ರಗಳಿರುವ ತನಕ ನನ್ನ ಪ್ರೀತಿಗಾಗಿ ಸ್ಥಿರವಾಗಿರು. ದೇವತೆಗಳು, ದೈತ್ಯರು, ಮನುಷ್ಯರು, ಸರ್ಪಾದಿಪ್ರಾಣಿಗಳು ಯಾವಾಗಲೂ ನಿನಗೆ ನತಮಸ್ತಕರಾಗಿ ಇರುತ್ತಾರೆ. ಇವತ್ತಿನಿಂದ ನಿನ್ನ ಪತ್ರವಿಲ್ಲದೇ ಯಾವ ಪೂಜೆಯನ್ನೂ ನಾನು ಸ್ವೀಕರಿಸುವುದಿಲ್ಲ.

ನಾನಾವಿಧವಾದ ಪುಷ್ಪಭೂಷಣಗಳಿಂದ ಯುಕ್ತವಾದ ನೈವೇದ್ಯಗಳೆಲ್ಲ ಒಂದು ಕಡೆ. ನೀನು ಮಾತ್ರ ಮತ್ತೊಂದು ಕಡೆ. ನಾನು ವಾಲುವುದು ನಿನ್ನ ಕಡೆಗೆಯೇ. ಆ ಎಲ್ಲ ಪದಾರ್ಥಗಳ ಜೊತೆಯಲ್ಲಿ ನೀನಿದ್ದರೆ ಮಾತ್ರ ನಾನು ಪ್ರೀತನಾಗುತ್ತೇನೆ. ದ್ವಾದಶಾಕ್ಷರಮಂತ್ರದಂತೆ ನೀನು ಶ್ರೇಷ್ಠಳಾಗಿರುವಿ.

ನಿನಗೆ ಪ್ರದಕ್ಷಿಣೆ ಹಾಕಿ, ದೀರ್ಘದಂಡ ಪ್ರಣಾಮಗಳನ್ನು ಹಾಕಬೇಕು. ಅವರು ಸಪ್ತದ್ವೀಪಪೃಥಿವಿಗೆ ಪ್ರದಕ್ಷಿಣೆ ಹಾಕಿದ ಪುಣ್ಯವನ್ನು ಪಡೆಯುತ್ತಾರೆ. ಶ್ರಾದ್ಧದಲ್ಲಿ, ತರ್ಪಣದಲ್ಲಿ, ದಾನದಲ್ಲಿ, ನೈವೇದ್ಯದಲ್ಲಿ, ನಿನ್ನ ಪತ್ರವಿರಬೇಕು. ಇಲ್ಲದಿದ್ದರೇ ಆ ಕರ್ಮ ಪರಿಪೂರ್ಣವಾದ ರೀತಿಯಲ್ಲಿ ಫಲಪ್ರದವಾಗುವುದಿಲ್ಲ. ತುಲಸೀಪತ್ರಗಳಿಂದ ನನ್ನ ಪೂಜೆಯನ್ನು ಮಾಡಿದಾಗ ದೇವತೆಗಳೆಲ್ಲರೂ ಸಂತುಷ್ಟರಾಗುತ್ತಾರೆ. ಕಾರ್ತಿಕಮಾಸದಲ್ಲಿ ಒಂದು ತುಲಸೀಪತ್ರವನ್ನು ನನಗೆ ನೀಡಿದರೂ ಸಾಕು. ಅಶ್ವಮೇಧಯಾಗದ ಫಲವನ್ನು ಅವನಿಗೆ ನೀಡುತ್ತೇನೆ. ವೈಶಾಖಮಾಸದಲ್ಲಿ ತುಲಸೀಪತ್ರಗಳಿಂದ ನನಗೆ ಮೆದುವಾದ ಹಾಸಿಗೆಯನ್ನು ನಿರ್ಮಿಸಬೇಕು. ಅಲ್ಲಿ ನನ್ನನ್ನು ಮಲಗಿಸಬೇಕು. ಅವನಿಗೆ ನನ್ನ ಲೋಕವನ್ನೇ ನಾನು ನೀಡುತ್ತೇನೆ. ವೈಶಾಖಮಾಸದಲ್ಲಿ ತುಲಸೀಪತ್ರಸಹಿತವಾದ ಜಲದಿಂದ ನನ್ನ ಅಭಿಷೇಕವನ್ನು ಮಾಡಬೇಕು. ಅವನನ್ನು ಅಮೃತದ ಸಮುದ್ರದಲ್ಲಿ ಮುಳುಗಿಸುತ್ತೇನೆ. ಆಷಾಢಮಾಸದಲ್ಲಿ ತುಲಸೀಪತ್ರದ ರಸದಿಂದ ಸುವಾಸಿತವಾದ ಜಲವನ್ನು ನನಗೆ ನೀಡಬೇಕು. ಕ್ರಮವಾಗಿ ಅವನನ್ನು ಮುಕ್ತನನ್ನಾಗಿ ಮಾಡುತ್ತೇನೆ.

ಭೂಮಿಯಲ್ಲಿ ಬಿದ್ದ ಹೂವು ಅರ್ಚನೆಗೆ ಶುದ್ಧವಲ್ಲ. ಆದರೆ ತುಲಸೀಪತ್ರವು ಭೂಮಿಯಲ್ಲಿ ಬಿದ್ದರೂ ಪವಿತ್ರವೇ ಆಗಿದೆ. ಶುದ್ಧವಾದ ಜ್ಞಾನ ನನಗಿದೆ. ಆ ತುಲಸೀಪತ್ರವನ್ನು ನಾನು ಶಿರಸಾ ಧರಿಸುತ್ತೇನೆ. ಆ ಪತ್ರವನ್ನು ನಾನು ಸ್ವೀಕರಿಸುತ್ತೇನೆ. ತುಲಸೀಪತ್ರದಿಂದ ಯುಕ್ತವಾದ ಅನ್ನ ಪರಮಪವಿತ್ರ. ಆ ಅನ್ನವನ್ನೇ ಎಲ್ಲರೂ ಸ್ವೀಕರಿಸಬೇಕು. ಅದು ಅನ್ನವಲ್ಲ. ಅದುವೇ ನಿಜವಾದ ಅಮೃತ. ಭಾಗ್ಯವಂತರಿಗೆ ಮಾತ್ರ ಅಂತಹ ಅನ್ನವು ತಿನ್ನಲು ಲಭ್ಯವಾಗುತ್ತದೆ. ಗಂಗಾಜಲದಲ್ಲಿ ತುಲಸೀಪತ್ರವನ್ನು ಸೇರಿಸಬೇಕು. ದೇವರಿಗೆ ನಿವೇದಿಸಿ ಆ ಜಲವನ್ನು ಸ್ವೀಕರಿಸಬೇಕು. ಅವನು ನನ್ನ ಭಕ್ತನಾಗುತ್ತಾನೆ. ಮುಕ್ತನಾಗುತ್ತಾನೆ. ಇದು ಸತ್ಯ. ಇದು ಸತ್ಯ. ಈ ವಿಷಯವನ್ನು ನಾನು ಶಪಥಪೂರ್ವಕವಾಗಿ ಹೇಳುತ್ತೇನೆ. ತುಲಸೀಪತ್ರವನ್ನು ಮುಟ್ಟಿ ಶಪಥವನ್ನು ಮಾಡಿದ ಮೇಲೆ ಆ ಮಾತನ್ನು ನಡೆಸಬೇಕು. ಆ ಮಾತು ಸುಳ್ಳು ಮಾಡಿದರೆ ಎಂದಿಗೂ ಅವನು ನರಕದಿಂದ ನಿವೃತ್ತನಾಗುವುದಿಲ್ಲ.

ತುಲಸೀಕಾಷ್ಠಮಾಲೆಯನ್ನು ಧರಿಸಬೇಕು. ತುಲಸಿಯಿಂದ ತೇಯ್ದ ಗಂಧವನ್ನು ಧರಿಸಬೇಕು. ತಂದೆಗೆ ಮಗನಿದ್ದಂತೆ ನಾನು ಅವನಿಗೆ ವಶವಾಗಿ ಇರುತ್ತೇನೆ. ಅವನ ಅಭೀಷ್ಟಗಳನ್ನೆಲ್ಲ ಈಡೇರಿಸುತ್ತೇನೆ. ಪರಮಾತ್ಮ ತುಲಸಿಗೆ ಈ ರೀತಿಯಾಗಿ ವರಗಳನ್ನು ನೀಡಿದ. ಭೂಲೋಕದಲ್ಲಿಯ ಜನರ ದೈವದ ಸ್ಥಾನದಲ್ಲಿ ಅವಳನ್ನು ಅಭಿಷೇಕಮಾಡಿದ. ರುದ್ರಾದಿದೇವತೆಗಳಿಂದ ಸಹಿತನಾಗಿ ಅದೃಶ್ಯನಾದ. ಹೀಗೆ ಪಾರ್ವತಿಯು ತನ್ನ ಗೆಳತಿಯರಿಗೆ ಹೇಳಿದ ತುಲಸೀ ಮಹಿಮೆ ಇದಾಗಿದೆ.





# ತುಲಸೀ ಮಹಿಮೆಗಳು

## ೧. ತುಲಸಿಯ ಸೇವೆ

ತುಲಸಿಯ ಮಹಿಮೆಯನ್ನು ಪ್ರಹ್ಲಾದರಾಜರು ಈ ವಿಧವಾಗಿ ತಿಳಿಸಿದರು. ಪದ್ಮಪುರಾಣ ತಿಳಿಸಿದ ಕಥೆ ಇದು.

ದುರ್ಗಾರಣ್ಯ ಎಂಬ ನಗರವಿತ್ತು. ಆ ನಗರವನ್ನಾಳುವ ದೊರೆ ಸುಷೇಣ. ಪರಾಕ್ರಮಸಂಪನ್ನ. ವೀರ್ಯಶಾಲಿ. ನಯ-ವಿನಯವಿಭೂಷಿತ. ವಸುಸೇನಾ ಅವಳ ಹೆಂಡತಿ. ಪತಿವ್ರತಾಶಿರೋಮಣಿ. ರಾಜನಿಗೆ ತಕ್ಕ ರಾಣಿ. ಸೌಭಾಗ್ಯಸಂಪನ್ನೆ. ಇಡಿಯ ಭೂಮಿಯಲ್ಲಿಯೇ ಅಪರೂಪವಾದ ರೂಪ ಅವಳದು.

ಆ ದಂಪತಿಗಳ ಮುದ್ದಿನ ಮಗಳು ದೇವಸೇನಾ. ತಂದೆ-ತಾಯಿಯ ಗುಣಗಳು ಅವಳಲ್ಲಿ ಸಂಪನ್ನವಾಗಿದ್ದವು. ರೂಪಸಿ. ಬಳ್ಳಿಯಂಥ ದೇಹ. ಕೆಂಪಾದ ಉಗುರುಗಳು. ಕತ್ತಲನ್ನೂ ನಾಚಿಸುವಂತಹ ಕೇಶರಾಶಿ. ಸುಂದರವಾದ ಮುಖ. ತೆಳುವಾದ ನಡು. ಉದರದಲ್ಲಿ ತ್ರಿವಳಿಗಳು. ಸುಂದರವಾದ ಭುಜಗಳು. ದಾಳಿಂಬೆಯ ಹಲ್ಲುಗಳು. ಇವು ಅವರ ದೈಹಿಕವಾದ ಸೌಂದರ್ಯ. ಸಜ್ಜನಿಕೆ ಅವಳ ಜೈವ ಸೌಂದರ್ಯವಾಗಿತ್ತು.

ಬಾಲ್ಯದಿಂದಲೇ ಅವಳು ಸರ್ವೇಶ್ವರನಾದ ಶ್ರೀಹರಿಯಲ್ಲಿ ಮನಸ್ಸನ್ನು ಸಮರ್ಪಿಸಿದ್ದಳು. ಯಾವಾಗಲೂ ದೇವರ ಪೂಜೆಯನ್ನೇ ಮಾಡುತ್ತಿದ್ದಳು. ವೈಷ್ಣವರನ್ನು ಪರಿಪರಿಯಿಂದ ಸೇವಿಸುತ್ತಾ ಅವರನ್ನು ಸಂತೋಷಪಡಿಸುತ್ತಿದ್ದಳು. ಅಲ್ಲದೇ ನಿತ್ಯವೂ ತುಲಸಿಯ ಪೂಜೆಯನ್ನು ಶ್ರದ್ಧೆಯಿಂದ ಮಾಡುತ್ತಿದ್ದಳು. ಶುದ್ಧವಾದ ಪೂಜಾದ್ರವ್ಯಗಳನ್ನು ಸಂಪಾದಿಸಿ ತುಲಸಿಯನ್ನು ಪ್ರಯತ್ನಪೂರ್ವಕವಾಗಿ ಪೂಜಿಸುವುದನ್ನು ರೂಢಿಸಿಕೊಂಡಿದ್ದಳು. ಕ್ರಮವಾಗಿ ಅವಳು ಯುವತಿಯಾದಳು.

ಹೆಣ್ಣುಮಕ್ಕಳ ತಂದೆಗೆ ಇರುವ ಚಿಂತೆ ಒಂದೇ. ಆ ಒಂದು ಚಿಂತೆಯೇ ನೂರಾರು ಚಿಂತೆಗಳಿಗೆ ಸಮವಾಗಿರುತ್ತದೆ. ಇದಕ್ಕೆ ಸುಷೇಣ ಹೊರತಾಗಲಿಲ್ಲ. ಮಗಳ ರೂಪಕ್ಕೆ ತಕ್ಕ ವರನನ್ನು ಹುಡುಕುವುದು ತೊಂದರೆ ಏನಲ್ಲ. ಆದರೆ ಅವಳಲ್ಲಿಯ ಸ್ವಾಭಾವಿಕವಾದ ವಿಷ್ಣುಭಕ್ತಿ, ಅವಳಿಗಿರುವ ಜ್ಞಾನ ತಂದೆಯನ್ನು ಮತ್ತಷ್ಟು ಚಿಂತೆಗೆ ಈಡು ಮಾಡಿತ್ತು. ಒಟ್ಟಾರೆ ಮಗಳಿಗೆ ಸರಿದೂಗುವ ವೀರವೈಷ್ಣವ ವರನನ್ನು ಹುಡುಕುವುದು ಬಹಳ ಕಷ್ಟವೆನಿಸಿತು.

ಈ ಕಷ್ಟಕ್ಕೆ ಆಗಿನ ಕಾಲದ ಒಂದೇ ಚಂದದ ಉಪಾಯ ಸ್ವಯಂವರ. ತನ್ನ ಮಗಳು ಬುದ್ಧಿವಂತಳು. ಅವಳಿಗೆ ಎಂತಹ ವರ ಬೇಕೆಂದು ಅವಳಿಗಿಂತಲೂ ಹೆಚ್ಚಾಗಿ ಮತ್ತಾರಿಗೆ ತಿಳಿಯಲು ಸಾಧ್ಯ. ಅದಕ್ಕಾಗಿಯೇ ಸ್ವಯಂವರ ಏರ್ಪಡಿಸಿದ. ಅವಳ ಚೆಲುವಿಕೆಯೇ ಅಂಥದು. ದೇಶ-ವಿದೇಶಗಳಿಂದ ರಾಜಕುಮಾರರು ಬಂದರು. ದೇವಸೇನೆಯನ್ನು ನೋಡಲು ಸಾಲು ಹಚ್ಚಿ ನಿಂತರು.

ಬಂದ ಕುಮಾರರನ್ನೆಲ್ಲ ಯುವರಾಣಿಯು ಪರೀಕ್ಷಿಸಿದಳು. ತನ್ನ ಪತಿಯನ್ನು ಆರಿಸಿಕೊಳ್ಳುವುದೆಂದರೆ ಗುರುಗಳನ್ನು ಆಯ್ದುಕೊಳ್ಳುವುದೇ. ಪತಿಯಿಂದಲೇ ಮಹಿಳೆಯರಿಗೆ ತತ್ತ್ವಜ್ಞಾನದ ಸಂಪಾದನೆಯಾಗಬೇಕು. ನಿತ್ಯವೂ ಕನಿಷ್ಠ ಪಕ್ಷಕ್ಕೆ ಎರಡು ಹೊತ್ತಾದರೂ ತತ್ತ್ವಗಳನ್ನು ಬೋಧಿಸುವ ಸಾಮರ್ಥ್ಯ ಅವನಿಗಿರಬೇಕು. ಅಂಥವನೇ ತನಗೆ ಪತಿಯಾಗಬೇಕು. ತನಗಿಂತ ಹಿರಿಯನಾಗಿರಬೇಕು. ಗುಣಗಳಿಂದಲೂ. ಹೀಗಾಗಿ ಅಲ್ಲಿ ನಡೆದದ್ದು ವರಪರೀಕ್ಷೆಯ ಜೊತೆ ಗುರುಪರೀಕ್ಷೆ. ಪರೀಕ್ಷಿಸದೇ ಗುರುಗಳನ್ನು ಶಿಷ್ಯ, ಶಿಷ್ಯನನ್ನು ಗುರುಗಳು ಆಯ್ದುಕೊಳ್ಳಬಾರದು. ಇದು ಶಾಸ್ತ್ರದ ಆದೇಶ. ಉಪದೇಶವೂ ಹೌದು.

ಹೀಗಾಗಿ ಬಂದವರನ್ನೆಲ್ಲ ದೇವಸೇನೆಯು ಪರೀಕ್ಷಿಸಿದಳು. ಪ್ರಶ್ನಿಸಿದಳು. ನೀವು ಶ್ವೇತದ್ವೀಪಕ್ಕೆ ಹೋಗಿದ್ದೀರಾ? ಪ್ರಶ್ನೆಯನ್ನು ಕೇಳಿದ ಯುವರಾಜರೆಲ್ಲ ಅವಾಕ್ಕಾದರು. ತಮ್ಮ ಸತ್ಯನಿಷ್ಠತೆಯನ್ನು ಮೆರೆದರು. ಬಂದವರೆಲ್ಲರೂ ಹೇಳಿದರು. ಇಲ್ಲ, ನಾವಾರೂ ಶ್ವೇತದ್ವೀಪವನ್ನು ನೋಡಿಲ್ಲ.

ಯುವರಾಜರ ಸತ್ಯನಿಷ್ಠತೆಗೆ ದೇವಸೇನೆ ಮೆಚ್ಚಿದಳು. ಆದರೆ ಅವರಾರನ್ನೂ ತಾನು ಅಂಗೀಕರಿಸಲಿಲ್ಲ. ಬಂದವರೆಲ್ಲ ಮಹಾಸಮರ್ಥರಾಗಿದ್ದರು. ಪುತ್ಥಳಿಯ ಗೊಂಬೆಯಂತಿದ್ದರು. ಆದರೂ ಆ ಎಲ್ಲರನ್ನು ಅಂಗೀಕರಿಸದಿರುವುದನ್ನು ಬಂದ ಯುವರಾಜರೂ ಒಪ್ಪಲಿಲ್ಲ. ಒಳಗೆ ಕುದಿಯುತ್ತಿದ್ದರು. ಅಪಹರಿಸಬೇಕೆಂದು ಯೋಚಿಸಿದರು. ಜೊತೆಗೆ ಬಲಾಬಲಗಳನ್ನೂ ಅಂದಾಜು ಹಾಕಿದರು. ಸುಷೇಣ ಮಹಾಸಮರ್ಥ. ಅವನ ಎದುರಾಗಿ ನಿಲ್ಲುವ ಯೋಚನೆಯೂ ಭಯಾನಕವಾಗಿತ್ತು. ಹೀಗಾಗಿ ಬಂದ ದಾರಿಗೆ ಸುಂಕವಿಲ್ಲವೆನ್ನುವಂತೆ ತಿರುಗಿಹೋದರು.

ದೇವದತ್ತ ಎಂಬ ಬ್ರಾಹ್ಮಣ ಒಬ್ಬನಿದ್ದ. ಅವನು ಈ ವಾರ್ತೆಯನ್ನು ಕೇಳಿದ. ಸಾವಿರ ಸುಳ್ಳಾಡಿದರೂ ತಪ್ಪಿಲ್ಲ. ಒಂದು ವಿವಾಹ ನಡೆದರೆ ಸಾಕು. ಈ ಮಾತನ್ನು ತಾನು ಸತ್ಯಗೊಳಿಸಬೇಕೆಂದು ಯೋಚಿಸಿದ. ಸುಳ್ಳು ಹೇಳಿ ಯುವರಾಣಿಯನ್ನು

ವಿವಾಹ ಮಾಡಿಕೊಳ್ಳಬೇಕೆಂದು ಬಂದ. ನಾನು ಶ್ವೇತದ್ವೀಪವನ್ನು ನೋಡಿದ್ದೇನೆಂದು ಸುಷೇಣನಿಗೆ ಹೇಳಿದ. ನನಗೆ ನಿಮ್ಮ ಮಗಳನ್ನು ಧಾರೆ ಎರೆದು ಕೊಡಿ ಎಂದು ಕೇಳಿದ. ರಾಜ ಅಂತಃಪುರಕ್ಕೆ ದೇವದತ್ತನನ್ನು ಕರೆದುಕೊಂಡು ಹೋದ.

ಯುವರಾಣಿ ಈಗ ಕೇಳಿದಳು. ಶ್ವೇತದ್ವೀಪನ್ನು ನೀವು ನೋಡಿದ್ದೀರಲ್ಲವೆ? ಹಾಗಾದರೆ ಅದು ಹೇಗಿದೆ? ಅದನ್ನು ತಿಳಿಸಿರಿ ಎಂದು ಕೇಳಿದಳು.

ಶ್ವೇತದ್ವೀಪ ಬಲು ರಮಣೀಯವಾದ ಸ್ಥಳ. ಶ್ರೀಸಹಿತನಾಗಿ ಶ್ರೀಹರಿ ಅಲ್ಲಿ ನಿತ್ಯವೂ ಸನ್ನಿಹಿತನಾಗಿರುತ್ತಾನೆ. ಮುಕ್ತರ ಆವಾಸಸ್ಥಾನ. ಅಲ್ಲಿ ಅಮುಕ್ತಸ್ಥಾನವೂ ಇದೆ. ಮುಕ್ತಸ್ಥಾನದಲ್ಲಿ ಅಮುಕ್ತರಿಗೆ ಪ್ರವೇಶವಿಲ್ಲ. ಅಮುಕ್ತಸ್ಥಾನದಲ್ಲಿ ಮಾತ್ರ ಅವರಿಗೆ ಪ್ರವೇಶ. ಭಗವಂತನ ಪರಮಪ್ರಿಯರಾದ ಭಕ್ತರು ಶ್ವೇತದ್ವೀಪದ ಅಮುಕ್ತಸ್ಥಾನದಲ್ಲಿ ವಾಸವಾಗಿರುತ್ತಾರೆ. ಆ ಅಮುಕ್ತಸ್ಥಾನವೂ ಅತ್ಯಂತ ರಮಣೀಯ. ಅಮುಕ್ತಸ್ಥಾನಕ್ಕೆ ಹೋಗುವುದು ಕೂಡಾ ಅಸಾಧ್ಯವೇ. ಶುದ್ಧಶ್ವೇತವರ್ಣದಿಂದ ಕಂಗೊಳಿಸುವ ಲೋಕ. ಸುಗಂಧಭರಿತವಾದ ಪ್ರದೇಶ. ಗಂಧರ್ವರ ಗೀತೆಗಳು, ಗೀತೆಯ ಭಾವನೆಗಳಿಗೆ ಭವ್ಯತೆಯನ್ನು ನೀಡುತ್ತಿರುವ ಅಪ್ಸರಾಸ್ತ್ರೀಯರ ನೃತ್ಯಗಳು ಅಲ್ಲಿ ನಿತ್ಯವೂ ಸುಸಂಪನ್ನವಾಗುತ್ತವೆ.

ನಾರದಾದಿಮುನಿಗಳು ಸತತವಾಗಿ ಆ ಲೋಕದಲ್ಲಿ ವಿರಾಜಮಾನರಾಗಿ ಇರುತ್ತಾರೆ. ಗರುಡ-ಶೇಷರು ನಿತ್ಯವೂ ಶ್ರೀಹರಿಯ ಸೇವೆಗೆಂದು ಸನ್ನದ್ಧರಾಗಿರುತ್ತಾರೆ. ಇದು ನಾನು ನೋಡಿದ ಶ್ವೇತದ್ವೀಪ. ಎಂದು ವರ್ಣಿಸಿದ.

ದೇವದತ್ತ ಸುಳ್ಳು ಹೇಳುತ್ತಿದ್ದಾನೆಂದು ದೇವಸೇನೆಗೆ ಅರ್ಥವಾಯಿತು. ಅರ್ಥವಾಗುತ್ತಿದ್ದಂತೆ ಅವಳು ಕ್ರುದ್ಧಳಾದಳು. ತನ್ನ ಸೇವಕಿಯರಿಗೆ ಕಣ್ಸನ್ನೆಯಿಂದಲೇ ಮಾಡಬೇಕಾದುದನ್ನು ಹೇಳಿದಳು. ಕಣ್ಣಿನ ಈ ಭಾಷೆ ನಿಜವಾಗಿಯೂ ಬಲು ದೊಡ್ಡದು. ಕಣ್ಣುಗಳಿಂದ ಮಾತನಾಡುವುದು ಬಲು ಕಷ್ಟ. ಕಷ್ಟಕ್ಕಿಂತಲೂ ಕಷ್ಟ ಅದನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು. ಪರಸ್ಪರ ಯಥಾರ್ಥ ಸಂವೇದನೆ ಇದ್ದವರಿಗೆ ಮಾತ್ರ ಇದು ಸಾಧ್ಯ. ಪ್ರಾಚೀನಕಾಲದಲ್ಲಿ ಯಜಮಾನ ಮತ್ತು ಸೇವಕರಿಗೆ ಈ ಸಂವೇದನೆ ಸ್ಪಷ್ಟವಾಗಿಯೇ ಇರುತ್ತಿತ್ತು. ಇವನನ್ನು ಚೆನ್ನಾಗಿ ಥಳಿಸಿ ಹೊರಗೆ ಹಾಕಿರಿ ಎಂದು ದೇವಸೇನೆ ತನ್ನ ಸೇವಕಿಯರಿಗೆ ಆಜ್ಞಾಪಿಸಿದ್ದಳು. ಒಡತಿಯ ಆಜ್ಞೆಯನ್ನು ಒಡನೆಯೇ ಪಾಲಿಸಿದರು. ಚೆನ್ನಾಗಿ ಥಳಿಸಿ ಅವನನ್ನು ಹೊರಗೆ ಹಾಕಿದರು.

ದೇವದತ್ತ ಮನಸ್ವೀ ಮನುಷ್ಯ. ಆದರೆ ಮನಸ್ವಿತೆಯನ್ನು ಕಾಯ್ದುಕೊಳ್ಳುವುದು ಸುಲಭಸಾಧ್ಯವಲ್ಲ. ಹೀಗಾಗಿ ಮಹಿಳೆಯರಿಂದ ಆದ ಅವಮಾನವನ್ನು ಸಹಿಸದಾದ. ಅವನ ಕೇಶಪಾಶ ಅಸ್ತವ್ಯಸ್ತವಾಗಿತ್ತು. ಅವನ ಮನಸ್ಸೂ ಅಸ್ತವ್ಯಸ್ತವಾಯಿತು. ಮೋಸಮಾಡಲು ತಯಾರಾದವನು ಪ್ರತಿ ಮೋಸವನ್ನೂ ಅಂದಾಜು ಮಾಡಿಕೊಳ್ಳಬೇಕು. ಅದನ್ನು ಸಹಿಸಲೂ ಸಿದ್ಧನಾಗಬೇಕು. ಆದರೆ ದೇವದತ್ತ ವಂಚಿಸಲು ತಯಾರಾದ. ಪ್ರತಿವಂಚನೆಯನ್ನು ಮಾತ್ರ ಸಹಿಸದಾದ. ಸಹಿಸಲಾಗುವುದಿಲ್ಲ. ಇದು ಸನ್ನಡತೆ ಅಲ್ಲ.

ಏನಾದರೂ ಮಾಡಿ ಇವಳನ್ನು ವಿವಾಹವಾಗಬೇಕೆಂದು, ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಬೇಕೆಂದು ಯೋಚಿಸಿದ. ಅದಕ್ಕೆ ಮಾಡಬೇಕಾದ ಉಪಾಯ ಒಂದೇ. ಶ್ವೇತದ್ವೀಪವನ್ನು ನೋಡಿ ಬರಬೇಕು. ದೇವಸೇನೆಯನ್ನು ಅನುಭವಿಸಬೇಕು. ಅದಕ್ಕೆ ದೇವದತ್ತ ಸನ್ನದ್ಧನಾದ.

ಹಲವರು ಸಂಕಲ್ಪ ಮಾಡುತ್ತಾರೆ. ಮಾಡಿದ ಸಂಕಲ್ಪವನ್ನು ಕಾಲ ಕಳೆದಂತೆ ಮರೆತು ಬಿಡುತ್ತಾರೆ. ಆದರೆ ದೇವದತ್ತ ಆ ಜಾತಿಗೆ ಸೇರಿದವನಲ್ಲ. ಕ್ಷಣಕಾಲವನ್ನೂ ವ್ಯರ್ಥಮಾಡಲಿಲ್ಲ. ನೇರವಾಗಿ ಮಾಹೇಂದ್ರಪರ್ವತಕ್ಕೆ ಹೊರಟ. ಅಲ್ಲಿ ಪರಶುರಾಮದೇವರು ವಿರಾಜಮಾನರಾಗಿದ್ದರು. ತಪೋನಿಧಿಗಳವರು. ಸಾಕ್ಷಾತ್ ವಿಷ್ಣುವಿನ ಅವತಾರ. ದುಷ್ಟಕ್ಷತ್ರಿಯಸಂಹಾರಕ. ಬ್ರಾಹ್ಮಣರಿಗೆ ಪರಮಪ್ರಿಯ.

ಪರಶುರಾಮದೇವರಿಗೆ ಸಾಷ್ಟಾಂಗವೆರಗಿ ಕೇಳಿದ. ಸ್ವಾಮಿನ್ ! ಶ್ವೇತದ್ವೀಪವನ್ನು ತಾವು ನೋಡಿದ್ದೀರಾ ? ಅಲ್ಲಿಗೆ ಹೋಗುವುದು ಹೇಗೆ? ಭಗವಂತ ಸರ್ವಜ್ಞ. ಯಾವಾಗ, ಯಾವ ಕೆಲಸ, ಯಾರಿಂದ, ಹೇಗೆ ಆಗಬೇಕೆಂದು ಬಲ್ಲವ. ಅದು ಹಾಗೆಯೇ ನಡೆಯುವಂತೆ ಮಾಡುತ್ತಾನೆ. ಆದಕ್ಕಾಗಿ ಅಜ್ಞನಂತೆ ನಟಿಸುತ್ತಾನೆ.

ಇಲ್ಲಪ್ಪಾ ! ಶ್ವೇತದ್ವೀಪ ಹೇಗಿದೆ ಎಂದು ನನಗೆ ಗೊತ್ತಿಲ್ಲ. ಆದರೆ ಬಲು ಮನೋಹರ ಎಂದು ಮಾತ್ರ ಕೇಳಿದ್ದೇನೆ. ಆದರೆ ನಿನಗೆ ಮಾರ್ಗದರ್ಶನ ಮಾಡುತ್ತೇನೆ. ಹಾಗೆ ಮಾಡು. ಇಲ್ಲಿಂದ ಬದರಿಗೆ ಹೋಗು. ಅಲ್ಲಿ ಅನೇಕ ಮುನಿಗಳು ವಾಸವಾಗಿದ್ದಾರೆ. ನಿಸ್ಸಂದೇಹವಾಗಿಯೂ ಅವರು ಶ್ವೇತದ್ವೀಪದ ವೃತ್ತಾಂತವನ್ನು ನಿನಗೆ ತಿಳಿಸುತ್ತಾರೆ.

ದೇವದತ್ತನಿಗೆ ಬೇಸರವಾಗಲಿಲ್ಲ. ಬದರಿಗೆ ಪ್ರಯಾಣಮಾಡಿದ. ಅಲ್ಲಿ ಮುನಿಗಳ ತಂಡವೇ ನೆರೆದಿತ್ತು. ಅವರೆಲ್ಲ ಜ್ಞಾನ-ವಿಜ್ಞಾನಸಂಪನ್ನರು. ತಪಸ್ಸಿದ್ಧಿಯನ್ನು

ಪಡೆದವರು. ಅವರಿಗೆಲ್ಲ ನಮಸ್ಕರಿಸಿದ. ಶ್ವೇತದ್ವೀಪ ಹೇಗಿದೆ ? ಅಲ್ಲಿಗೆ ಹೋಗುವುದು ಹೇಗೆ ? ಎಂದು ಕೇಳಿದ. ಅವರೆಲ್ಲ ಮಹಾನುಭಾವರು. ಸತ್ಯನಿಷ್ಠರು. ಧರ್ಮನಿರತರು. ಅವರೆಲ್ಲ ಸೇರಿ ಉತ್ತರಿಸಿದರು. ಭೋ ದೇವದತ್ತ! ಶ್ವೇತದ್ವೀಪ ಮಹಾಲೋಕ. ಅದು ದೇವರ ಧಾಮ. ಕಾಮಕ್ರೋಧಾದಿಗಳಿಂದ ಕಲುಷಿತವಾದ ಈ ದೇಹದಿಂದ ಶ್ವೇತದ್ವೀಪಕ್ಕೆ ಹೋಗಲು ಸಾಧ್ಯವಿಲ್ಲ.

ಆದರೆ ಒಂದು ಉಪಾಯವಿದೆ. ಶ್ರೀತುಲಸೀದೇವಿಯನ್ನು ವಿಶಿಷ್ಟವಾಗಿ ಸೇವಿಸಬೇಕು. ಅವಳ ಪ್ರಸಾದವನ್ನು ಪಡೆಯಬೇಕು. ಶ್ರೀತುಲಸಿಯ ಪ್ರಸಾದದಿಂದ ಶ್ವೇತದ್ವೀಪವನ್ನು ನೋಡಬಹುದು. ತುಲಸಿಯ ಸೇವೆಯನ್ನು ಹೇಗೆ ಮಾಡಬೇಕೆಂದು ತ್ರಿತ ಎಂಬ ಋಷಿಗಳು ನಿನಗೆ ಉಪದೇಶಿಸುತ್ತಾರೆ. ಅವರಿಗೆ ಶರಣು ಹೋಗು. ಅವರನ್ನು ಸಂತೋಷಪಡಿಸು. ನಿನಗೆ ಮಂಗಳವಾಗಲಿ. ದೇವದತ್ತನಿಗೆ ಹೀಗೆ ನಿರ್ದೇಶಮಾಡಿದರು. ಮತ್ತೆ ಮೌನಿಗಳಾಗಿ ತಮ್ಮ ಸಾಧನೆಯನ್ನು ಮುಂದುವರಿಸಿದರು.

ಮುನಿಗಳ ಮಾತನ್ನು ಶ್ರದ್ಧೆಯಿಂದ ಆಲಿಸಿದ ದೇವದತ್ತ. ಕೃತಜ್ಞತಾಪೂರ್ವಕ-ವಾಗಿ ಸಾಷ್ಟಾಂಗಪ್ರಣಾಮ ಮಾಡಿದ. ತ್ರಿತರ ಆಶ್ರಮಕ್ಕೆ ತೆರಳಿದ. ಶ್ರದ್ಧಾ-ಭಕ್ತಿಗಳಿಂದ ತ್ರಿತರನ್ನು ಸೇವಿಸಿದ. ದೇವದತ್ತನ ಅವ್ಯಾಹತವಾದ ಸೇವೆಯಿಂದ ತ್ರಿತರು ಸಂತುಷ್ಟರಾದರು. ಭಗವದ್ಭಕ್ತರು ಅಲ್ಪಸಂತೋಷಿಗಳು. ಅವರನ್ನು ಸಂತೋಷಪಡಿಸುವುದು ಸುಲಭದ ಕೆಲಸ. ತುಲಸಿಯ ಆರಾಧನೆಯ ವಿಧಾನವನ್ನು ನಿನಗೆ ಉಪದೇಶಿಸುತ್ತೇನೆ. ಯಾರ ಪೂಜೆಯನ್ನೇ ಮಾಡು ವೈಷ್ಣವನಾಗಿ ಮಾಡು. ವಿಷ್ಣುವಿನ ಪರಿವಾರವೆಂದು, ವೈಷ್ಣವರೆಂದು ತಿಳಿದು ಮಾಡು. ತುಲಸಿಯ ಈ ಮಹಾಮಂತ್ರವನ್ನು ನಿನಗೆ ಉಪದೇಶಿಸುತ್ತೇನೆ. ಅತ್ಯದ್ಭುತವಾದ ಮಂತ್ರವಿದು. ಎಂದು ಈ ಮಂತ್ರವನ್ನುಪದೇಶಿಸಿದ.

ತುಲಸಿ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ ।
ನಮಸ್ತೇ ನಾರದನುತೇ ನಾರಾಯಣಮನಃಪ್ರಿಯೇ ॥

ಈ ಮಂತ್ರವನ್ನು ಏಳು ಕೋಟಿಬಾರಿ ಜಪಿಸು. ಸುಮ್ಮನೆ ಎಣಿಸಬೇಡ. ಚಿತ್ತೈಕಾಗ್ರ್ಯದಿಂದ ಜಪಿಸು. ದೇವರನ್ನು ಮರೆಯಬೇಡ. ದೇವರನ್ನು ಮರೆತರೆ ತುಲಸಿಯು ಒಲಿಯುವುದಿಲ್ಲ.

ದೇವಾಧಿದೇವತೆಗಳೂ ತುಲಸಿಯ ಸೇವೆಯನ್ನು ಮಾಡಿದ್ದಾರೆ. ಶ್ರೀಹರಿಯ ಪ್ರೀತಿಯನ್ನು ಸಂಪಾದಿಸುವ ಮೂಲಕ ಮಹಾಸೌಭಾಗ್ಯಸಂಪನ್ನಳಾಗಿದ್ದಾಳೆ ತುಲಸಿ.

ಅವಳನ್ನು ವೃಂದಾವನದಲ್ಲಿ ಪ್ರತಿಷ್ಠಾಪಿಸು. ಯಥಾವಿಧಿ ಅವಳನ್ನು ಪೂಜಿಸು. ತುಲಸಿಯಿಂದ ದೇವರನ್ನು ಅರ್ಚಿಸು. ಕ್ಷೀರಾಭಿಷೇಕದಿಂದ ತುಲಸಿಯನ್ನು ಬೆಳೆಸು. ಶ್ರೀಹರಿನಿರ್ಮಾಲ್ಯವಾದ ಗಂಧ-ಪುಷ್ಪಗಳಿಂದ ತುಲಸಿಯನ್ನು ಅರ್ಚಿಸು. ಈ ವಿಧವಾದ ಸೇವೆಯಿಂದ ತುಲಸಿಯು ಪ್ರಸನ್ನಳಾಗುತ್ತಾಳೆ. ತುಲಸಿಯ ಪ್ರಸಾದ ನಿನಗಾಗುತ್ತದೆ. ಇದೇ ದೇಹದಿಂದ ಶ್ವೇತದ್ವೀಪವನ್ನು ನೋಡುವ ಸೌಭಾಗ್ಯ ನಿನಗೆ ಬರುತ್ತದೆ. ಇಷ್ಟು ಉಪದೇಶಿಸಿದ.

ದೇವದತ್ತ ತ್ರಿತರಿಗೆ ಸಾಷ್ಟಾಂಗವೆರಗಿದ. ಅವರ ಉಪದೇಶಕ್ಕೆ ಅನುಗುಣವಾಗಿ ತುಲಸಿಯನ್ನು ಸೇವಿಸಿದ. ಶ್ರದ್ಧಾಪೂರ್ವಕವಾದ ಈ ಸೇವೆಯಲ್ಲಿ ಹನ್ನೆರಡು ವರ್ಷಗಳು ಕಳೆದವು. ದೇವದತ್ತನ ಈ ಸೇವೆಯಿಂದ ತುಲಸಿಯು ಪ್ರಸನ್ನಳಾದಳು. ಸ್ವಪ್ನದಲ್ಲಿ ದರ್ಶನ ನೀಡಿದಳು. ಕಡುಗಪ್ಪಿನ ಕೇಶರಾಶಿ. ಕಿಂಚಿತ್ ಕುಂಚಿತವಾಗಿವೆ. ಪೂರ್ಣಚಂದ್ರನ ಮುಖ. ನೀಲಕಮಲದಂತೆ ವಿಶಾಲವಾದ ಕಣ್ಣುಗಳು. ವರ-ಅಭಯಪ್ರದವಾದ ಚಿಹ್ನೆಗಳಿಂದ ಪರಿಶೋಭಿತಳಾಗಿದ್ದಾಳೆ. ಪದ್ಮಹಸ್ತಳಾಗಿದ್ದಾಳೆ. ಎಲ್ಲ ವಿಶಿಷ್ಟವಾದ ಆಭರಣಗಳಿಂದ ಸಂಪನ್ನಳಾಗಿದ್ದಾಳೆ. ಪರಮಶುದ್ಧಳಾಗಿ ಕಂಗೊಳಿಸುತ್ತಿದ್ದಾಳೆ. ಇಂತಹ ತುಲಸಿಯು ದೇವದತ್ತನಿಗೆ ಹೇಳಿದಳು.

ಈ ತಪಸ್ಸಿನಿಂದ ನೀನು ಪರಿಶುದ್ಧನಾಗಿರುವಿ. ಈಗ ಶ್ವೇತದ್ವೀಪಕ್ಕೆ ಹೋಗಲು ಸಮರ್ಥನಾಗಿದ್ದಿ. ದೇವಿಯ ಮಾತನ್ನು ಕೇಳಿ ದೇವದತ್ತ ಸಂತುಷ್ಟನಾದ. ಸ್ವಪ್ನದಲ್ಲಿಯೇ ವಾಸನಾಮಯವಾದ ಶುಭಪದಾರ್ಥಗಳಿಂದ ಶ್ರೀತುಲಸಿಯನ್ನು ಪೂಜಿಸಿದ.

ಆದೊಂದು ದಿನ. ನರನಾರಾಯಣರ ಆ ಆಶ್ರಮಕ್ಕೆ ಅತಿ ದೊಡ್ಡದಾದ ನಾಗರಹಾವು ಒಂದು ಬಂತು. ಬಲು ದುಷ್ಟವಾದ ನಾಗವದು. ನಾಗದ ಭಯದಿಂದ ಮುನಿಗಳೆಲ್ಲ ತಮ್ಮ ತಮ್ಮ ಆಶ್ರಮಗಳಲ್ಲಿ ಅಡಗಿದರು. ದೇವದತ್ತನಿಗೆ ಈ ಸರ್ಪದ ಪರಿಚಯವಿಲ್ಲ. ಹೀಗಾಗಿ ಅಲ್ಲಿಯೇ ಇದ್ದ. ಸರ್ಪದಿಂದ ತ್ರಸ್ತನಾದ. ತ್ರಾಸವನ್ನು ಸಹಿಸಿಕೊಳ್ಳದೇ ಅಲ್ಲಿಯೇ ಇರುವ ವೃಕ್ಷದ ಕೋಟರದಲ್ಲಿ ಅಡಗಿಕೊಂಡ.

ಆ ಗೂಡಿನ ಒಳಗಿನಿಂದಲೇ ಹೊರಗೆ ನಡೆಯುವ ಘಟನೆಯನ್ನೆಲ್ಲ ಗಮನಿಸುತ್ತಿದ್ದ. ಅವನು ಗಮನಿಸುವಾಗಲೆ ಅಲ್ಲಿಗೆ ಗರುಡ ಬಂದ. ಬಂಗಾರದ ಪರ್ವತದಂತೆ ಕಂಗೊಳಿಸುತ್ತಿದ್ದ. ವಿಶಾಲವಾದ ವಕ್ಷಸ್ಥಲ. ಸೂರ್ಯ-ಚಂದ್ರರನ್ನೂ ನಾಚಿಸುವ ಕಾಂತಿ. ತನ್ನ ರೆಕ್ಕೆಯ ಗಾಳಿಯಿಂದಲೇ ವೃಕ್ಷಗಳನ್ನು ಬೀಳಿಸುತ್ತಿದ್ದ. ಇದನ್ನೆಲ್ಲ

ನೋಡಿ ದೇವದತ್ತ ತಿಳಿದ. ಈ ಶಕ್ತಿ ಕೇವಲ ಗರುಡನಿಗೆ ಮಾತ್ರ ಸಾಧ್ಯ. ಗರುಡನೇ ಇರಬೇಕೆಂದು ತರ್ಕಿಸಿದ. ಅವನ ತರ್ಕ ಸಾಧುವಾಗಿತ್ತು. ವೇಗದಿಂದ ಬಂದ ಗರುಡ ವೃಕ್ಷದ ಗೂಡಿನ ಮುಂದೆ ಕುಳಿತ. ತನ್ನ ಚಂಚುವಿನಿಂದ ಆ ಹಾವನ್ನು ಹಿಡಿದ. ಹೆಡೆಗಳನ್ನು ವಿಸ್ತಾರಮಾಡಿ ಗರುಡನನ್ನು ಆ ನಾಗ ನೋಡಿತು. ಸಾವಿನ ಭಯ ಆ ಹಾವಿನಲ್ಲಿ ಹರಿಯುತ್ತಿತ್ತು. ಹಾವನ್ನು ಹಿಡಿದು ಹಾರಿಹೋದ ಗರುಡ. ಆದನ್ನು ತಿಂದು ಮತ್ತೆ ಆ ಆಶ್ರಮಕ್ಕೆ ಬಂದ. ಅಡಗಿದ ಋಷಿಗಳೆಲ್ಲರೂ ಬಂದರು. ಗರುಡನಿಗೆ ನಮಸ್ಕರಿಸಿದರು. ಗರುಡನ ಉಪಕಾರವನ್ನು ಮನತುಂಬಿ ಕೊಂಡಾಡಿದರು.

ಈ ಸರ್ಪ ಸಾಧುಗಳಾದ ಎಷ್ಟೋ ಋಷಿ-ಮುನಿಗಳನ್ನು ತಿಂದು ಹಾಕಿದೆ. ನಿಮ್ಮಿಂದ ನಾವೀಗ ನಿರ್ಭೀತರಾಗಿದ್ದೇವೆ. ನಮ್ಮ ಸಾಧನೆಗೆ ನೀವು ತುಂಬ ಅನುಕೂಲ ಮಾಡಿರುವಿರಿ. ನಿಮ್ಮ ಅನುಗ್ರಹದಿಂದ ನಾವು ಭಯದೂರರಾಗಿದ್ದೇವೆ. ನಿಮಗೆ ಮಂಗಳವಾಗಲಿ. ಎಂದು ಹರಿಸಿದರು.

ಗರುಡ ಹೇಳಿದ. ನಿಮ್ಮ ಪ್ರಾರ್ಥನೆಯಂತೆ ಈ ಕಾರ್ಯವನ್ನು ನಾನು ಮಾಡಿದ್ದೇನೆ. ನಿಮ್ಮ ತಪಸ್ಸನ್ನು ಮುಂದುವರಿಸಿರಿ. ಈ ವನದಲ್ಲಿ ಸಾಕಷ್ಟು ಫಲಗಳಿವೆ. ಅವುಗಳನ್ನು ತಿನ್ನುತ್ತಾ ಸುಖವಾಗಿರಿ. ಶ್ರೀಹರಿಯ ಉದ್ದೇಶದಿಂದ ಸತ್ಕರ್ಮಗಳನ್ನು ಮಾಡಿರಿ. ಮಾಡಿದ ಎಲ್ಲ ಸತ್ಕರ್ಮಗಳನ್ನು ಶ್ರೀಹರಿಗೆ ಸಮರ್ಪಿಸಿರಿ. ಎಂದು ಹೇಳಿದ. ಅಲ್ಲಿಂದ ಹಾರಿಹೋದ. ದೇವದತ್ತ ಗರುಡನನ್ನು ಏರಿದ. ವೇಗವಾಗಿ ಗರುಡ ಹೊರಟು ಹೋದ.

ಲವಣೋದಸಾಗರ, ಇಕ್ಷುಸಾಗರ, ಆಜ್ಯಸಾಗರ, ದಧಿಸಾಗರ, ಸ್ವಾದೂದ-ಸಾಗರಗಳನ್ನು ದಾಟಿದ ಗರುಡ. ಕ್ಷೀರಸಾಗರಕ್ಕೆ ಹೊದ. ಅಲ್ಲಿ ದಿವ್ಯವಾದ ಪುರ. ಅದು ಶ್ವೇತದ್ವೀಪ. ಸ್ವರ್ಣಮಯವಾದ ಪ್ರಾಕಾರಗಳಿಂದ ಪರಿಶೋಭಿತವಾಗಿದೆ. ಶುದ್ಧವಾದ ಬೆಳ್ಳಗಿನ ವರ್ಣದ ಜನರು ಅಲ್ಲಿ ಕಂಗೊಳಿಸುತ್ತಿದ್ದಾರೆ. ಭಗವಂತನಿಗೆ ಪರಮಪ್ರಿಯವಾದ ನಗರವದು.

ಸರಿಯಾಗಿ ಮಧ್ಯದಲ್ಲಿ ನೂರು ಯೋಜನ ಎತ್ತರದ ಅರಮನೆ. ಅತಿದಿವ್ಯವಾದ ರತ್ನಗಳಿಂದ ಖಚಿತವಾಗಿದೆ. ಶ್ವೇತವರ್ಣದಲ್ಲಿ ಕಂಗೊಳಿಸುತ್ತಿದೆ ಶ್ವೇತದ್ವೀಪ. ಪರಮಪರಿಶುಭ್ರವಾದ ನೂರಾರು ವೀಥಿಗಳಿಂದ ಅಲಂಕೃತವಾಗಿದೆ.

ದೇವದತ್ತನಿಗೆ ಪರಮಪುಣ್ಯವಾದ ಶ್ವೇತದ್ವೀಪವನ್ನು ನೋಡಲಾಗಲಿಲ್ಲ. ಕಣ್ಣುಗಳು ಕುಕ್ಕಿದವು. ಕಣ್ಣುಗಳನ್ನು ಮುಚ್ಚಿಕೊಂಡ. ಭಯಕಂಪಿತನಾದ. ಮೂರ್ಛಿತನಾಗಿ ಬಿದ್ದ. ತುಲಸಿಯಮೇಲಿನ ಪ್ರೀತಿಯಿಂದ ಆ ದ್ವಿಜನನ್ನು ಹೊತ್ತುಕೊಂಡು ಬಂದಿದ್ದ ಗರುಡ. ವೈಡೂರ್ಯಮಯವಾದ ಭವನ ಒಂದರಲ್ಲಿ ಆ ದೇವದತ್ತ ಬಿದ್ದಿದ್ದ. ಅಲ್ಲಿಯವರು ಮಾಡಿದ ಉಪಚಾರದಿಂದ ಕೂಡಲೇ ಎದ್ದು ಕುಳಿತ.

ದಿವ್ಯವಾದ ಚೆಲುವಿನಿಂದ ಯುಕ್ತರಾದ ಅಪ್ಸರಾಸ್ತ್ರೀಯರನ್ನು ಕಂಡ. ವಿಸ್ಮಿತನಾದ. ಮೂಕನಾದ. ಮೂಕವಿಸ್ಮಿತನಾದ. ತುಲಸಿಯ ಸೇವಕಿಯರು ಕೇಳಿದರು. ಯಾರು ನೀನು? ಯಾವ ಕೆಲಸಕ್ಕಾಗಿ ಬಂದಿರುವಿ? ನಡೆದ ಎಲ್ಲ ಘಟನೆಯನ್ನು ದೇವದತ್ತ ಹೇಳಿದ. ನೀನು ಈಗ ತುಲಸಿಯ ಭವನದಲ್ಲಿಯೇ ಇದ್ದಿ. ಎಂದು ಹೇಳಿದರು. ತುಲಸಿಯ ಹತ್ತಿರ ಕರೆದೊಯ್ದರು. ದೇವದತ್ತ ತಾನು ಬಂದ ಕಾರಣವನ್ನು ವಿಜ್ಞಾಪಿಸಿಕೊಂಡ.

ತಾನು ಸ್ವಪ್ನದಲ್ಲಿ ನೋಡಿದಂತೆಯೇ ಇಲ್ಲಿ ಕಂಗೊಳಿಸುತ್ತಿದ್ದಳು ತುಲಸೀದೇವಿ. ದೇವಾಧಿದೇವತೆಗಳಿಂದ ಪರಮಾರ್ಚಿತಳಾಗಿ ಪರ್ಯಂಕದಲ್ಲಿ ಆಸೀನಳಾಗಿದ್ದಳು. ತುಲಸೀದೇವಿಯನ್ನು ಸಾಮಮಂತ್ರಗಳಿಂದ ಸ್ತುತಿಸಿದ ದೇವದತ್ತ. ತುಲಸಿಯ ಮುಂದೆ ನಡೆದ ಎಲ್ಲ ಘಟನೆಯನ್ನೂ ತಿಳಿಸಿದ. ಈ ಮಾತುಗಳನ್ನು ಕೇಳಿದ ತುಲಸಿಯು ತನ್ನ ಸೇವಕಿಯರಿಗೆ ಆಜ್ಞಾಪಿಸಿದಳು. ಈ ಬ್ರಾಹ್ಮಣನಿಗೆ ಅನ್ನಪಾನದ ವ್ಯವಸ್ಥೆಯನ್ನು ಮಾಡಿರಿ. ಮಲಗಿರುವ ದೇವಸೇನೆಯನ್ನೂ ಇವನಿಗೆ ತೋರಿಸಿರಿ ಎಂದು ಆಜ್ಞಾಪಿಸಿದರು. ತುಲಸಿಯು ಹೇಳಿದ ಮಾತುಗಳನ್ನು ಕೇಳಿ ದೇವದತ್ತನಿಗೆ ವಿಸ್ಮಯವಾಯಿತು. ದೇವಸೇನೆ ಇಲ್ಲಿಗೆ ಬಂದದ್ದು ಹೇಗೆಂದು ತಿಳಿಯಲಾಗಲಿಲ್ಲ.

ಮೃತಳಾಗಿ ಮಂಚದ ಮೇಲೆ ಮಲಗಿರುವ ದೇವಸೇನೆಯನ್ನು ನೋಡಿದ ದೇವದತ್ತ. ಅವಳನ್ನು ನೋಡಿ ಏನೂ ಮಾತಾಡಲಾಗಲಿಲ್ಲ. ತಾನೊಂದು ಬಗೆದರೆ ದೈವ ಒಂದು ಬಗೆಯಿತು ಎಂಬುದನ್ನು ಪ್ರತ್ಯಕ್ಷವಾಗಿ ಕಂಡ. ಶ್ವೇತದ್ವೀಪವನ್ನು ಕಂಡು ದೇವಸೇನೆಯನ್ನು ಅನುಭವಿಸಬೇಕೆಂದು ತನ್ನ ಯೋಚನೆ ಇತ್ತು. ಮೃತಳಾದ ದೇವಸೇನೆಯನ್ನು ನೋಡುವುದಕ್ಕಾಗಿ ಇಲ್ಲಿಗೆ ಬಂದದ್ದೆಂದು ತಿಳಿದು ಖಿನ್ನನಾದ. ತುಲಸೀದೇವಿಯ ಆಜ್ಞೆಯಂತೆ ದೇವಸೇನೆಯನ್ನು ತೋರಿಸಿ ಮತ್ತೆ ಅವಳ ಕಣ್ಣುಗಳನ್ನು ಮುಚ್ಚಿದರು. ದೇವಸೇನೆಯು ಮೃತಳಾಗುತ್ತಾಳೆ ಎಂಬುದನ್ನು ಅಷ್ಟು ವ್ಯವಸ್ಥಿತವಾಗಿ ಆ ಜನರು ದೇವದತ್ತನಿಗೆ ತೋರಿಸಿದ್ದರು.

ಕೊನೆ ಕ್ಷಣದಲ್ಲಿಯಾದರೂ ದೇವಸೇನೆಯನ್ನು ಕಾಣಬೇಕೆಂದುಕೊಂಡ ದೇವದತ್ತ. ದೇವತೆಗಳ ಆಜ್ಞೆಯನ್ನು ಪಡೆದು ಮತ್ತೆ ತುಲಸೀದೇವಿಯ ಅನುಗ್ರಹದಿಂದ ಕ್ಷಣದಲ್ಲಿಯೇ ದುರ್ಗಾರಣ್ಯಪುರವನ್ನು ಸೇರಿದ. ರಾಜನಾದ ಸುಷೇಣನನ್ನು ಕಂಡ. ಶ್ವೇತದ್ವೀಪದಲ್ಲಿ ನಡೆದ ಘಟನೆಯನ್ನೆಲ್ಲ ಹೇಳಿದ. ದೇವಸೇನೆಯನ್ನು ನೋಡಲು ಹೊರಟ.

ಹೇಗಿದೆ ಶ್ವೇತದ್ವೀಪ ಹೇಳುವಿರಾ ? ದೇವಸೇನೆ ಮತ್ತೆ ಕೇಳಿದಳು. ಬಹು ರಮಣೀಯವಾಗಿದೆ ಶ್ವೇತದ್ವೀಪ. ಅಲ್ಲಿಯ ತುಲಸೀಭವನ ಮತ್ತಿಷ್ಟು ರಮಣೀಯವಾಗಿದೆ. ನೀನು ಮೃತಳಾಗಿ ಅಲ್ಲಿ ಪರ್ಯಂಕದಲ್ಲಿ ಇರುವುದನ್ನೂ ನಾನು ನೋಡಿದೆ ಎಂದು ಹೇಳಿದ. ಈ ಮಾತನಾಡಿದ ಕ್ಷಣದಲ್ಲಿಯೇ ದೇವಸೇನೆಯು ಮೃತಳಾದಳು.

ಮಗಳು ಮೃತಳಾದ ವಾರ್ತೆಯನ್ನು ಕೇಳಿ ಸುಷೇಣ-ವಸುಸೇನಾ ದಂಪತಿಯರು ಖಿನ್ನರಾದರು. ದೇವದತ್ತನೂ ನಿರ್ವಿಣ್ಣನಾಗಿ ಕುಳಿತ. ಮತ್ತೆ ಪರಶುರಾಮರ ಆಶ್ರಮಕ್ಕೆ ತೆರಳಿದ. ಯಾಕೆ ಹೀಗಾಯಿತೆಂದು ಅಂಗಲಾಚಿ ಕೇಳಿದ. ಭಗವಂತ ಸರ್ವಜ್ಞ. ಅನಂತ ಜೀವರಾಶಿಗಳ ಅನಂತಕರ್ಮವಿಪಾಕಗಳನ್ನು ಬಲ್ಲ ಮಹಾನುಭಾವ. ಆದರೂ ಯೋಗದೃಷ್ಟಿಯಿಂದ ಎಲ್ಲವನ್ನೂ ಕಂಡವರಂತೆ ನಟಿಸುತ್ತ ಹೇಳಿದ.

ಪೂರ್ವಜನ್ಮದಲ್ಲಿ ನೀನು ತ್ರಿತಮಹರ್ಷಿಯ ಶಿಷ್ಯ. ತ್ರಿತರು ತುಲಸೀಭಕ್ತರು. ನೀನು ತ್ರಿತರ ಭಕ್ತ. ತುಲಸಿಯ ವಿಶಿಷ್ಟವಾದ ಸೇವೆಯನ್ನು ಮಾಡುವುದಕ್ಕಾಗಿ ನಿಮ್ಮ ಗುರುಗಳು ತ್ರಿತರು ಶ್ವೇತದ್ವೀಪಕ್ಕೆ ತೆರಳಿದರು. ಗುರುಗಳನ್ನು ನೀನು ಅನುಸರಿಸಿದಿ. ನೀವಿಬ್ಬರೂ ತುಲಸಿಯ ದರ್ಶನವನ್ನು ಮಾಡಿಕೊಂಡಿರಿ. ಆಗ ದೇವಸೇನೆಯು ತುಲಸಿಗೆ ಚಾಮರವನ್ನು ಹಾಕುತ್ತ ಸೇವಿಸುತ್ತಿದ್ದಳು. ನಿಮ್ಮಿಬ್ಬರ ನೋಟ ಕಲಿಯಿತು. ಮನಸ್ಸು ಏಕವಾಯಿತು. ಅನುರಾಗ ದೃಷ್ಟಿಯ ವಿನಿಮಯವಾಯಿತು. ಈ ಕಲಾಪವನ್ನು ತುಲಸಿಯು ಗಮನಿಸಿದಳು. ಸಹಿಸದೇ ಶಾಪ ಕೊಟ್ಟಳು.

ನೀನು ಮಹರ್ಷಿಗಳಾದ ತ್ರಿತರ ಶಿಷ್ಯ. ಪ್ರಸ್ತುತ ಕಾಮುಕನಾಗಿರುವಿ. ಧರ್ಮವೇ ನಿನಗೆ ಕಾಣದಾಗಿದೆ. ಶ್ವೇತದ್ವೀಪದಲ್ಲಿರುವ ದೇವಸೇನೆಯೂ ಧರ್ಮಭ್ರಷ್ಟಳಾಗಿದ್ದಾಳೆ. ನೀವಿಬ್ಬರೂ ಮೃತರಾಗಿರಿ ಎಂದು ಶಪಿಸಿದಳು. ಆವಾಗಲೇ ನೀನು ಮಾಡಿದ ತಪ್ಪಿಗೆ ನಿನ್ನ ಗುರುಗಳು ಕ್ಷಮೆ ಕೇಳಿದರು. ತುಲಸಿಯ ಪ್ರಸಾದವನ್ನು ಸಂಪಾದಿಸಲು ಅವಳನ್ನು ಪ್ರಾರ್ಥಿಸಿದರು. ನಿಮ್ಮಿಬ್ಬರಿಗೂ ತುಲಸಿಯು ಶಾಪವಿಮೋಚನೆಯನ್ನೂ ನೀಡಿದಳು.

ಆ ತುಲಸಿಯ ಸೇವಕಿಯೇ ಪ್ರಸ್ತುತ ದೇವಸೇನೆಯಾಗಿದ್ದಾಳೆ. ಅವಳಿಗೆ ಪೂರ್ವಜನ್ಮದ ಸ್ಮರಣೆ ಎಲ್ಲವೂ ಇದೆ. ಹೀಗಾಗಿಯೇ ಬಂದ ಎಲ್ಲರಿಗೆ ಶ್ವೇತದ್ವೀಪವನ್ನು ನೀವು ನೋಡಿದ್ದೀರಾ ? ಎಂದು ಕೇಳಿದ್ದಾಳೆ. ನೀನು ಪೂರ್ವಜನ್ಮದ ನಿಮ್ಮ ಗುರುಗಳಿಂದಲೇ ತುಲಸೀಪೂಜೆಯ ಉಪದೇಶವನ್ನು ಪಡೆದು ಶ್ವೇತದ್ವೀಪಕ್ಕೆ ತೆರಳಿದಿ. ಅಲ್ಲಿ ಮೃತಳಾದ ದೇವಸೇನೆಯನ್ನು ನೋಡಿದಿ. ಆ ದೇವಸೇನೆ ಮೃತಳಾಗಿ ಮತ್ತೆ ತನ್ನ ಲೋಕಕ್ಕೆ ಸೇರಿದ್ದಾಳೆ. ನೀನು ಕೂಡಾ ಗುರುಗಳು ಉಪದೇಶ ಮಾಡಿದ ತುಲಸೀಮಂತ್ರವನ್ನು ಇಲ್ಲಿಯೇ ಇದ್ದು ಜಪಿಸು. ಇದೇ ದೇಶದಲ್ಲಿಯೇ ನೀನು ಸಂಸಿದ್ಧನಾಗುವಿ. ವಿಚಾರಿಸಬೇಡ ಎಂದು ಹೇಳಿದರು.

ದೇವದತ್ತ ಪರಶುರಾಮದೇವರ ಅನುಮತಿಯಂತೆ ಅದೇ ಕ್ಷೇತ್ರದಲ್ಲಿ ವಾಸಮಾಡಿದ. ಹನ್ನೆರಡು ವರ್ಷಗಳ ತನಕ ಉಪವಾಸಪರಾಯಣನಾದ. ಸಿದ್ಧಿಯನ್ನು ಪಡೆದ. ನಾರದರು ಅಲ್ಲಿಗೆ ಆಗಮಿಸಿದರು. ಶ್ವೇತದ್ವೀಪವಾಸಿಯಾದ ನಾರದನು ನಾನು ಎಂದರು. ತುಲಸಿಯ ಮಂತ್ರವನ್ನು ಉಪದೇಶಿಸಿದರು. ಈ ಮಂತ್ರವನ್ನು ನೀನು ಸ್ವೀಕರಿಸು. ನಿನಗೆ ಆಕಾಶಗಮನವು ಸಿದ್ಧಿಸುತ್ತದೆ ಎಂದು ಹೇಳಿದರು. ನಾರದರಿಗೆ ನಮಸ್ಕರಿಸಿ ಆ ಮಂತ್ರವನ್ನು ಸ್ವೀಕರಿಸಿದ. ವಿಶಿಷ್ಟವಾದ ರೀತಿಯಲ್ಲಿ ಜಪಿಸಿದ. ಕ್ಷಣದಲ್ಲಿಯೇ ಆಕಾಶಗಮನ ದೇವದತ್ತನಿಗೆ ಸಿದ್ಧಿಸಿತು. ನಂತರ ಶ್ವೇತದ್ವೀಪಕ್ಕೆ ಹೋದ. ತುಲಸಿಯ ಭವನಕ್ಕೆ ಹೋದ. ತುಲಸಿಯನ್ನು ನಮಸ್ಕರಿಸಿದ. ಅಲ್ಲಿ ದೇವಸೇನೆಯನ್ನು ಕಂಡ. ದೇವಸೇನೆಯೂ ಪತಿಯನ್ನು ಅಪೇಕ್ಷಿಸುತ್ತಿದ್ದಳು. ದೇವಸೇನೆಯ ಅಪೇಕ್ಷೆಯನ್ನು ಮನಗಂಡು ತುಲಸಿಯ ಅನುಮತಿಯಿಂದ ನಾರದರು ಅವರಿಬ್ಬರನ್ನೂ ಒಟ್ಟುಗೂಡಿಸಿದರು. ಮಂತ್ರವಿಧಾನಪೂರ್ವಕವಾಗಿ ಅಗ್ನಿಯ ಸಮ್ಮುಖದಲ್ಲಿ ಅವರೀರ್ವರ ವಿವಾಹವನ್ನು ಮಾಡಿಸಿದರು. ದೇವಿಯ ಅನುಜ್ಞೆಯನ್ನು ಪಡೆದು ಅಲ್ಲಿಂದ ದೇವರ ಮನೆಗೆ ನಾರದರು ಹೊರಟರು. ದೇವದತ್ತನೂ ಸಹ ಸುಖವಾದ ದಾಂಪತ್ಯವನ್ನು ಅನುಭವಿಸಿದ. ವಿಹಿತವಾದ ಕರ್ಮಗಳ ಅನುಷ್ಠಾನ ಮಾಡಿದ. ತುಲಸಿಯನ್ನು ವಿಶಿಷ್ಟವಾದ ರೀತಿಯಲ್ಲಿ ಸೇವಿಸಿದ. ದೇವರ ಅನುಗ್ರಹಕ್ಕೆ ಪಾತ್ರನಾದ. ಪರಮಾತ್ಮನ ಲೋಕಗಳನ್ನು ಪಡೆದು ಕೃತಾರ್ಥನಾದ.

ಹೀಗೆ ತುಲಸಿಯ ಸೇವೆಯಿಂದ ದೇವದತ್ತ ಅತ್ಯುತ್ತಮವಾದ ಗತಿಯನ್ನು ಪಡೆದ. ಧರ್ಮಾರ್ಥಕಾಮಮೋಕ್ಷ ರೂಪವಾದ ಪುರುಷಾರ್ಥಗಳನ್ನು ತುಲಸಿಯ ಪ್ರಸಾದದಿಂದ ಮನುಷ್ಯನು ಪಡೆಯುತ್ತಾನೆ ಎಂಬುದಕ್ಕೆ ದೇವದತ್ತ-ದೇವಸೇನೆಯರ ಈ ಇತಿಹಾಸವೇ ದೃಷ್ಟಾಂತವಾಗಿದೆ.

ಪ್ರಹ್ಲಾದರು ಹೇಳಿದ ಈ ಇತಿಹಾಸವನ್ನು ಸೂತರು ಶೌನಕರಿಗೆ ವಿವರಿಸಿದರು. ಈ ಕಥೆಯನ್ನು ಬರೆಯಬೇಕು. ಕೇಳಬೇಕು. ಹೇಳಬೇಕು. ಅವರು ಅಕ್ಷಯವಾದ ಜ್ಞಾನ-ಭಕ್ತ್ಯಾದಿಗಳನ್ನು ಬಯಸುತ್ತಾರೆ. ಬಯಸಿದ ಎಲ್ಲ ಕಾಮನೆಗಳೂ ಪೂರ್ಣವಾಗುತ್ತವೆ. ಈ ಜನ್ಮದಲ್ಲಿಯೇ ಅವರು ಸಂಸಿದ್ಧರಾಗುತ್ತಾರೆ. ಎಂದು ಶೌನಕಾದಿಗಳಿಗೆ ಹೇಳಿದರು. ಪದ್ಮಪುರಾಣದಲ್ಲಿ ಬಂದಿರುವ ಇತಿಹಾಸ ಇದಾಗಿದೆ.

ಸ್ತ್ರೀಯರು ಪುರುಷರು ಎಲ್ಲರೂ ಸಾಧ್ಯಮಾಡಿಕೊಂಡು ಏಳು ಕೋಟಿಬಾರಿ ತುಲಸಿಯ ಈ ಕಥೆಯಲ್ಲಿ ಪ್ರಸ್ತುತವಾದ ಮಂತ್ರವನ್ನು ಜಪಿಸಿ ಸಿದ್ಧಿ ಪಡೆಯಬೇಕು. ನೆನಪಿನಲ್ಲಿಡಿ. ಮಂತ್ರವನ್ನು ಗುರುಗಳಿಂದ ಉಪದೇಶಪೂರ್ವಕವಾಗಿ ಸ್ವೀಕರಿಸಬೇಕು.

## ೨. ತುಲಸಿಗೆ ದೇವರು ನೀಡಿದ ವರ

ಶತಾನಂದರೇ ! ನೀವು ಮಹಾಪ್ರಾಜ್ಞರಾಗಿದ್ದೀರಿ. ಎಲ್ಲಶಾಸ್ತ್ರಗಳನ್ನು ಚೆನ್ನಾಗಿ ತಿಳಿದವರು ನೀವು. ಯಾರ ನಾಮವನ್ನು ಉಚ್ಚರಿಸಿದ ಮಾತ್ರಕ್ಕೆ ಪಾಪಗಳೆಲ್ಲವೂ ಭಸ್ಮವಾಗುತ್ತವೋ ಅಂತಹ ತುಲಸಿಯು ಪದ್ಮೋತ್ಪಲಾದಿ ಜಾತಿಪುಷ್ಪಗಳಿಗಿಂತಲೂ ಅಧಿಕವಾಗಿದೆ. ಇದಕ್ಕೆ ಕಾರಣವೇನು ? ಈಗಲೇ ತುಲಸೀಯ ಈ ಮಹಿಮೆಯನ್ನು ನೀವು ನಮಗೆ ತಿಳಿಸಬೇಕೆಂದು ಋಷಿಗಳು ಶತಾನಂದರಿಗೆ ಪ್ರಶ್ನಿಸಿದರು. ಅಹಲ್ಯಾ-ಗೌತಮರ ಪುತ್ರರೇ ಶತಾನಂದರು.

ಸಾಧುವಾದ ವಿಚಾರವನ್ನೇ ನೀವು ಕೇಳಿದ್ದೀರಿ. ತುಲಸಿಯ ಮಹಿಮೆ ಪರಮಪುಣ್ಯಕರ. ತುಲಸಿಯ ದರ್ಶನದಿಂದಲೇ ಕೋಟಿ ಗೋದಾನದ ಫಲವು ಬರುತ್ತದೆ. ಮಹಿಮೆಯ ಶ್ರವಣದಿಂದ ಆಯುಷ್ಯ, ಬಲ, ಕಾಂತಿ, ಸಂಪತ್ತುಗಳ ಅಭಿವೃದ್ಧಿಯಾಗುತ್ತದೆ. ಈ ವಿಚಾರಗಳನ್ನು ರುದ್ರದೇವರು ತನ್ನ ಮಗನೇ ಆದ ಸ್ಕಂದನಿಗೆ ಹೇಳಿದ್ದಾರೆ. ಮಕ್ಕಳಿಗೆ ಹೇಳಿದ್ದರಿಂದ ಇದು ಅತಿ ರಹಸ್ಯವಾದದ್ದು ಎಂಬುದನ್ನು ಮನಗಾಣಬೇಕು.

ದೂರ್ವಾಸರ ಶಾಪದಿಂದ ದೇವತೆಗಳು ರಾಜ್ಯಭ್ರಷ್ಟರಾದರು. ದೇವರನ್ನು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯನ್ನು ಮನ್ನಿಸಲು ಪರಮಾತ್ಮ ಕ್ಷೀರಸಾಗರವನ್ನು ಮಥನಮಾಡಿದ. ಕ್ಷೀರಸಾಗರವನ್ನೇ ಕಲಶ ಮಾಡಿದ. ವಾಸುಕಿಯನ್ನು ಹಗ್ಗ ಮಾಡಿದ. ಮಂದರವನ್ನು ಕಡುಗೋಲು ಮಾಡಿದ. ಮಧುಸೂದನ ಮಥನ ಮಾಡಿದ. ಈ ಮಥನಕ್ಕೆ ದೇವ-ದಾನವರೂ ಕೈ ಹಚ್ಚಿದರು.

ಕ್ಷೀರಸಾಗರವನ್ನು ಮಥನ ಮಾಡುವಾಗ ಕಲ್ಪವೃಕ್ಷ ಜನಿಸಿತು. ಸುರಭಿಯೂ ಜನಿಸಿತು. ಗಜಶ್ರೇಷ್ಠವಾದ ಐರಾವತ, ಉಚ್ಚೈಶ್ರವಸ್ ಎಂಬ ಕುದುರೆಯು ಜನಿಸಿತು. ಬ್ರಹ್ಮದೇವರಿಂದ ಅಭಿಮನ್ಯಮಾನವಾದ ಕೌಸ್ತುಭವು ಹುಟ್ಟಿತು. ಮಹಾಭಾಗ್ಯ ಸಂಪನ್ನಳಾದ ಲಕ್ಷ್ಮೀದೇವಿಯು ಅವತರಿಸಿದಳು. ಚಂದ್ರ ಮತ್ತು ಅಮೃತದ ಉತ್ಪತ್ತಿಯಾಯಿತು. ಅಮೃತದ ಉತ್ಪತ್ತಿಗಾಗಿಯೇ ಈ ಕ್ಷೀರಸಾಗರಮಥನವು ಪ್ರವೃತ್ತವಾಗಿತ್ತು. ಅಮೃತದ ಉತ್ಪತ್ತಿಯಿಂದ ಪರಮಾತ್ಮನಿಗೆ ಬಹಳ ಸಂತೋಷವಾಯಿತು. ದೇವತೆಗಳ ಮೇಲಿನ ಕೃಪೆಯು ದೇವರಿಗೆ ಉಕ್ಕೇರಿ ಬಂದಿತು.

ಪರಮಾತ್ಮನ ಆನಂದಬಾಷ್ಪವು ಅಮೃತದ ಕಲಶದಲ್ಲಿ ಬಿದ್ದಿತು. ಅಲ್ಲಿಯೇ ಶ್ಯಾಮಲವರ್ಣದ ತುಲಸಿಯು ಅವತರಿಸಿದಳು. ಶ್ರೀಹರಿಯ ಪ್ರೀತಿಗೆ ಪಾತ್ರಳಾದಳು.

ಪುಂಡರೀಕಾಕ್ಷನಾದ ಪರಮಾತ್ಮ ಕಲ್ಯಾದಿದೈತ್ಯರನ್ನು ವಂಚಿಸುತ್ತಾ ದೇವತೆಗಳಿಗೆ ಮಾತ್ರ ಅಮೃತವನ್ನು ಉಣಬಡಿಸಿದ. ಅವರ ರಾಜ್ಯ ಅವರಿಗೆ ಮತ್ತೆ ದೊರಕಿಸಿಕೊಟ್ಟ.

ಮಹಾಲಕ್ಷ್ಮಿಯನ್ನು, ಲಕ್ಷ್ಮಿಯ ಸನ್ನಿಧಾನದಿಂದ ಯೋಗ್ಯಳಾದ ತುಲಸಿಯನ್ನು ಶ್ರೀಹರಿಯು ಸ್ವೀಕರಿಸಿದ. ಲಕ್ಷ್ಮಿಯನ್ನು ತನ್ನ ಹೃದಯದಲ್ಲಿ ಧರಿಸಿದ. ಕೌಸ್ತುಭವನ್ನು ಎದೆಯಲ್ಲಿ ಧರಿಸಿದ. ಆಪಾದ-ಮೌಲಿಪರ್ಯಂತ ತುಲಸಿಯನ್ನು ಧರಿಸಿದ. ತುಲಸಿಗೆ ವರವನ್ನು ನೀಡಿದ.

ನಿನ್ನ ದರ್ಶನದಿಂದ ನನಗೆ ಕುತೂಹಲವಾಗಿದೆ. ನಿನ್ನ ಅಂತರಂಗದಲ್ಲಿರುವ ವರಗಳನ್ನು ಕೇಳು. ಅವೆಲ್ಲವುಗಳನ್ನು ನಾನು ಪೂರ್ಣಮಾಡುತ್ತೇನೆ. ಯಾವುದಕ್ಕೂ ಸಂಕೋಚ ಬೇಡ.

ತುಲಸಿಯು ಕೇಳಿದಳು. ಭಗವನ್ ! ಸಮಗ್ರ ಜಗತ್ತಿಗೆ ನಾಥ ನೀವು. ಎಲ್ಲ ದೇವತೆಗಳು ಸರ್ವೋತ್ತಮನೆಂದು ನಿಮ್ಮನ್ನೇ ಪೂಜಿಸುತ್ತಾರೆ. ನಮ್ಮಂಥ ಭಕ್ತರು ನಿಮಗೆ ಅನಂತ. ಇಡಿಯ ಜಗತ್ತಿಗೆ ನೀವೊಬ್ಬರೇ ನಾಥರು. ನಮ್ಮಂಥವರಿಗೆ ಉಳಿದುದೆಲ್ಲ ಅಶಾಶ್ವತ. ನಿಮ್ಮ ಪ್ರೀತಿಯೇ ಶಾಶ್ವತ. ಆ ಪ್ರೀತಿ ನನ್ನಲ್ಲಿ ಇದ್ದರೆ ನನ್ನ ಮಾತನ್ನು ಕೇಳಿ. ಈ ಮಾತನ್ನು ನಡೆಸಿಕೊಡಿ.

ಮನುಷ್ಯರು ಪಾಪದಲ್ಲಿಯೇ ಪ್ರಸಕ್ತರಾಗಿರುತ್ತಾರೆ. ನನ್ನ ಸೇವೆಯಿಂದ ಅವರ ಪಾಪಗಳೆಲ್ಲ ತೊಲಗಬೇಕು. ಅವರಿಗೆ ಮುಕ್ತಿಯಾಗಬೇಕು. ಮರಣಸಮಯದಲ್ಲಿ ಯಾರು ತುಲಸೀಪತ್ರವನ್ನು ಭಕ್ಷಿಸುವರೋ ಅವರು ಎಷ್ಟೇ ಪಾಪಗಳನ್ನು ಮಾಡಿರಲಿ

ಅವರನ್ನು ನೀವು ಉದ್ಧಾರ ಮಾಡಬೇಕು. ಯಾರು ಪ್ರತಿನಿತ್ಯವೂ ನನ್ನ ಪತ್ರಗಳನ್ನು ನಿಮ್ಮ ಪಾದಕಮಲಗಳಿಗೆ ಸಮರ್ಪಿಸುವರೋ ಅವರಿಗೆ ಕೈವಲ್ಯವನ್ನು ನೀಡಬೇಕು. ಈ ವರವನ್ನು ನನಗೆ ದಯಪಾಲಿಸಿರಿ. ಈ ರೀತಿಯಾಗಿ ಹೇಳಿದಳು. ಸಂತುಷ್ಟಳಾಗಿ ಸುಮ್ಮನಾದಳು.

ದೇವರು ಹೇಳಿದ. ನೀನು ಕಲ್ಯಾಣಿಯಾಗಿರುವಿ. ನಿನ್ನ ದರ್ಶನಾದಿಗಳನ್ನು ನಿತ್ಯವೂ ಮಾಡುವ ಜನರು ಪಾಪಗಳಿಂದ ಮುಕ್ತರಾಗುತ್ತಾರೆ. ಅವರಿಗೆ ನಾನು ಮುಕ್ತಿಯನ್ನು ನೀಡುತ್ತೇನೆ. ಕಲ್ಹಾರವಾಗಲಿ, ಕಮಲವಾಗಲಿ, ಮಾಲತೀ-ಚಂಪಕಾದಿ-ಗಳಾಗಲಿ, ಕೈರವ-ಮಲ್ಲಿಕಾದಿಗಳಾಗಲಿ, ವಿಧವಿಧವಾದ ಕಮಲಗಳಾಗಲಿ, ತುಲಸೀಪತ್ರವಿಲ್ಲದೇ ನನಗೆ ಸಮರ್ಪಿಸಿದರೆ ಆ ಪುಷ್ಪಗಳನ್ನು ನಾನು ಸ್ವೀಕರಿಸುವುದಿಲ್ಲ. ಸುವರ್ಣಪುಷ್ಪವಾಗಲೀ, ಬೆಳ್ಳಿಯ ಪುಷ್ಪಗಳಾಗಲಿ, ರತ್ನನಿರ್ಮಿತವಾದ, ಮುತ್ತುಗಳಿಂದ ನಿರ್ಮಿತವಾದ ಯಾವ ಪುಷ್ಪಗಳೂ ನಿನಗಿಂತ ಪ್ರಿಯವಲ್ಲ. ಇಷ್ಟೇ ಅಲ್ಲ ಅವುಗಳನ್ನು ನಾನು ಸ್ವೀಕಾರ ಮಾಡಲಾರೆ. ಎಲ್ಲ ಪುಷ್ಪ-ಪತ್ರಗಳಲ್ಲಿ ನಿನ್ನ ಪತ್ರವೇ ನನಗೆ ಪ್ರಿಯಕರವಾದದ್ದು. ನಿನ್ನಲ್ಲಿ ನನಗೆ ಪ್ರೀತಿ ನಿರತಿಶಯ. ನಿನ್ನ ದಲವೇ ಶ್ರೇಷ್ಠ.

ನನ್ನ ಪೂಜೆಯಲ್ಲಿ ನಿನ್ನ ದಲಗಳೇ ಪ್ರಶಸ್ತ. ನಿನ್ನ ದರ್ಶನದಿಂದ ನಾನು ಪ್ರೀತನಾಗಿದ್ದೇನೆ. ಒಣಗಿರಲಿ, ಪರ್ಯುಷಿತವಾಗಿರಲಿ, ನಿನ್ನ ದಲ ನನ್ನ ಪೂಜೆಗೆ ಅರ್ಹವೇ ಆಗಿದೆ. ಅದು ನಿಷಿದ್ಧವಲ್ಲ. ಕ್ಷೀರಸಾಗರದಲ್ಲಿ, ವೈಕುಂಠದಲ್ಲಿ, ಶ್ರೀಹರಿಯ ಕ್ಷೇತ್ರದಲ್ಲಿ, ನೈಮಿಷಾರಣ್ಯದಲ್ಲಿ, ಶೋಭಾಯಮಾನವಾದ ತುಲಸೀವೃಕ್ಷದ ಮೂಲದಲ್ಲಿ ನಾನು ಯಾವಾಗಲೂ ಸನ್ನಿಹಿತವಾಗಿರುತ್ತೇನೆ.

ಪತಿವ್ರತಾಸ್ತ್ರೀಯರಲ್ಲಿ, ವೇದಾಂತಗಳಲ್ಲಿ, ಭಕ್ತರ ಹೃದಯಕಮಲದಲ್ಲಿ, ಸೂರ್ಯಮಂಡಲಮಧ್ಯದಲ್ಲಿ, ತುಲಸಿಯ ಮೂಲದಲ್ಲಿಯೂ ನಾನು ಸನ್ನಿಹಿತನಾಗಿರುತ್ತೇನೆ.

ದೇವತೆಗಳಾಗಲಿ, ಮನುಷ್ಯರಾಗಲಿ, ಕಿನ್ನರರಾಗಲಿ, ನಿನ್ನಲ್ಲಿ ಭಕ್ತಿ ಇಲ್ಲದವನು ನನಗೆ ಶತ್ರುವಾಗಿದ್ದಾನೆ. ಸದಾ ಶತ್ರುವಾಗಿಯೇ ಇರುತ್ತಾನೆ. ಆದ್ದರಿಂದ ನಿನ್ನಲ್ಲಿ ಎಲ್ಲರೂ ಭಕ್ತಿಯನ್ನು ಮಾಡಲೇಬೇಕು.

ಕಣ್ಣುಗಳನ್ನು ಅರಳಿಸಿ ಸಂತೋಷದಿಂದ ಈ ರೀತಿಯಾಗಿ ಮಾತನಾಡಿದ ಶ್ರೀಹರಿ. ತುಲಸಿಯನ್ನು ಸಂತೋಷಪಡಿಸುತ್ತಾ ಅವಳನ್ನು ಆಲಿಂಗಿಸಿಕೊಂಡ. ಅಲ್ಲಿಯೇ ಅಂತರ್ಹಿತನಾದ.

ಭಗವಂತ ತುಲಸಿಗೆ ಈ ರೀತಿಯಾಗಿ ವರಗಳನ್ನು ನೀಡಿದ್ದಾನೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ತುಲಸಿಯ ಸೇವೆಯನ್ನು ಮಾಡಬೇಕು. ತುಲಸಿಯನ್ನು ಸಂತೋಷಪಡಿಸಬೇಕು. ಎಲ್ಲ ಪಾಪಗಳಿಂದ ನಿರ್ಮುಕ್ತನಾಗಿ ವಿಷ್ಣುಲೋಕಗಳನ್ನು ಪಡೆದು ಸುಖಿಸುತ್ತಾನೆ.

ಇದು ಪದ್ಮಪುರಾಣದಲ್ಲಿಯ ತುಲಸಿಯ ಮಹಿಮೆ.

★★★★

## ೩. ವಾರ್ಧಕ್ಯ ಕಳೆದು ಯೌವನ ನೀಡಿದ ಶ್ರೀತುಲಸೀ

ಪ್ರಹ್ಲಾದರಾಜರು ಹೇಳಿದ ಪರಮಪಾವನವಾದ ಮತ್ತೊಂದು ಇತಿಹಾಸ ಈ ರೀತಿಯಾಗಿದೆ.

ಉಜ್ಜಯಿನಿಯನ್ನಾಳುವ ದೊರೆ ಉದಯನ. ಕಮಲದಂತಹ ಕಣ್ಣುಗಳು. ಉದಾರವಾದ ಸಂಪತ್ತು. ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡ ವಿರಾಗಿ. ಪರಮಶಾಂತ. ಎಷ್ಟು ರೇಗಿಸಿದರೂ ಅವನಲ್ಲಿ ಶಾಂತಿಯೇ ಮನೆಮಾಡಿಕೊಳ್ಳುತ್ತಿತ್ತು. ಅವನ ಹೆಂಡತಿ ಸುಶೀಲಾ. ಹೆಸರಿಗೆ ತಕ್ಕ ಹಾಗೆ ಶೀಲವಂತಳು. ಮಹಾಭಾಗ್ಯ ಸಂಪನ್ನಳು. ಪತಿವ್ರತಾಶಿರೋಮಣಿ. ದಂಪತಿಗಳಿಬ್ಬರೂ ಧಾರ್ಮಿಕರಾಗಿದ್ದರು. ಆದರೆ ಅವರಿಗೆ ಮಕ್ಕಳಿರಲಿಲ್ಲ. ಹಲವಾರು ಕೊರತೆಗಳಿರುವುದೇ ಸಂಸಾರ. ಆದ್ದರಿಂದಲೇ ಸಂಸಾರ ಅಸಾರ.

ಮಕ್ಕಳಾಗದಿರುವುದಕ್ಕೆ ಪ್ರಾಚೀನಕರ್ಮವೇ ಕಾರಣ. ಅದೊಂದು ನ್ಯೂನತೆಯನ್ನು ಬಿಟ್ಟರೆ ಧರ್ಮದಲ್ಲಿ ಅವರಿಗೆ ಅಧಿಕಾರವಿದ್ದೇ ಇದೆ. ಅನಪತ್ಯನೂ ಎಲ್ಲ ಲೋಕಗಳನ್ನು ಗೆಲ್ಲುತ್ತಾನೆ. ಆದರೆ ಕಡ್ಡಾಯವಾಗಿ ಅವರು ಧಾರ್ಮಿಕರಾಗಬೇಕು. ಆದರೂ ಮಕ್ಕಳನ್ನು ಪಡೆದು ಅವರನ್ನು ಧಾರ್ಮಿಕರನ್ನಾಗಿ ಮಾಡಿ ಮುಂದಿನ ಸಮಾಜಕ್ಕೆ ಕೊಡುಗೆಯಾಗಿ ಕೊಡಬೇಕೆಂಬ ಹಂಬಲ ಅವರಲ್ಲಿ ಇತ್ತು. ದಂಪತಿಗಳು ವೃದ್ಧರಾಗಿದ್ದರು. ಸಂತಾನದ ಆಸೆಯೂ ಕಮರಿಹೋಗಿತ್ತು. ಹೀಗಾಗಿ ಮನದಲ್ಲಿ ವೈರಾಗ್ಯ ತುಂಬಿತ್ತು. ಸದ್ಗತಿಗಾಗಿ ಸದ್ಧರ್ಮವನ್ನು ಪಾಲಿಸಲು ತೀರ್ಥಯಾತ್ರೆಗೆ ಹೊರಟರು. ದಾನ-ಧರ್ಮಕ್ಕಾಗಿ ಹೇರಳವಾದ ಸಂಪತ್ತನ್ನು ತೆಗೆದುಕೊಂಡರು. ಮಂತ್ರಿಗಳ ಜೊತೆಗೂಡಿ ಯಾತ್ರೆಗೆ ಸಿದ್ಧರಾದರು.

ಯಾತ್ರಾಕ್ರಮೇಣ ಯಮುನಾನದಿಗೆ ಹೋದರು. ಮಾರ್ಗದಲ್ಲಿ ಅವರಿಗೆ ವಸಿಷ್ಠರ ಆಶ್ರಮವು ಸಿಕ್ಕಿತು. ಅನೇಕ ಮಹರ್ಷಿಗಳು ಆ ಆಶ್ರಮದಲ್ಲಿ ಸ್ವಧರ್ಮವನ್ನು ಸಂಪಾದಿಸುತ್ತಾ ಸುಖವಾಗಿ ಇದ್ದರು. ಅತಿವಿಶಿಷ್ಟವಾದ ಧರ್ಮಾಚರಣೆಯನ್ನು ಕಂಡು ಸಂತುಷ್ಟರಾಗಿದ್ದರು. ಅಲ್ಲಿ ವಸಿಷ್ಠರನ್ನು ನೋಡಿದರು. ಕೂಡಲೇ ರಥದಿಂದ ಇಳಿದರು. ಸಾಷ್ಟಾಂಗವೆರಗಿ ಕುಳಿತರು.

ದಂಪತಿಗಳು ಮಾತ್ರ ವೃದ್ಧರಾಗಿದ್ದರು. ಸೇವಾಮನೋಭಾವ ನಿತ್ಯತರುಣವಾಗಿತ್ತು. ಅವರಿಬ್ಬರೂ ವಸಿಷ್ಠರ ಸೇವೆಯನ್ನು ಮಾಡಿದರು. ಸೇವಾಸಂತುಷ್ಟರಾದ ವಸಿಷ್ಠರು ಕೇಳಿದರು. ರಾಜ್ಯದ ಪರಿಪಾಲಕನಾದ ನೀನು ಯಾಕೆ ಈ ತೀರ್ಥಯಾತ್ರೆಯನ್ನು ಮಾಡುತ್ತಲಿದ್ದಿ? ಇದು ಕೂಡಾ ಒಂದು ಬಗೆಯ ತಪಸ್ಸೇ ಆಗಿದೆ. ಯಾಕೆ ಈ ತಪಸ್ಸಿನಲ್ಲಿ ನಿನಗೆ ಆಸಕ್ತಿ ಎಂದು ಕೇಳಿದರು.

ರಾಜಾ ಉದಯನ ಉತ್ತರಿಸಿದ. ಬ್ರಹ್ಮರ್ಷಿಗಳೇ ನಾವು ವೃದ್ಧರಾಗಿದ್ದೇವೆ. ನಮಗೆ ಮಕ್ಕಳಾಗಿಲ್ಲ. ಮಕ್ಕಳಿಂದ ಆಗಬೇಕಾದ ಉದ್ಧಾರ ಅನಪತ್ಯರಿಗೆ ತಪಸ್ಸಿನ ಸಂಗ್ರಹದಿಂದಲೇ ಎಂದು ಕೇಳಿದ್ದೇನೆ. ಅಲ್ಲದೇ ಈಗ ಯಾವ ವಿಷಯಗಳಲ್ಲಿಯೂ ನನಗೆ ಆಸಕ್ತಿ ಇಲ್ಲ. ನನ್ನ ಸತಿಗೂ ಯಾವುದೇ ಅಪೇಕ್ಷೆಗಳಿಲ್ಲ. ಧರ್ಮದ ಸಂಗ್ರಹಕ್ಕಾಗಿ ತೀರ್ಥಯಾತ್ರೆಗೆ ಹೊರಟಿದ್ದೇವೆ.

ವಸಿಷ್ಠರು ದಿವ್ಯದೃಷ್ಟಿಯಿಂದ ಒಂದು ಬಾರಿ ಉದಯನನ ಮುಖವನ್ನು ನೋಡಿದರು. ನಕ್ಕು ನುಡಿದರು. ರಾಜ ಈ ತೀರ್ಥಯಾತ್ರೆ ಬೇಡ. ನಿನಗೆ ಮಕ್ಕಳಾಗುತ್ತಾರೆ. ಚಿಂತೆ ಬೇಡ.

ರಾಜನಿಗೆ ಆಶ್ಚರ್ಯವಾಯಿತು. ತನ್ನ ಎಲ್ಲ ಇಂದ್ರಿಯಗಳೂ ಕುಂಠಿತವಾಗಿವೆ. ತನ್ನ ಸತಿ ಋಷಿಪಂಚಮಿ ವ್ರತವನ್ನು ಮಾಡುತ್ತಿದ್ದಾಳೆ. ನಮ್ಮಿಬ್ಬರಿಗೆ ಮಕ್ಕಳಾಗುತ್ತಾರೆಂದು ವಸಿಷ್ಠರು ಹೇಳುತ್ತಿದ್ದಾರೆ. ಮುಖದಲ್ಲಿ ಮಂದಹಾಸ ಮೂಡಿತು. ಕ್ಷಣಕಾಲದಲ್ಲಿಯೇ ಬಂದು ಮಾಯವಾಯಿತು. ಎರಡನೆ ಕ್ಷಣದಲ್ಲಿ ಆ ಮಂದಹಾಸವೇ ಅಪಹಾಸವಾಗುತ್ತದೆಂದು ತನಗೆ ಗೊತ್ತು. ಹೀಗಾಗಿ ರಾಜ ಕ್ಷಣದಲ್ಲಿಯೇ ಆ ನಗುವನ್ನು ನಿಯಂತ್ರಿಸಿಕೊಂಡ.

ಭೂತ-ಭವಿಷ್ಯಗಳನ್ನು ಅತ್ಯಂತ ಸ್ಪಷ್ಟವಾಗಿ ಕಾಣಲು ಸಮರ್ಥರಾದವರು ವಸಿಷ್ಠರು. ಅವರ ದೃಷ್ಟಿಯಿಂದ ಕ್ಷಣಕಾಲದ ಈ ಮಂದಹಾಸ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕ್ಷಣಕಾಲದ ಆ ಮಂದಹಾಸವನ್ನು ಅತಿ ಸ್ಪಷ್ಟವಾಗಿ ಗಮನಿಸಿದರು.

ವಸಿಷ್ಠರು ಹೇಳಿದರು. ರಾಜ ! ನಾನು ಹೇಳಿದ ಮಾತು ಸುಳ್ಳೆಂದು ತಿಳಿಯಬೇಡ. ನಿನ್ನ ಪ್ರಾರಬ್ಧ ನನಗೆ ಸ್ಪಷ್ಟವಾಗಿ ಕಾಣಿಸಿದೆ. ನೀವು ವೃದ್ಧರಾಗಿರಬಹುದು. ಮತ್ತೆ ನೀವು ಯುವಕರಾಗುತ್ತೀರಿ. ನೀವು ಸೋಮವಂಶದಲ್ಲಿ ಜನಿಸಿದ್ದೀರಿ. ಧಾರ್ಮಿಕರೂ ಆಗಿದ್ದೀರಿ. ನಿಮಗೆ ಮಕ್ಕಳಾಗುತ್ತಾರೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ.

ಈಗ ರಾಜ ಮತ್ತಿಷ್ಟು ಆಶ್ಚರ್ಯಚಕಿತನಾದ. ಅವಸ್ಥೆಗಳು ಬೇಕು ಬೇಕಾದಾಗ ಬದಲಾಗಬಹುದೇ? ರಾಜನ ತಲೆ ವಿಚಾರದ ಸುಳಿಯಾಗಿತ್ತು. ಈಗ ಮಾತ್ರ ಸ್ಪಷ್ಟವಾಗಿ ವಸಿಷ್ಠರಿಗೆ ಕೇಳಿಯೇ ಬಿಟ್ಟ ರಾಜ. ಸ್ವಾಮಿನ್ ! ಕಳೆದ ಯೌವನವನ್ನು ಪಡೆಯಲು ಉಪಾಯ ಉಂಟೇ ? ನಾನು ಹೇಗೆ ಯುವಕನಾಗುತ್ತೇನೆ. ನಾನೊಬ್ಬ ಯುವಕನಾದರೆ ನಾನು ಒಪ್ಪುವುದಿಲ್ಲ. ನನ್ನ ಸತಿಯಾದ ಈ ಸುಶೀಲೆಯೂ ಯುವತಿಯಾಗಬೇಕು. ಅವಳಿಗೆ ಹೇಗೆ ಯೌವನವು ಬರುತ್ತದೆ. ನನಗೆ ಬಹಳ ಕುತೂಹಲವಾಗುತ್ತಿದೆ. ವಿಸ್ತಾರವಾಗಿ ತಿಳಿಸಬೇಕೆಂದು ಪ್ರಾರ್ಥಿಸಿದ.

ವಸಿಷ್ಠರು ಹೇಳಿದರು. ನಿಜ. ಇದು ವಿಚಿತ್ರವೇ ಸರಿ. ನಿಮ್ಮ ಯೌವನಪ್ರಾಪ್ತಿಗೆ ಪ್ರಬಲವಾದ ಕಾರಣ ಒಂದಿದೆ. ಅದುವೇ ತುಲಸೀಸೇವೆ.

ತುಲಸಿಯು ಸಾಮಾನ್ಯಳಲ್ಲ. ಅಮೃತದಲ್ಲಿ ಅವಳ ಜನನವಾಗಿದೆ. ಎಲ್ಲ ದೇವತೆಗಳಿಂದ ನಮಸ್ಕೃತಳಾಗಿದ್ದಾಳೆ. ಅವಳ ಪ್ರಸಾದದಿಂದ ಮತ್ತೆ ನಿಮಗೆ ಯೌವನ ಬರುತ್ತದೆ. ನೆನಪಿನಲ್ಲಿಡು. ತುಲಸಿಯು ಅಮೃತದಲ್ಲಿ ಜನಿಸಿದ್ದಾಳೆ. ಅವಳಿಗೆ ಸತ್ತವರನ್ನು ಬದುಕಿಸುವ ತ್ರಾಣವೂ ನಿಸ್ಸಂದೇಹವಾಗಿದೆ. ನಿಮಗೆ ಭರತನೆಂಬ ಮಗನೂ ಜನಿಸುತ್ತಾನೆ. ಭಾರತ ಎಂಬ ಈ ದೇಶದ ಹೆಸರನ್ನು ಸಾರ್ಥಕಪಡಿಸುತ್ತಾನೆ. ನಿಮ್ಮ ಕುಲದ ಅಭಿವೃದ್ಧಿಗೆ ತುಲಸಿಯೇ ಕಾರಣಳಾಗಿದ್ದಾಳೆ. ಈ ಮಂತ್ರವನ್ನು ಸ್ವೀಕರಿಸು. ತಾರಕವಾದ ಮಂತ್ರವಿದು.

ತುಲಸಿ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ ।
ನಮಸ್ತೇ ನಾರದನುತೇ ನಾರಾಯಣಮನಃಪ್ರಿಯೇ ॥

ಪರಮಪಾವನವಾದ ಮಂತ್ರವಿದು. ಇದನ್ನು ಜಪಿಸು. ತುಲಸಿಯನ್ನು ವಿಶಿಷ್ಟವಾದ ರೀತಿಯಲ್ಲಿ ಪೂಜಿಸು. ತುಲಸಿ ಲಕ್ಷ್ಮೀದೇವಿಯ ಸಖಿ. ಶ್ರಿಯಃ ಸಖಿ ಎಂದು ಸುಮ್ಮನೇ ಹೇಳಿದ್ದಲ್ಲ. ಸಖಿ ಎಂದರೆ, ಸ ಸಮಾನವಾದ ಖ ಆಕಾಶ ಅರ್ಥಾತ್ ದೇಶ ಇದ್ದವರು ಸಖಾ ಸಖಿ ಆಗುತ್ತಾರೆ. ಅಂದರೆ ಇಬ್ಬರೂ ಒಂದೇ

ದೇಶದಲ್ಲಿದ್ದವರು ಎಂದು ಅರ್ಥ. ಯಾವ ದೇಹದಲ್ಲಿ ತುಲಸಿ ಇದ್ದಾಳೋ ಅದೇ ದೇಹದಲ್ಲಿ ಲಕ್ಷ್ಮೀದೇವಿಯೂ ಇದ್ದಾಳೆ. ಅರ್ಥಾತ್ ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನಕ್ಕೆ ಪಾತ್ರಳಾಗಿದ್ದಾರೆ ಎಂದು ಅರ್ಥ. ಇಂತಹ ಮಹಾಸೌಭಾಗ್ಯವನ್ನು ಸಂಪಾದಿಸಿಕೊಂಡಿದ್ದಾಳೆ ತುಲಸಿ. ರಮಾದೇವಿಯ ಸಖ್ಯವನ್ನು ಸಂಪಾದನೆ ಮಾಡಿದ್ದಕ್ಕಾಗಿಯೇ ಶ್ರೀಹರಿಯ ಸತಿಯಾಗಿದ್ದಾಳೆ. ಇಂಥವಳಿಗೆ ಅಸಾಧ್ಯವಾದುದು ಯಾವುದೂ ಇಲ್ಲವೆಂದು ತಿಳಿ.

ಆದ್ದರಿಂದ ನಾನು ಉಪದೇಶ ಮಾಡಿದ ಮಂತ್ರವನ್ನು ಪಠಿಸುತ್ತಾ ತುಲಸಿಯನ್ನು ಷೋಡಶ ಉಪಚಾರಗಳಿಂದ ಅರ್ಚಿಸು. ಪೂಜಿಸು. ನಿನಗೆ ಮಂಗಳವಾಗುತ್ತದೆ.

ಅಮೃತಕಲಶದಲ್ಲಿ ಜನಿಸಿದ್ದಾಳೆ ತುಲಸಿ. ಸ್ವಯಂ ಅಮೃತಾತ್ಮನಾಗಿದ್ದಾನೆ ಪರಮಾತ್ಮ. ಹೀಗಾಗಿ ತುಲಸಿಯ ಅಪೇಕ್ಷೆಯೂ ದೇವರಿಗಿಲ್ಲ. ತುಲಸಿಯನ್ನು ಅನುಗ್ರಹಿಸುವುದಕ್ಕಾಗಿ ಮಾತ್ರ ತುಲಸಿಯನ್ನು ಪರಮಾತ್ಮ ಸ್ವೀಕರಿಸುತ್ತಾನೆ. ಆದ್ದರಿಂದ ಪರಮಾತ್ಮನನ್ನು ತುಲಸೀದಲಗಳಿಂದ ಪೂಜಿಸು. ಪರಮಾತ್ಮ ಶ್ರೀಸಖ. ರಮಾದೇವಿಯನ್ನು ಬಿಟ್ಟು ಇರಲೊಲ್ಲ. ತುಲಸಿಯನ್ನೇ ಅಧಿಕವೆಂದೂ ತಿಳಿಯಬೇಡ. ರಮೆಗಿಂತಲೂ ದೇವರಿಗೆ ಅಧಿಕರಾದವರು ಮತ್ತಾರೂ ಇಲ್ಲವೆಂಬ ಚಿಂತನೆಯನ್ನು ಬಿಟ್ಟಿಯಾದರೆ ತುಲಸಿಗೆ ಸಂತೋಷವಾಗುವುದಿಲ್ಲ. ತುಲಸೀವತ್ಸಲನಾದ ಪರಮಾತ್ಮ ತುಲಸಿಯಿಂದ ಅರ್ಚಿತನಾದಾಗ ಭಕ್ತವತ್ಸಲನಾಗುತ್ತಾನೆ. ಭಕ್ತರ ಇಷ್ಟಗಳನ್ನು ಈಡೇರಿಸುತ್ತಾನೆ.

ತುಲಸೀಮಿಶ್ರಿತವಾದ ಶುಭವಾದ ಜಲದಿಂದ ದೇವರ ಅಭಿಷೇಷವನ್ನು ಮಾಡು. ತುಲಸೀಮಿಶ್ರಿತವಾದ ಆ ತೀರ್ಥವನ್ನು ಸ್ವೀಕರಿಸು. ಆ ತೀರ್ಥದಿಂದ ನಿನ್ನ ದೇಹವನ್ನು ಪ್ರೋಕ್ಷಿಸಿಕೋ. ನಿನ್ನ ಸತಿಯ ದೇಹವನ್ನೂ ಪ್ರೋಕ್ಷಣೆಮಾಡು. ತುಲಸೀದೇವಿಯ ವನವನ್ನೇ ನಿರ್ಮಾಣ ಮಾಡು. ಅಲ್ಲಿ ಯಾವುದೇ ರೀತಿಯಾದ ಹೊಲಸುಗಳಿಲ್ಲದ ಹಾಗೆ ತುಲಸೀವನವನ್ನು ಸಂರಕ್ಷಿಸು.

ಆ ವನದಲ್ಲಿಯೇ ಪರಮಾತ್ಮನ ದೇವಾಲಯವನ್ನು ನಿರ್ಮಾಣಮಾಡು. ಶ್ರೀಹರಿಯ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡು. ಅಲ್ಲಿಯೇ ಯಾವಾಗಲೂ ವಾಸಮಾಡು. ಶ್ರೀಹರಿಯ, ಲಕ್ಷ್ಮೀದೇವಿಯ, ತುಲಸೀದೇವಿಯ ಸೇವೆಯನ್ನು ನಿಷ್ಠೆಯಿಂದ ಮಾಡು. ಹೀಗೆ ಒಂದು ವರ್ಷದ ತನಕ ಶ್ರೀತುಲಸಿಯ ಸೇವೆಯನ್ನು ಮಾಡು. ಸಂತುಷ್ಟಳಾದ ತುಲಸಿ ನಿನ್ನನ್ನು ಅನುಗ್ರಹಿಸುತ್ತಾಳೆ. ನಿನಗೆ ಸತ್ಸಂತಾನವಾಗುತ್ತದೆ.

ವಸಿಷ್ಠರು ಹೇಳಿದರು. ರಾಜ ! ನಾನು ಹೇಳಿದ ಮಾತು ಸುಳ್ಳೆಂದು ತಿಳಿಯಬೇಡ. ನಿನ್ನ ಪ್ರಾರಬ್ಧ ನನಗೆ ಸ್ಪಷ್ಟವಾಗಿ ಕಾಣಿಸಿದೆ. ನೀವು ವೃದ್ಧರಾಗಿರಬಹುದು. ಮತ್ತೆ ನೀವು ಯುವಕರಾಗುತ್ತೀರಿ. ನೀವು ಸೋಮವಂಶದಲ್ಲಿ ಜನಿಸಿದ್ದೀರಿ. ಧಾರ್ಮಿಕರೂ ಆಗಿದ್ದೀರಿ. ನಿಮಗೆ ಮಕ್ಕಳಾಗುತ್ತಾರೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ.

ಈಗ ರಾಜ ಮತ್ತಿಷ್ಟು ಆಶ್ಚರ್ಯಚಕಿತನಾದ. ಅವಸ್ಥೆಗಳು ಬೇಕು ಬೇಕಾದಾಗ ಬದಲಾಗಬಹುದೇ? ರಾಜನ ತಲೆ ವಿಚಾರದ ಸುಳಿಯಾಗಿತ್ತು. ಈಗ ಮಾತ್ರ ಸ್ಪಷ್ಟವಾಗಿ ವಸಿಷ್ಠರಿಗೆ ಕೇಳಿಯೇ ಬಿಟ್ಟ ರಾಜ. ಸ್ವಾಮಿನ್ ! ಕಳೆದ ಯೌವನವನ್ನು ಪಡೆಯಲು ಉಪಾಯ ಉಂಟೇ ? ನಾನು ಹೇಗೆ ಯುವಕನಾಗುತ್ತೇನೆ. ನಾನೊಬ್ಬ ಯುವಕನಾದರೆ ನಾನು ಒಪ್ಪುವುದಿಲ್ಲ. ನನ್ನ ಸತಿಯಾದ ಈ ಸುಶೀಲೆಯೂ ಯುವತಿಯಾಗಬೇಕು. ಅವಳಿಗೆ ಹೇಗೆ ಯೌವನವು ಬರುತ್ತದೆ. ನನಗೆ ಬಹಳ ಕುತೂಹಲವಾಗುತ್ತಿದೆ. ವಿಸ್ತಾರವಾಗಿ ತಿಳಿಸಬೇಕೆಂದು ಪ್ರಾರ್ಥಿಸಿದ.

ವಸಿಷ್ಠರು ಹೇಳಿದರು. ನಿಜ. ಇದು ವಿಚಿತ್ರವೇ ಸರಿ. ನಿಮ್ಮ ಯೌವನಪ್ರಾಪ್ತಿಗೆ ಪ್ರಬಲವಾದ ಕಾರಣ ಒಂದಿದೆ. ಅದುವೇ ತುಲಸೀಸೇವೆ.

ತುಲಸಿಯು ಸಾಮಾನ್ಯಳಲ್ಲ. ಅಮೃತದಲ್ಲಿ ಅವಳ ಜನನವಾಗಿದೆ. ಎಲ್ಲ ದೇವತೆಗಳಿಂದ ನಮಸ್ಕೃತಳಾಗಿದ್ದಾಳೆ. ಅವಳ ಪ್ರಸಾದದಿಂದ ಮತ್ತೆ ನಿಮಗೆ ಯೌವನ ಬರುತ್ತದೆ. ನೆನಪಿನಲ್ಲಿಡು. ತುಲಸಿಯು ಅಮೃತದಲ್ಲಿ ಜನಿಸಿದ್ದಾಳೆ. ಅವಳಿಗೆ ಸತ್ತವರನ್ನು ಬದುಕಿಸುವ ತ್ರಾಣವೂ ನಿಸ್ಸಂದೇಹವಾಗಿದೆ. ನಿಮಗೆ ಭರತನೆಂಬ ಮಗನೂ ಜನಿಸುತ್ತಾನೆ. ಭಾರತ ಎಂಬ ಈ ದೇಶದ ಹೆಸರನ್ನು ಸಾರ್ಥಕಪಡಿಸುತ್ತಾನೆ. ನಿಮ್ಮ ಕುಲದ ಅಭಿವೃದ್ಧಿಗೆ ತುಲಸಿಯೇ ಕಾರಣಳಾಗಿದ್ದಾಳೆ. ಈ ಮಂತ್ರವನ್ನು ಸ್ವೀಕರಿಸು. ತಾರಕವಾದ ಮಂತ್ರವಿದು.

ತುಲಸಿ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ ।
ನಮಸ್ತೇ ನಾರದನುತೇ ನಾರಾಯಣಮನಃಪ್ರಿಯೇ ॥

ಪರಮಪಾವನವಾದ ಮಂತ್ರವಿದು. ಇದನ್ನು ಜಪಿಸು. ತುಲಸಿಯನ್ನು ವಿಶಿಷ್ಟವಾದ ರೀತಿಯಲ್ಲಿ ಪೂಜಿಸು. ತುಲಸಿ ಲಕ್ಷ್ಮೀದೇವಿಯ ಸಖಿ. ಶ್ರಿಯಃ ಸಖಿ ಎಂದು ಸುಮ್ಮನೇ ಹೇಳಿದ್ದಲ್ಲ. ಸಖಿ ಎಂದರೆ, ಸ ಸಮಾನವಾದ ಖ ಆಕಾಶ ಅರ್ಥಾತ್ ದೇಶ ಇದ್ದವರು ಸಖಾ ಸಖಿ ಆಗುತ್ತಾರೆ. ಅಂದರೆ ಇಬ್ಬರೂ ಒಂದೇ

ದೇಶದಲ್ಲಿದ್ದವರು ಎಂದು ಅರ್ಥ. ಯಾವ ದೇಹದಲ್ಲಿ ತುಲಸಿ ಇದ್ದಾಳೋ ಅದೇ ದೇಹದಲ್ಲಿ ಲಕ್ಷ್ಮೀದೇವಿಯೂ ಇದ್ದಾಳೆ. ಅರ್ಥಾತ್ ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನಕ್ಕೆ ಪಾತ್ರಳಾಗಿದ್ದಾರೆ ಎಂದು ಅರ್ಥ. ಇಂತಹ ಮಹಾಸೌಭಾಗ್ಯವನ್ನು ಸಂಪಾದಿಸಿಕೊಂಡಿದ್ದಾಳೆ ತುಲಸಿ. ರಮಾದೇವಿಯ ಸಖ್ಯವನ್ನು ಸಂಪಾದನೆ ಮಾಡಿದ್ದಕ್ಕಾಗಿಯೇ ಶ್ರೀಹರಿಯ ಸತಿಯಾಗಿದ್ದಾಳೆ. ಇಂಥವಳಿಗೆ ಅಸಾಧ್ಯವಾದುದು ಯಾವುದೂ ಇಲ್ಲವೆಂದು ತಿಳಿ.

ಆದ್ದರಿಂದ ನಾನು ಉಪದೇಶ ಮಾಡಿದ ಮಂತ್ರವನ್ನು ಪಠಿಸುತ್ತಾ ತುಲಸಿಯನ್ನು ಷೋಡಶ ಉಪಚಾರಗಳಿಂದ ಅರ್ಚಿಸು. ಪೂಜಿಸು. ನಿನಗೆ ಮಂಗಳವಾಗುತ್ತದೆ.

ಅಮೃತಕಲಶದಲ್ಲಿ ಜನಿಸಿದ್ದಾಳೆ ತುಲಸಿ. ಸ್ವಯಂ ಅಮೃತಾತ್ಮನಾಗಿದ್ದಾನೆ ಪರಮಾತ್ಮ. ಹೀಗಾಗಿ ತುಲಸಿಯ ಅಪೇಕ್ಷೆಯೂ ದೇವರಿಗಿಲ್ಲ. ತುಲಸಿಯನ್ನು ಅನುಗ್ರಹಿಸುವುದಕ್ಕಾಗಿ ಮಾತ್ರ ತುಲಸಿಯನ್ನು ಪರಮಾತ್ಮ ಸ್ವೀಕರಿಸುತ್ತಾನೆ. ಆದ್ದರಿಂದ ಪರಮಾತ್ಮನನ್ನು ತುಲಸೀದಲಗಳಿಂದ ಪೂಜಿಸು. ಪರಮಾತ್ಮ ಶ್ರೀಸಖ. ರಮಾದೇವಿಯನ್ನು ಬಿಟ್ಟು ಇರಲೊಲ್ಲ. ತುಲಸಿಯನ್ನೇ ಅಧಿಕವೆಂದೂ ತಿಳಿಯಬೇಡ. ರಮೆಗಿಂತಲೂ ದೇವರಿಗೆ ಅಧಿಕರಾದವರು ಮತ್ತಾರೂ ಇಲ್ಲವೆಂಬ ಚಿಂತನೆಯನ್ನು ಬಿಟ್ಟಿಯಾದರೆ ತುಲಸಿಗೆ ಸಂತೋಷವಾಗುವುದಿಲ್ಲ. ತುಲಸೀವತ್ಸಲನಾದ ಪರಮಾತ್ಮ ತುಲಸಿಯಿಂದ ಅರ್ಚಿತನಾದಾಗ ಭಕ್ತವತ್ಸಲನಾಗುತ್ತಾನೆ. ಭಕ್ತರ ಇಷ್ಟಗಳನ್ನು ಈಡೇರಿಸುತ್ತಾನೆ.

ತುಲಸೀಮಿಶ್ರಿತವಾದ ಶುಭವಾದ ಜಲದಿಂದ ದೇವರ ಅಭಿಷೇಷವನ್ನು ಮಾಡು. ತುಲಸೀಮಿಶ್ರಿತವಾದ ಆ ತೀರ್ಥವನ್ನು ಸ್ವೀಕರಿಸು. ಆ ತೀರ್ಥದಿಂದ ನಿನ್ನ ದೇಹವನ್ನು ಪ್ರೋಕ್ಷಿಸಿಕೋ. ನಿನ್ನ ಸತಿಯ ದೇಹವನ್ನೂ ಪ್ರೋಕ್ಷಣೆಮಾಡು. ತುಲಸೀದೇವಿಯ ವನವನ್ನೇ ನಿರ್ಮಾಣ ಮಾಡು. ಅಲ್ಲಿ ಯಾವುದೇ ರೀತಿಯಾದ ಹೊಲಸುಗಳಿಲ್ಲದ ಹಾಗೆ ತುಲಸೀವನವನ್ನು ಸಂರಕ್ಷಿಸು.

ಆ ವನದಲ್ಲಿಯೇ ಪರಮಾತ್ಮನ ದೇವಾಲಯವನ್ನು ನಿರ್ಮಾಣಮಾಡು. ಶ್ರೀಹರಿಯ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡು. ಅಲ್ಲಿಯೇ ಯಾವಾಗಲೂ ವಾಸಮಾಡು. ಶ್ರೀಹರಿಯ, ಲಕ್ಷ್ಮೀದೇವಿಯ, ತುಲಸೀದೇವಿಯ ಸೇವೆಯನ್ನು ನಿಷ್ಠೆಯಿಂದ ಮಾಡು. ಹೀಗೆ ಒಂದು ವರ್ಷದ ತನಕ ಶ್ರೀತುಲಸಿಯ ಸೇವೆಯನ್ನು ಮಾಡು. ಸಂತುಷ್ಟಳಾದ ತುಲಸಿ ನಿನ್ನನ್ನು ಅನುಗ್ರಹಿಸುತ್ತಾಳೆ. ನಿನಗೆ ಸತ್ಸಂತಾನವಾಗುತ್ತದೆ.

ಚಿಂತೆಯನ್ನು ಬಿಡು. ಹಾಗೆಯೇ ಈ ತಪಸ್ಸಿನಿಂದ ನಿವೃತ್ತನಾಗು. ನಾನು ಹೇಳಿದ ಹಾಗೆ ಮಾಡು. ಎಂದು ವಸಿಷ್ಠರು ಹೇಳಿದರು.

ಉದಯನ ಉದಯೋನ್ಮುಖನಾದ. ಅಸ್ತಮಯಕಾಲದಲ್ಲಿ ಮತ್ತೆ ಉದಯಿಸುವುದು ಸೂರ್ಯನಿಗೆ ಗೊತ್ತಿಲ್ಲ. ಈ ಉದಯನ ಅಸ್ತದ ಕಾಲದಲ್ಲಿ ಮತ್ತೆ ಉದಯಿಸುವ ಹಾಗೆ ಮಾಡಿದ್ದೀರಿ ಎಂದು ಹೇಳಿದ. ವಸಿಷ್ಠರಿಗೆ ಶ್ರದ್ಧಾ-ಭಕ್ತಿಗಳಿಂದ ಸಾಷ್ಟಾಂಗವೆರಗಿದ. ತನ್ನ ನಗರಕ್ಕೆ ಹಿಂತಿರುಗಿದ.

ಪ್ರಜರಿಗೆಲ್ಲ ಮತ್ತೆ ಸಂತೋಷವಾಯಿತು. ನಮ್ಮ ರಾಜ, ನಮ್ಮ ತಂದೆ, ನಮ್ಮ ತಾಯಿ ಮತ್ತೆ ತಿರುಗಿ ಬಂದಿದ್ದಾನೆ ಎಂದು ತಿಳಿದ ಪ್ರಜರ ಸಂತೋಷಕ್ಕೆ ಪಾರವೇ ಇರಲಿಲ್ಲ.

ತುಲಸಿಯ ವನ ಮಾಡುವುದಕ್ಕಾಗಿ ಅರಣ್ಯವನ್ನು ಕಡಿದು ಹಾಕಿದ. ಎಚ್ಚರವಿರಲಿ. ತುಲಸೀವನಕ್ಕಾಗಿ ಅರಣ್ಯವನ್ನು ಕಡಿದದ್ದಾಗಿ ರಾಜನಿಗೆ ಅರಣ್ಯಚ್ಛೇದದ ಪಾಪ ಬರಲಿಲ್ಲ. ಅರಣ್ಯದ ಭೂಮಿಯನ್ನು ಸಮಮಾಡಿದ. ಮಣ್ಣನ್ನು ಕೆದಕಿಸಿದ. ಅಲ್ಲಿ ತುಲಸಿಯ ಅತ್ಯುತ್ತಮಜಾತಿಯ ಬೀಜಗಳನ್ನು ಹಾಕಿದ.

ಕರ್ಪೂರ-ಏಲಕ್ಕಿ-ಲವಂಗಗಳಿಂದ ಸುವಾಸಿತವಾದ ಜಲದಿಂದ ತುಲಸಿಯನ್ನು ಬೆಳಿಸಿದ. ಆಕಳಿನ ಹಾಲನ್ನು ತುಲಸಿಯ ಮೂಲಕ್ಕೆ ಹಾಕಿದ. ಸುಂದರವಾಗಿ ಬೆಳೆಯುವಂತೆ ಮಾಡಿದ. ತುಲಸಿಯು ತೆನೆಯೊಡೆಯಿತು. ದಲ-ದಲವಾಗಿ ಸುಂದರವಾಗಿ ಕಂಗೊಳಿಸಹತ್ತಿತು. ಆ ತುಲಸೀವನದಲ್ಲಿ ಶ್ರೀಕೃಷ್ಣನ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ. ನಿತ್ಯವೂ ಸಾವಿರಾರು ಪುಷ್ಪಗಳಿಂದ ಕೃಷ್ಣನನ್ನು ಅರ್ಚಿಸಿದ. ಕಮಲ-ಕಲ್ಹಾರ ಮೊದಲಾದ ಪುಷ್ಪಗಳಿಂದ ದೇವರನ್ನು ಅರ್ಚಿಸಿದ. ಅಲ್ಲದೇ ನಿತ್ಯವೂ ಸಹಸ್ರದಳಗಳಿಂದ ದೇವರನ್ನು ಅರ್ಚಿಸಿದ. ಸಾವಿರ ಸಾಲಗ್ರಾಮಗಳನ್ನು ಭಕ್ತಿ-ಶ್ರದ್ಧಾಗಳಿಂದ ಅರ್ಚಿಸಿದ. ಸಾವಿರ ಸಾಲಗ್ರಾಮಗಳು, ಸಾವಿರದಲಗಳು, ಸಾವಿರ ನಾಮಗಳು ಇವುಗಳು ಹತ್ತಿರದಲ್ಲಿದ್ದರೆ ಸಾವಿರದು. ಸಾವು ಇರದು. ಸಾವು ದೂರ ಹೋಗುತ್ತದೆ. ಮತ್ತೆ ಯೌವನವು ಬರುತ್ತದೆ. ಇದಕ್ಕೆ ಉದಯನನೇ ಸಾಕ್ಷಿ.

ಸುಶೀಲಾ-ಉದಯನರು ವಸಿಷ್ಠರ ಆಜ್ಞೆಯನ್ನು ಚಾಚೂ ತಪ್ಪದೇ ಪಾಲಿಸಿದರು. ತೀರ್ಥದಿಂದ ತಮ್ಮ ದೇಹವನ್ನು ಪ್ರೋಕ್ಷಣೆ ಮಾಡಿಕೊಂಡರು. ತೀರ್ಥವನ್ನು ಸ್ವೀಕರಿಸಿದರು. ನಿತ್ಯವೂ ದೇವರಿಗೆ ಸಮರ್ಪಿಸಿದ ತುಲಸೀಪತ್ರಗಳನ್ನೇ ತಿನ್ನುತ್ತಿದ್ದರು. ದಂಪತಿಗಳಿಬ್ಬರೂ ಇದೇ ರೀತಿಯಿಂದ ತುಲಸಿಯನ್ನು ಸೇವಿಸಿದರು.

ನಿತ್ಯೋಪವಾಸಿಗಳಾಗಿದ್ದರು. ತುಲಸೀವನದಲ್ಲಿಯೇ ಕಾಲವನ್ನು ಕಳೆದರು. ತುಲಸಿಯ ಮೂಲದಲ್ಲಿ ಬೆಳೆದ ಹುಲ್ಲು-ಕಡ್ಡಿಗಳನ್ನು ತೆಗೆದು ಹಾಕಿದರು. ದೇವಾಲಯವನ್ನು ಬಳೆದರು. ದೇವರಿಗೆ ಸರ್ವಸೇವೆಯನ್ನೂ ಮಾಡುತ್ತ ಅದೇ ವನದಲ್ಲಿ ವಾಸಮಾಡಿದರು. ದೇವರ ವನದಲ್ಲಿ ವಾಸಮಾಡುವುದು ಹಿರಿದಾದ ಸವನ.

ಹೀಗೆ ಒಂದು ವರ್ಷದ ತನಕ ಅನನ್ಯವಾದ ಮನಸ್ಸಿನಿಂದ ದೇವರನ್ನು ಪೂಜಿಸಿದರು. ಶ್ರೀಸಖಿಯಾದ ತುಲಸಿಯನ್ನೂ ಅರ್ಚಿಸಿದರು. ವರ್ಷವಾಯಿತು. ತುಲಸಿಗೆ ಹರ್ಷವೂ ಆಯಿತು. ಆ ಆಶ್ರಮದ ತೀರ್ಥದಲ್ಲಿ ಸ್ನಾನ ಮಾಡಲು ತೆರಳಿದರು. ದಂಪತಿಗಳು ಆ ತೀರ್ಥದಲ್ಲಿ ವೃದ್ಧರಾಗಿ ಮುಳುಗಿದರು. ಯುವಕರಾಗಿ ಎದ್ದುಬಂದರು. ಪರಸ್ಪರ ನೋಡಿಕೊಂಡು ಆಶ್ಚರ್ಯಚಕಿತರಾದರು. ತುಲಸೀಮಂತ್ರದ ಪ್ರಭಾವವನ್ನು ಪ್ರತ್ಯಕ್ಷವಾಗಿ ನೋಡಿ ಮಂತ್ರಿಗಳು ಮಂತ್ರಮುಗ್ಧರಾದರು.

ವಸಿಷ್ಠರು ಹೇಳಿದಂತೆ ಮಗನನ್ನು ಹೆತ್ತಳು ಸುಶೀಲಾ. ಅವನಿಗೆ ಭರತ ಎಂದು ನಾಮಕರಣ ಮಾಡಿದರು. ಸುಶೀಲಾ-ಉದಯನರು ಮಗನ ಮುಖವನ್ನು ಕಂಡು ಸುಮುಖಿಗಳಾದರು. ಈ ದೇಶದ ಹೆಸರಿಗೆ ನ್ಯಾಯ ಮಾಡುವ ದೊರೆಯಾದನು. ವಿಪುಲವಾದ ಭೋಗಗಳನ್ನು ಅನುಭವಿಸಿದ ಉದಯನ. ಉತ್ತಮನಾದ ಮಗನನ್ನು ಪಡೆದ. ತುಲಸಿಯ ಪ್ರಸಾದವಿದೆಂದು ಭಾವಿಸಿದ. ತುಲಸಿಯನ್ನು ಪೂಜಿಸಿದ. ಶ್ರೀಹರಿಯನ್ನು ಒಲಿಸಿದ. ರಾಜ್ಯವನ್ನು ಅಕಂಟಕವಾಗಿ ಆಳಿದ. ಸುಶೀಲಾಸಹಿತನಾಗಿ ವಿಷ್ಣುಲೋಕವನ್ನು ಪಡೆದ.

ಇದು ಪದ್ಮಪುರಾಣ ಹೇಳಿದ ಅತಿಮಧುರವಾದ ಕಥೆ.

★★★★★



## ೪. ತುಲಸಿಯನ್ನು ತಲೆಯಲ್ಲಿ ಹೊತ್ತವನೂ ಪುಣ್ಯವಂತ

ತುಲಸಿಯ ಮಹಿಮೆಯನ್ನು ಇಮ್ಮಡಿ ಮುಮ್ಮಡಿಯಾಗಿಸುವ ಮತ್ತೊಂದು ಇತಿಹಾಸ ಈ ರೀತಿಯಾಗಿದೆ. ಶ್ರೀಸೂತರು ನಿರೂಪಿಸಿದ ಇತಿಹಾಸವಿದು. ಎಲ್ಲ ಪಾಪಗಳನ್ನು ಪರಿಹರಿಸುವ ಕಥೆ. ಸರ್ವವಿಧವಾದ ಸಂಪತ್ತನ್ನು ನೀಡುವಂಥ ಕಥೆ ಇದು.

ಕೃಷ್ಣಕ ಎಂಬ ಹೆಸರಿನ ಬ್ರಾಹಣನಿದ್ದ. ಹುಟ್ಟು ಹೆಸರು ಕೃಷ್ಣ ಎಂತಲೇ. ಆದರೆ ಕೃಷ್ಣನ ಹಾಗೆ ಉಪಕಾರಿಯಾಗಿರಲಿಲ್ಲ. ಅಪಕಾರಿಯಾಗಿದ್ದ. ಕೆಟ್ಟ ಕೆಲಸಗಳನ್ನೇ ಮಾಡುತ್ತಿದ್ದ. ಆದ್ದರಿಂದ ಕೃಷ್ಣಕ ಅರ್ಥಾತ್ ಕೆಟ್ಟ ಕೃಷ್ಣ ಎಂಬ ಅರ್ಥವನ್ನು ಕೊಡುವಂತೆ ಊರಿನವರೆಲ್ಲ ಕೃಷ್ಣಕ ಎಂದೇ ಕರೆಯುತ್ತಿದ್ದರು.

ಮೂರ್ಖನಾಗಿದ್ದ. ಯಾವುದೇ ಸತ್ಕರ್ಮಗಳಲ್ಲಿ ಅವನಿಗೆ ಆದರವಿಲ್ಲ. ಸತ್ಕರ್ಮಗಳಲ್ಲಿ ಆದರವಿಲ್ಲದವನು ಮೂರ್ಖನೇ ಸರಿ. ಸಂಧ್ಯಾ-ಪೂಜಾದಿಗಳನ್ನು ಮಾಡಿಯೇ ಇರಲಿಲ್ಲ. ಮಾಡಬೇಕೆಂಬ ಪರಿಕಲ್ಪನೆಯೂ ಇರಲಿಲ್ಲ. ಹಣ ಗಳಿಸಲು ಏನಾದರೂ ಮಾಡುತ್ತಿದ್ದ. ಒಂದು ದಿನ ಹುಲ್ಲನ್ನು ಸಂಪಾದಿಸಲು ಕಾಡಿಗೆ ನಡೆದ. ಸಾಕಷ್ಟು ಹುಲ್ಲನ್ನು ಸಂಗ್ರಹಿಸಿದ. ಜನರಿಗೆ ಬೇಕಾಗುವ ಸಸ್ಯಗಳನ್ನು ಹುಡುಕುತ್ತಾ ಹೊರಟ. ಅವನಿಗೆ ತುಲಸೀವನವು ಕಾಣಿಸಿತು. ಪರಮಪುಣ್ಯಕರ ತುಲಸೀವನ. ನೀಲಮಣಿಯಂತೆ ಹಸಿರುವರ್ಣದಿಂದ ಪರಿಶೋಭಿಸುತ್ತಿದೆ ಆ ವನ. ಕೋಮಲವಾದ ತೆನೆ-ತೆನೆಯ ದಳಗಳಿಂದ ಅಲಂಕೃತವಾಗಿದೆ.

ಅವನು ವಿಚಾರ ಮಾಡಿದ. ಈ ಸೊಪ್ಪನ್ನು ಆಕಳುಗಳು ತಿನ್ನುತ್ತವೆಯಾದರೆ ನಾನು ಧನ್ಯ. ಇಲ್ಲಿ ಇಷ್ಟು ಸೊಪ್ಪಿದೆ. ಯಾರಾದರೂ ತೆಗೆದುಕೊಳ್ಳುತ್ತಾರೆ ಎಂದಾದರೆ ದಿನವೂ ಇದನ್ನು ಒಯ್ದು ಮಾರಿ ಸಾಕಷ್ಟು ಹಣವನ್ನು ನಾನು ಸಂಪಾದಿಸಬಹುದು.

ನನ್ನ ಪಕ್ಕದ ಮನೆಯ ಬ್ರಾಹ್ಮಣನಿಗೆ ಇದನ್ನು ಸ್ವಲ್ಪ ಒಯ್ದು ಕೊಟ್ಟು ನೋಡುವೆ. ಅವನಾದರೂ ಈ ಸೊಪ್ಪನ್ನು ಯಾಕೆ ಬಯಸಿಯಾನು? ಏನಾದರಾಗಲಿ. ಸ್ವಲ್ಪ ಒಯ್ದರೇ ನನ್ನ ಗಂಟೇನಾದರೂ ಹೋಗುವುದೇ? ಎಂದು ವಿಚಾರಿಸಿದ. ಸ್ವಲ್ಪ ತುಲಸಿಯನ್ನು ತೆನೆ ತೆನೆಯಾಗಿ ಬಿಡಿಸಿಕೊಂಡ. ಹುಲ್ಲಿನ ಗಂಟಿನ ಜೊತೆ ಸೇರಿಸಿದ. ತಲೆಯ ಮೇಲೆ ಹೊತ್ತುಕೊಂಡು ನಡೆದ.

ಅಷ್ಟರಲ್ಲಿ ಅವನ ಆಯುಷ್ಯ ಪೂರ್ಣವಾಗಿತ್ತು. ಸರ್ಪದಿಂದ ಅವನ ಮರಣವಾಗುವುದು ಅವನ ಪ್ರಾರಬ್ಧವಾಗಿತ್ತು. ಯಮದೂತರು ಬಂದರು. ಸರ್ಪವನ್ನು ಪ್ರೇರಿಸಿದರು. ನಿನ್ನಿಂದಲೇ ಇವನು ವಧ್ಯನಾಗಿದ್ದಾನೆ. ಆದ್ದರಿಂದ ಇವನನ್ನು ಸಾಯಿಸು ಎಂದು ಯಮಭಟರು ಸರ್ಪವನ್ನು ಪ್ರೇರಿಸಿದರು. ಸರ್ವಶಕ್ತರಲ್ಲವೇ ಯಮದೂತರು. ಆದರೆ ಗಮನದಲ್ಲಿಡು. ತುಲಸಿಯನ್ನು ಸ್ವೀಕರಿಸುವ ಮೊದಲೇ ನೀನು ಇವನನ್ನು ಸಾಯಿಸಬೇಕು. ತುಲಸಿಯನ್ನು ಸ್ವೀಕರಿಸಿದ ಮೇಲೆ ಇವನನ್ನು ಸಂಹರಿಸಲು ನಿನಗೆ, ನಮಗೂ ಸಾಧ್ಯವಾಗುವುದಿಲ್ಲ. ಆದ್ದರಿಂದ ಬೇಗ ಹೊರಡಲು ಪ್ರೇರಿಸಿದರು. ಆದರೆ ಸರ್ಪ ಸ್ವಲ್ಪ ತಡಮಾಡಿತು. ಇದೂ ಅವನ ಪ್ರಾರಬ್ಧವೇ ಆಗಿತ್ತು. ಇದಾವುದನ್ನೂ ಕೃಷ್ಣಕ ಗಮನಿಸಲಿಲ್ಲ. ಲಗುಬಗೆಯಿಂದ ತುಲಸಿಯನ್ನು ಸ್ವೀಕರಿಸಿದ. ತಲೆಮೇಲೆ ಹೊತ್ತು ಮನೆಗೆ ನಡೆದ. ಅವನ ಹಿಂದೆಯೇ ಅವನ ರಕ್ಷಣೆಗೆ ಸುದರ್ಶನವೂ ಹಿಂಬಾಲಿಸಿತು. ಎಲ್ಲ ದಿಕ್ಕುಗಳಿಂದಲೂ ಆ ಸುದರ್ಶನವು ಕೃಷ್ಣಕನನ್ನು ಸಂರಕ್ಷಿಸುತ್ತಾ ನಡೆಯಿತು.

ಸರ್ಪವು ಮುಂದೆ ಮುಂದೆ ಸಾಗಿ ಹುಲ್ಲಿನ ಮೂಟೆಯಲ್ಲಿ ಅಡಗಿ ಕುಳಿತುಕೊಂಡಿತು. ತುಲಸಿಯನ್ನು ಕೆಳಗೆ ಹಾಕಿದ ಕ್ಷಣದಲ್ಲಿಯೇ ಅವನನ್ನು ಕಚ್ಚುವುದಕ್ಕಾಗಿ ಸಂಚು ಹಾಕಿತು. ಯಮಭಟರೂ ಕೃಷ್ಣಕನನ್ನೇ ಬೆನ್ನುಹತ್ತಿದರು. ಹಾವು ಹುಲ್ಲಿನಲ್ಲಿ ಕೂತದ್ದಾಗಲಿ, ಯಮದೂತರು ಹಿಂಬಾಲಿಸುವುದಾಗಲಿ ಕೃಷ್ಣಕನಿಗೆ ತಿಳಿಯಲಿಲ್ಲ. ಮರಣ ಬೆನ್ನುಹತ್ತುವುದು ಯಾರಿಗಾದರೂ ಗೊತ್ತಾಗುವುದೇ? ಗೊತ್ತಾದರೆ ಅವನ ಪರಿಸ್ಥಿತಿ ಹೇಗಿರುತ್ತದೆ. ಹೀಗಾಗಿ ಸಂತೋಷದಿಂದಲೇ ಹುಲ್ಲನ್ನು ಹೊತ್ತುಕೊಂಡು ಮನೆಗೆ ನಡೆದ.

ಊರು ಹತ್ತಿರ ಬಂತು. ಮನೆಯ ಹತ್ತಿರ ಬಂದ. ಮನೆಯ ಹೊರಗಡಿಗೇ ಕೃಷ್ಣಭಕ್ತನಾದ ಬ್ರಾಹ್ಮಣ ನಿಂತಿದ್ದ. ಅವನಿಗೆ ದಿವ್ಯದೃಷ್ಟಿ ಇತ್ತು. ಅವನಿಗಾಗಿಯೇ ತುಲಸಿಯನ್ನು ತಂದಿದ್ದ.

ಕೃಷ್ಣಭಕ್ತ ಯಮಭಟರನ್ನು ನೋಡಿದ. ಏನು ನಡೆದಿದೆ ಎಂದು ತಿಳಿಯದಾಯಿತು. ಕುತೂಹಲದಿಂದ ಯಮಭಟರನ್ನು ಕೇಳಿದ. ಯಮಭಟರು ಬ್ರಾಹ್ಮಣನಿಗೆ ನಮಸ್ಕರಿಸಿ ನುಡಿದರು. ಏನಿಲ್ಲ ಸ್ವಾಮೀ ! ಈ ಕೃಷ್ಣಕನ ಆಯುಷ್ಯ ಮುಕ್ತಾಯವಾಗಿದೆ. ಆದರೆ ಅವನು ತಲೆಯಲ್ಲಿ ತುಲಸಿಯನ್ನು ಹೊತ್ತಿದ್ದಾನೆ. ನಿಮಗೆ ಬೇಕಾಗಬಹುದೆಂದು ತುಲಸಿಯನ್ನು ಇವತ್ತು ಹೊತ್ತು ತಂದಿದ್ದಾನೆ. ಹೀಗಾಗಿ ಇವನನ್ನು ಸಂಹಾರ ಮಾಡಲು ಆಗುತ್ತಿಲ್ಲ. ವಿಷ್ಣುಚಕ್ರ ಅವನನ್ನು ರಕ್ಷಿಸುತ್ತಲೇ ಇದೆ.

ಭಾರವನ್ನು ಕೆಳಗಿಳಿಸುವಾಗ ತುಲಸಿಯನ್ನೂ ಕೆಳಗಿಡುತ್ತಾನೆ. ತತ್‌ಕ್ಷಣದಲ್ಲಿಯೇ ಹುಲ್ಲಿನ ಮೂಟೆಯಲ್ಲಿಯ ಹಾವು ಅವನನ್ನು ಕಚ್ಚುತ್ತದೆ. ಮೃತನಾದ ಅವನನ್ನು ನಾವು ಯಮಲೋಕಕ್ಕೆ ಎಳೆದೊಯ್ಯುತ್ತೇವೆ ಎಂದು ಹೇಳಿದರು.

ಬ್ರಾಹ್ಮಣನಿಗೆ ಕೃಷ್ಣಕನ ಮೇಲೆ ಕನಿಕರ ಉಂಟಾಯಿತು. ಅವನನ್ನು ಹೇಗೆ ಸಂರಕ್ಷಿಸಬೇಕೆಂದು ಯೋಚಿಸ ಹತ್ತಿದ. ಅವನ ಮೇಲಿನ ಪ್ರೀತಿಯಿಂದ ಯಮಭಟರ ಜೊತೆ ಮಾತನಾಡಿದ. ಯಮಭಟರೇ ! ಇವನನ್ನು ಬದುಕಿಸಿಕೊಳ್ಳಲು ಉಪಾಯವಿದ್ದರೆ ತಿಳಿಸಿ. ನಾನು ಬದುಕಿಸಿಕೊಳ್ಳುತ್ತೇನೆ. ತುಲಸಿಯನ್ನು ಪರಿತ್ಯಜಿಸಿದ ನಂತರ ಚಕ್ರ ಇವನನ್ನು ಸಂರಕ್ಷಿಸುವುದಿಲ್ಲ. ಇದು ನಿಶ್ಚಿತ.

ನೀವು ಕ್ಷುದ್ರರಲ್ಲ. ನಿರ್ದಯಿಗಳೂ ಅಲ್ಲ. ಇದು ನೀವು ಮಾಡುವ ದೇವರ ಸೇವೆ. ಆ ಪರಿಕಲ್ಪನೆ ನನಗಿದೆ. ಅದಕ್ಕಾಗಿ ನಿಮಗೆ ನಮಸ್ಕರಿಸಿ ಕೇಳುತ್ತೇನೆ. ನನಗಾಗಿ ಇವನು ತುಲಸಿಯನ್ನು ತಂದಿದ್ದಾನೆ. ಅವನ ಈ ಸದ್ಭಾವನೆಗೆ ನಾನಂತೂ ಸದಯಹೃದಯನಾಗಿದ್ದೇನೆ. ಇವನನ್ನು ಹೇಗೆ ಉಳಿಸಿಕೊಳ್ಳುವುದು. ಉಪಾಯವನ್ನು ನನಗೆ ತಿಳಿಸಬೇಕು. ಹೇಗಾದರೂ ಮಾಡಿ ಇವನನ್ನು ನೀವು ಸಂರಕ್ಷಿಸಬೇಕು ಎಂದು ಅಂಗಲಾಚಿ ಪ್ರಾರ್ಥಿಸಿದ.

ಯಮದೂತರು ಹೇಳಿದರು. ಯಾಕೆ ಇವನಮೇಲೆ ಇಷ್ಟೊಂದು ದಯೆ ಮಾಡುತ್ತಿದ್ದೀರಿ? ನಾವು ಕಾಲನ ಕಿಂಕರರು. ಯಮನ ಮಾತನ್ನು ಕೇಳುವುದೊಂದೇ ನಮಗೆ ಗೊತ್ತು. ಎರಡು ಯಾಮಕ್ಕಿಂತಲೂ ಮೊದಲಿಗೇ ಇವನ ಆಯುಷ್ಯ ಮುಕ್ತಾಯವಾಗಿದೆ. ಇವನ ಮರಣ ಹಾವಿನಿಂದಲೇ ಆಗಬೇಕು. ಆದರೆ ತುಲಸಿಯನ್ನು ಹೊತ್ತುಕೊಂಡಿದ್ದರಿಂದ ಏನೂ ಮಾಡಲು ಆಗುತ್ತಿಲ್ಲ. ಆ ತುಲಸಿಯೇ ಇವನನ್ನು ರಕ್ಷಿಸುತ್ತಿದೆ.

ತ್ ಎಂದರೆ ಮರಣ ಎಂದು ಅರ್ಥ. ಉ ಎಂದರೆ ಉಳ್ಳವರು ಎಂದು ಅರ್ಥ. ಲಸೀ ಎಂದರೆ ಶೋಭಿಸುತ್ತಾರೆ ಎಂದು ಅರ್ಥ. ಮೃತರಾದವರನ್ನು ಬದುಕಿಸುವ ಸಾಮರ್ಥ್ಯ ಇದ್ದವಳು. ಆದ್ದರಿಂದ ಅವಳು ತುಲಸೀ. ಪ್ರಸ್ತುತ ತುಲಸಿಯ ಅನುಗ್ರಹದಿಂದಲೇ ಇವನು ಬದುಕಿ ಉಳಿದಿದ್ದಾನೆ. ಇದು ನಿಶ್ಚಿತ.

ತುಲಸೀಚಯನ ಮಾಡಿದವರನ್ನು, ತುಲಸಿಯಿಂದ ತನ್ನನ್ನು ಅರ್ಚಿಸಿದವರನ್ನು ಸಂರಕ್ಷಿಸಬೇಕೆಂದು ಗಟ್ಟಿಯಾದ ಸಂಕಲ್ಪ ಭಗವಂತನದ್ದು. ಹೀಗಾಗಿ ಯಾವಾಗಲೂ ತುಲಸೀವನದಲ್ಲಿ ಭಗವಂತ ಸನ್ನಿಹಿತನಾಗಿರುತ್ತಾನೆ.

ಅಲ್ಲಿಯೇ ವನದಲ್ಲಿ ತುಲಸಿಯ ಒಂದು ಪತ್ರವನ್ನಾದರೂ ಇವನು ದೇವರಿಗೆ ಸಮರ್ಪಿಸಿದ್ದರೆ, ಅವನನ್ನು ಎಳೆದೊಯ್ಯಲು ಬಂದಿರುವ ನಮ್ಮನ್ನು ಈ ಸುದರ್ಶನ ಭಸ್ಮ ಮಾಡಿ ಬಿಡುತ್ತಿತ್ತು. ಆದರೆ ಅವನಿಗೆ ಈ ತುಲಸಿಯ ಪರಿಚಯವೇ ಇಲ್ಲ. ಇದು ಅರ್ಚನ ಸಾಧನ ಎಂದು ಗೊತ್ತಿಲ್ಲ. ಹೀಗಾಗಿ ನಾವು ಬೆನ್ನು ಹತ್ತಿ ಬಂದಿದ್ದೇವೆ. ಸದಾಚಾರಿಯಾಗಿರಲಿ, ದುರಾಚಾರಿಯಾಗಿರಲಿ, ತುಲಸಿಯಿಂದ ಯಾರು ದೇವರನ್ನು ಪೂಜಿಸುವರೋ ಅವರು ದೇಹಾಂತದಲ್ಲಿ ದಿವ್ಯವಿಮಾನದಿಂದ ಸ್ವರ್ಗಾದಿಲೋಕ-ಗಳನ್ನು ಪಡೆಯುತ್ತಾನೆ. ವಿಷ್ಣುಭಕ್ತರು ಬಂದು ಅವನನ್ನು ಉತ್ತಮಲೋಕಗಳಿಗೆ ಕರೆದೊಯ್ಯುತ್ತಾರೆ. ತುಲಸಿಯನ್ನು ಕೈಯಲ್ಲಿ ಹಿಡಿದು ಹೊರಟವನನ್ನು ಸಂರಕ್ಷಿಸುತ್ತಾ ದೇವರು ಬೆನ್ನು ಹತ್ತುತ್ತಾನೆ.

ಇವತ್ತು ಇವನನ್ನು ಸಂರಕ್ಷಿಸಲು ಒಂದು ಉಪಾಯವಿದೆ. ಒಂದು ಬಾರಿ ಮಾತ್ರ ಮಾಡಿದ ತುಲಸೀಪೂಜೆಯ ಪುಣ್ಯವನ್ನು ಇವನಿಗೆ ಧಾರೆ ಎರೆದು ಕೊಡಿ. ಇವನು ಉಳಿಯುತ್ತಾನೆ. ಇಲ್ಲವಾದರೆ ಈಗಲೇ ಇವನು ಮೃತನಾಗುತ್ತಾನೆ. ನಿಶ್ಚಿತವಾಗಿಯೂ ಇವನು ಪೂರ್ಣಾಯುವಾಗುತ್ತಾನೆ.

ಸಂತೋಷವಾಯಿತು ಬ್ರಾಹ್ಮಣನಿಗೆ. ಯಮಭಟರು ಹೇಳಿದ ಹಾಗೆ ತುಲಸೀಪೂಜೆಯ ಪುಣ್ಯವನ್ನು ಧಾರೆ ಎರೆದು ಕೊಟ್ಟ. ಕೃಷ್ಣಕನನ್ನು ಸಂರಕ್ಷಿಸಿದ. ಈಗ ಎಲ್ಲರಿಗೂ ಯಮಭಟರು ಕಾಣಿಸಿದರು. ಕೃಷ್ಣಕನಿಗೂ ಕಾಣಿಸಿದರು. ಯಮಭಟರನ್ನು ನೋಡಿ ಗಾಬರಿಯಾದ. ಮೂರ್ಖನಾದ ದ್ವಿಜನಿಗೆ ನಡೆದ ಘಟನೆಯನ್ನೆಲ್ಲ ವಿವರವಾಗಿ ಹೇಳಿದರು. ಧರ್ಮವನ್ನು ಮಾಡಲು ಬೋಧಿಸಿದರು. ಇನ್ನಾದರೂ ತುಲಸಿಯಿಂದ ಶ್ರೀಹರಿಯನ್ನು ಪೂಜಿಸು ಎಂದು ತಿಳಿಸಿದರು. ಎಲ್ಲರಿಗೂ ಹರಿಪೂಜೆಯ ಮಹಿಮೆಯನ್ನು ಬೋಧಿಸಿದರು. ಎಲ್ಲರೂ ನೋಡುತ್ತಿದ್ದಂತೆಯೇ ಅದೃಶ್ಯರಾದರು.

ಕೃಷ್ಣಕ ಈಗ ಪಶ್ಚಾತ್ತಾಪದಿಂದ ದಗ್ಧನಾಗಿದ್ದ. ಧರ್ಮಸಂಪಾದನೆಗೆಂದು ವೈಷ್ಣವ ಕ್ಷೇತ್ರಕ್ಕೆ ಹೋದ. ಅಲ್ಲಿ ಹೊಸದಾದ ಜೀವನವನ್ನು ಪ್ರಾರಂಭಿಸಿದ. ನಿತ್ಯವೂ ತುಲಸಿಯ ಪೂಜೆಯಲ್ಲಿ ತೊಡಗಿದ. ದೇವರ ಸೇವೆಯಲ್ಲಿ ತಲ್ಲೀನನಾದ. ತುಲಸಿಯಿಂದ ದೇವರನ್ನು ಅರ್ಚಿಸಿದ. ಮೆಚ್ಚಿಸಿದ. ಆ ಇಬ್ಬರೂ ವೈಷ್ಣವರು ಅಲ್ಪಕಾಲದಲ್ಲಿಯೇ ಸಿದ್ಧಿಯನ್ನು ಪಡೆದರು. ಸದ್ಗತಿಯನ್ನು ಪಡೆದರು. ಪದ್ಮಪುರಾಣದಲ್ಲಿಯ ಮತ್ತೊಂದು ಕಥೆ ಇದು.

## ೫. ಸಂತಾನದಾಯಿನೀ ಶ್ರೀತುಲಸೀ

ಪ್ರಹ್ಲಾದರಾಜರು ಹೇಳಿದ ಮತ್ತೊಂದು ಇತಿಹಾಸ ಈ ರೀತಿಯಾಗಿದೆ.

ತುಲಸೀಮಹಿಮೆ ಅತಿ ವಿಶಿಷ್ಟವಾಗಿದೆ. ತುಲಸಿಯ ಸೇವೆಯನ್ನು ನಿತ್ಯವೂ ಮಾಡುತ್ತಿರಬೇಕು. ತುಲಸಿಯ ಮುಂದೆ ರಂಗವಲ್ಲಿಗಳನ್ನು ಹಾಕಬೇಕು. ಪ್ರತಿನಿತ್ಯ ದೀಪಗಳನ್ನಿಡಬೇಕು. ನಿತ್ಯ ನೂರು ಪ್ರದಕ್ಷಿಣಗಳನ್ನು ಹಾಕಬೇಕು. ನೂರು ನಮಸ್ಕಾರಗಳನ್ನು ಹಾಕಬೇಕು. ಧೂಪ-ದೀಪ-ನೈವೇದ್ಯಾದಿಗಳಿಂದ, ಸ್ತೋತ್ರಗಳಿಂದ ವಿಶೇಷವಾಗಿ ತುಲಸಿಯನ್ನು ಪೂಜಿಸಬೇಕು. ಮಕ್ಕಳಾಗಬೇಕೆಂದು ಬಯಸುವ ದಂಪತಿಗಳು ಈ ರೀತಿಯಾಗಿ ತುಲಸಿಯ ಸೇವೆಯನ್ನು ಮಾಡಬೇಕು. ಹಾಲಿನಿಂದ, ಕಬ್ಬಿನ ಹಾಲಿನಿಂದ ತುಲಸಿಯನ್ನು ಬೆಳೆಸಬೇಕು. ನಿತ್ಯವೂ ಪಾಯಸವನ್ನು ನಿವೇದಿಸಬೇಕು. ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ಬ್ರಹ್ಮಚಾರಿಗಳ ಭೋಜನವನ್ನು ಮಾಡಿಸಬೇಕು. ಹೀಗೆ ಒಂದು ವರ್ಷದ ತನಕ ಪ್ರತಿನಿತ್ಯವೂ ಈ ತುಲಸೀವ್ರತವನ್ನು ಮಾಡಬೇಕು. ತುಲಸಿಯನ್ನು ಸೇವಿಸಬೇಕು. ಈ ಪೂಜೆಯಿಂದ ಸಂತುಷ್ಟಳಾದ ತುಲಸಿಯು ಮಕ್ಕಳನ್ನು ನೀಡುತ್ತಾಳೆ. ಅವನು ಶ್ರೀಮಂತನಾಗುತ್ತಾನೆ. ಧೀಮಂತ ಆಗುತ್ತಾನೆ.

ಅಥವಾ ವರ್ಷದ ವರೆಗೆ ಪ್ರತಿಶುಕ್ರವಾರ ಮಾತ್ರ ತುಲಸಿಯನ್ನು ಪೂಜಿಸಿ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ಪಾಯಸವನ್ನು ತುಲಸಿಗೆ ನಿವೇದಿಸಬೇಕು. ಪಾಯಸದಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು. ಈ ವ್ರತದಿಂದಲೂ ತುಲಸಿಯು ಸಂತುಷ್ಟಳಾಗುತ್ತಾಳೆ. ಸತ್ಸಂತಾನವನ್ನು ಕರುಣಿಸುತ್ತಾಳೆ. ಈ ವಿಷಯದಲ್ಲಿ ಸಂದೇಹ ಇನಿತಿಲ್ಲ.

ಈ ವಿಷಯದಲ್ಲಿ ಒಂದು ಇತಿಹಾಸವನ್ನು ನಿಮಗೆ ಹೇಳುತ್ತೇನೆ. ಕೇಳಿರಿ. ಪಾಪಸಮೂಹಗಳನ್ನು ಭಸ್ಮಮಾಡುವ ಇತಿಹಾಸವಿದು.

ಅದು ತ್ರೇತಾಯುಗ. ದಶರಥ ಎಂಬ ರಾಜನಿದ್ದ. ಶ್ರೀಮಂತ. ಅಯೋಧ್ಯೆಗೆ ಅಧಿಪತಿ. ಸಮರ್ಥ. ರಾಜನ ಲಕ್ಷಣಗಳಿಂದ ಸುಸಂಪನ್ನ. ಯುದ್ಧದಲ್ಲಿ ಬೆನ್ನು ತೋರಿಸುವವನಲ್ಲ. ಸೂರ್ಯವಂಶದಲ್ಲಿ ಜನಿಸಿದವ. ಸೂರ್ಯನಂಥ ಪ್ರತಾಪ. ಆದರೂ ಚಂದ್ರನನ್ನು ನಾಚಿಸುವಷ್ಟು ಶಾಂತ. ಅವನ ಜ್ಞಾನ ಪರಿಶುದ್ಧ. ಆಲಸ್ಯವನ್ನು ತೊರೆದವ. ಅರವತ್ತು ಸಾವಿರ ವರ್ಷಗಳ ತನಕ ರಾಜ್ಯವನ್ನು ಅವ್ಯಾಹತವಾಗಿ ಆಳಿದ.

ಅವನು ದ್ವೈತವಾದಿ. ಆದರೆ ದೇವರ ಭಕ್ತಿಯ ವಿಷಯದಲ್ಲಿ ಮಾತ್ರ ಅದ್ವೇತಿ. ಅರ್ಥಾತ್ ದೇವರ ಹೊರತು ಮತ್ತಾರನ್ನೂ ಸರ್ವೋತ್ತಮನೆಂದು ಭಾವಿಸದ ಪುಣ್ಯವೈಷ್ಣವ. ವೀರವೈಷ್ಣವ. ದೇವತೆಗಳನ್ನು ದೇವರ ಪರಿವಾರವೆಂದು ತಿಳಿದು ಪೂಜಿಸುವವ. ಕ ಬ್ರಹ್ಮ ಈಶ ರುದ್ರ ವ ಇವರನ್ನು ನಿಯಮಿಸುವವ ಕೇಶವ. ಆದ್ದರಿಂದ ದೇವರೇ ಸರ್ವೋತ್ತಮನೆಂದು ತಿಳಿದವ. ಕೇಶವಾರಾಧನೆಯ ಹೊರತು ಮತ್ತೇನೂ ಅವನಿಗೆ ಗೊತ್ತಿಲ್ಲ. ಯಾವ ಶತ್ರುಗಳೂ ಅವನಿಗೆ ಇರಲಿಲ್ಲ. ಸರ್ವತ್ರ ದೇವರನ್ನು ಚಿಂತಿಸುವವರಿಗೆ ಶತ್ರುಗಳು ಯಾರು?

ಎಲ್ಲ ಇದ್ದರೂ ನಿಶ್ಚಿಂತನಾಗಿರಲಿಲ್ಲ. ಮಕ್ಕಳ ಚಿಂತೆಯಲ್ಲಿ ಅವನು ಮಗ್ನನಾಗಿದ್ದ. ಆದೊಂದು ದಿನ. ಪಟ್ಟದ ಮಹಿಷಿಯನ್ನು ತನ್ನ ಅಂತಃಪುರಕ್ಕೆ ಕರೆದ. ದುಃಖತಪ್ತನಾಗಿ ಅವಳ ಜೊತೆ ಆಲೋಚಿಸಿದ. ಹೇ ಶೋಭನೆ ! ಬಲಾತ್ಕಾರಪೂರ್ವಕವಾಗಿ ಎಲ್ಲ ಶತ್ರುಗಳನ್ನು ನಾನು ನಿಗ್ರಹಿಸಿದ್ದೇನೆ. ಎಲ್ಲ ತರಹದ ಸಂಪತ್ತುಗಳನ್ನು ಸಂಪಾದಿಸಿದ್ದೇನೆ. ಎಲ್ಲ ಸಾಮಂತರೂ ನನ್ನ ಸೇವಕರಾಗಿದ್ದಾರೆ. ಎಲ್ಲ ವಿಷಯಗಳನ್ನು ಅನುಭವಿಸಿದ್ದೇನೆ. ನಿಷ್ಕಂಟಕವಾಗಿ ರಾಜ್ಯವನ್ನು ಆಳಿದ್ದೇನೆ. ಎಲ್ಲ ಪ್ರಜರನ್ನೂ ಸುಖವಾಗಿ ನೋಡಿಕೊಂಡಿದ್ದೇನೆ. ನಾನು ಪಡೆಯದಿರುವ ವಸ್ತು ಪ್ರಪಂಚದಲ್ಲಿಯೇ ಇಲ್ಲ. ಎಲ್ಲವನ್ನೂ ಪಡೆದಿದ್ದೇನೆ. ಆದರೆ ನನಗೆ ಮಕ್ಕಳದ್ದೇ ಚಿಂತೆ. ದೇವರು ಏನಿಲ್ಲ ಒಂದು ಚಿಂತೆಯನ್ನಿಟ್ಟಿರುತ್ತಾನೆ. ಇದುವೇ ಸಂಸಾರ.

ಮಕ್ಕಳನ್ನು ನೋಡಲು ಯಾರಿಗಾಗುವುದಿಲ್ಲವೋ ಅವರು ಕಣ್ಣಿದ್ದೂ ಕುರುಡರು. ಮಗನ ವಚನಾಮೃತವನ್ನು ಯಾರು ಪಾನ ಮಾಡುವುದಿಲ್ಲವೋ ಅವನು ಕಿವಿಗಳಿದ್ದೂ ಕಿವುಡನು. ಸಾಕಷ್ಟು ಭೋಗಸಾಧನಗಳಿದ್ದರೂ ಯಾರಿಗೆ ಪುತ್ರರಿಲ್ಲವೋ ಅವನು ಅಸಾಧನನೇ ಸರಿ.

ಮಕ್ಕಳಿಲ್ಲದಿದ್ದುದರಿಂದ ನನ್ನ ಸಂಪತ್ತೆಲ್ಲವೂ ಶೋಭನವಾಗಲಿಲ್ಲ. ಮಕ್ಕಳಿಲ್ಲದಿದ್ದುದರಿಂದ ಈ ಜಗವೆಲ್ಲ ಅಂಧಕಾರಬಂಧುರವಾಗಿ ನನಗೆ ಗೋಚರಿಸುತ್ತಿದೆ. ನಾನೇನು ಮಾಡಲಿ ? ಎಲ್ಲಿಗೆ ಹೋಗಲಿ ? ನನಗೆ ಸಂತೋಷ ಆಗುವುದು ಹೇಗೆ ? ಈ ರೀತಿಯಾಗಿ ಚಿಂತಿಸುತ್ತಿರುವ ರಾಜನನ್ನು ಕುರಿತು ಪತಿವ್ರತೆಯಾದ ಕೌಸಲ್ಯೆಯು ಮಾತನಾಡಿದಳು.

ಸ್ವಾಮಿನ್ ! ಸಾಕಿನ್ನು ಚಿಂತೆ. ಈ ಚಿಂತೆ ಶರೀರಶೋಷಕವಾಗಿದೆ. ಹೊರತು ಶರೀರಪೋಷಕವಲ್ಲ. ಈ ಶರೀರ ಸಾಧನ ಶರೀರ. ಶುಷ್ಕವಾದ ಶರೀರದಿಂದ

ಪುಷ್ಟವಾದ ಧರ್ಮವನ್ನು ಮಾಡಲಾಗುವುದಿಲ್ಲ. ಆದ್ದರಿಂದ ಧರ್ಮದ ಪುಷ್ಟಿಗೆ ದೇಹದ ಪುಷ್ಟಿಯೂ ಆವಶ್ಯಕವಾಗಿದೆ. ಹೇ ರಾಜನೇ ! ದೇಹಗತವಾದ ಚಿಂತೆಯು ದೇಹವನ್ನೇ ಸುಟ್ಟು ಹಾಕುತ್ತದೆ. ಚಿಂತಾವಿಷ್ಟನಾದವನಿಗೆ ಸುಖ ಎಲ್ಲಿಯೂ ಕಾಣದು. ಇರುವ ಸುಖವೂ ದುಃಖವಾಗಿಯೇ ತೋರುತ್ತದೆ. ಚಿಂತಾಕುಲನಾದ ರಾಜನನ್ನು ಶತ್ರುಗಳು ಸುಖವಾಗಿ ಸೋಲಿಸಬಹುದು. ಆದ್ದರಿಂದ ಚಿಂತೆಯನ್ನು ಪರಿತ್ಯಜಿಸಿ. ಯಥಾಸುಖವಾಗಿ ವಿಹರಿಸಿ. ನಿಮಗೆ ಹೆಚ್ಚಿಗೆ ಹೇಳಲು ನಾನಾರು ?

ನಮ್ಮ ವಾಂಛಿತವು ಸಿದ್ಧವಾಗುವುದಕ್ಕಾಗಿ ದೇವರ ಆರಾಧನೆಯನ್ನು ವಿಶಿಷ್ಟವಾದ ರೀತಿಯಲ್ಲಿ ಮಾಡೋಣ. ದೇವರ ಆರಾಧನೆಯಿಂದ ಬಗೆಹರಿಯದ ವಾಂಛೆಗಳು ಯಾವುದೂ ಇಲ್ಲವಲ್ಲವೇ ? ದೇವರ ಪೂಜಾಫಲವಾಗಿಯೇ ಹೆಂಡತಿ, ಮಕ್ಕಳು, ಬಂಧುಗಳು, ಮಿತ್ರರು, ಮನೆ, ಕಿಂಬಹುನಾ ಎಲ್ಲವೂ ದೇವರ ಪೂಜೆಯ ಫಲಗಳೇ ಆಗಿವೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ. ತನ್ನ ಆರಾಧನೆಯಿಂದ ಸಂತುಷ್ಟನಾದ ಪರಮಾತ್ಮ ಮುಕ್ತಿಯನ್ನೇ ನೀಡುತ್ತಾನೆ. ಈ ಪುತ್ರಾದಿಸಂಪತ್ತಿ ಎಲ್ಲವೂ ಕೈಮುತ್ಯಸಿದ್ಧ.

ಹೆಂಡತಿಯಾಗಿ ಯಾವ ಪ್ರಸಂಗದಲ್ಲಿ ಹೇಗಿರಬೇಕೆಂದು ಕೌಲಸ್ಯೆಯು ಬಹಳ ಎಚ್ಚರಿಕೆಯಿಂದ ನಡೆದುಕೊಂಡಿದ್ದಳು. ರಾಜನಿಗಿಂತಲೂ ಹೆಚ್ಚಿನ ದುಃಖ ಕೌಸಲ್ಯೆಯದ್ದಾಗಿತ್ತು. ಅದು ಸಹಜವೇ ಆಗಿದೆ. ಆದರೆ ಆ ಶೋಕವನ್ನು ನಿಯಂತ್ರಿಸಿದಳು. ರಾಜನ ದುಃಖವನ್ನು ಪರಿಹರಿಸಿದಳು. ಇಷ್ಟಾದರೂ ದೇವರಲ್ಲಿ ಕೌಸಲ್ಯೆಗೆ ನಂಬುಗೆ ಸಡಿಲಾಗಿರಲಿಲ್ಲ. ದಶರಥಮಹಾರಾಜ ಮಹಾರಥಿಕ. ಹೆಂಡತಿಯ ಹಿತವಾದ ಮಾತುಗಳನ್ನಾಲಿಸಿದ. ನಿರಂತರ ವರ್ಷದ ವರೆಗೆ ದೇವರನ್ನು ಆರಾಧಿಸಿದ.

ಅದೊಂದು ದಿನ. ಕೌಸಲ್ಯಾ-ದಶರಥರು ಮಲಗಿಕೊಂಡಿದ್ದಾರೆ. ಬ್ರಾಹ್ಮಮುಹೂರ್ತದ ಹತ್ತಿರದ ಕಾಲ. ಇಬ್ಬರ ಕನಸಿನಲ್ಲಿಯೂ ಭಗವಂತ ಕಾಣಿಸಿಕೊಂಡ. ಶಂಖ-ಚಕ್ರ-ಗದಾಧಾರಿಯಾಗಿದ್ದ. ಪೀತಾಂಬರವನ್ನು ಧರಿಸಿದ್ದ. ತುಲಸೀಮಾಲೆಯನ್ನು ಅಡಿಯಿಂದ ಮುಡಿಯ ವರೆಗೆ ಧರಿಸಿದ್ದ. ಕೌಸ್ತುಭದಿಂದ ಅಲಂಕರಿಸಿಕೊಂಡಿದ್ದ. ವಿಧವಿಧವಾದ ಹಾರಗಳಿಂದ ಭೂಷಿತನಾಗಿದ್ದ. ಮಂದಹಾಸವನ್ನು ಬೀರಿದ. ಮಾತನಾಡಿದ.

ಹೇ ರಾಜನ್ ! ವರ್ಷದ ತನಕ ನೀನು ಮಾಡಿದ ಪೂಜೆಯಿಂದ ನಾನು ಸಂತುಷ್ಟನಾಗಿದ್ದೇನೆ. ನೀವಿಬ್ಬರೂ ಅತಿಶಯವಾದ ಭಕ್ತಿಯಿಂದ ನನ್ನನ್ನು ಪೂಜಿಸಿದ್ದೀರಿ. ಭದ್ರವಾದ ವರವನ್ನು ನೀಡಲು ನಾನು ಬಂದಿರುವೆ. ಬೇಕಾದ ವರವನ್ನು ಕೇಳು. ಎಂದು ಹೇಳಿದ.

ರಾಜ ಹೇಳಿದ. ಮಮ ಸ್ವಾಮಿನ್ ! ಜಗತ್ಸ್ವಾಮಿನ್ ! ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ, ನಾನು ವರಕ್ಕೆ ಯೋಗ್ಯನಾಗಿದ್ದರೆ, ನಿನಗೆ ಸಮನಾದ ಮಗನನ್ನು ನನಗೆ ನೀಡು. ನೀನು ಅಂದುಕೊಂಡದ್ದು ಆಗದೆ ಇರಲಾರದು.

ಪರಮಾತ್ಮ ಹೇಳಿದ. ರಾಜನ್ ! ನನಗೆ ಸಮನಾದವನು ಈ ಪ್ರಪಂಚದಲ್ಲಿ ನನ್ನ ಹೊರತು ಮತ್ತಾರೂ ಇಲ್ಲ. ಹೀಗಾಗಿ ನಾನೇ ನಿನಗೆ ಮಗನಾಗಿ ಬರುತ್ತೇನೆ.

ನನ್ನ ಕಣ್ಣೀರಿನಿಂದ ಅಮೃತಕಲಶದಲ್ಲಿ ಜನಿಸಿದ್ದಾಳೆ ಶ್ರೀತುಲಸಿ. ಎಲ್ಲ ಲೋಕಗಳಲ್ಲಿ ಅವಳು ಪೂಜ್ಯಳಾಗಿದ್ದಾಳೆ. ಅವಳು ನನಗೆ ಪ್ರಿಯಳೂ ನಿಜ. ಪರಮಮಂಗಳಮೂರ್ತಿ ಅವಳು. ಅವಳನ್ನು ನೀನು ಪೂಜಿಸು. ಪಾಯಸ-ಮೋದಕಗಳಿಂದ, ಸಾವಿರಾರು ತುಪ್ಪದ ದೀಪದ ಸಾಲುಗಳಿಂದ, ಜಗದ್ಧಾತ್ರಿಯಾದ ತುಲಸಿಯನ್ನು ಸತೀಸಹಿತನಾಗಿ ಪೂಜಿಸು. ಅವಳ ಪೂಜೆಯಿಂದ ತುಷ್ಟನಾಗಿ ನಾನು ನಿನ್ನ ಮಗನಾಗಿ ಅವತರಿಸುತ್ತೇನೆ. ಈ ರೀತಿಯಾಗಿ ವರವನ್ನು ನೀಡಿ ದೇವರು ಅಂತರ್ಹಿತನಾದ.

ದಶರಥ ಮತ್ತು ಕೌಸಲ್ಯೆಯರು ಎದ್ದರು. ಸ್ವಪ್ನವೃತ್ತಾಂತವನ್ನು ಮಂತ್ರಿಗಳಿಗೆ ಹೇಳಿದರು. ಲೋಕಮಾತೆಯಾದ ತುಲಸಿಯನ್ನು ಸುತಾರ್ಥಿಯಾಗಿ ಆರಾಧಿಸಿದರು. ಮನಸ್ಸನ್ನು ನಿಗ್ರಹಿಸಿಕೊಂಡರು. ದಂಪತಿಗಳಿಬ್ಬರೂ ತುಲಸಿಯನ್ನು ಆರಾಧಿಸಿದರು. ತಮ್ಮ ಮನೆಯ ಅಂಗಳದಲ್ಲಿ ಮಂಟಪವನ್ನು ನಿರ್ಮಿಸಿದ ರಾಜ. ಅಲ್ಲಿ ವೇದಿಕೆಯನ್ನು ಮಾಡಿಸಿದ. ವಿಧಿಪೂರ್ವಕವಾಗಿ ತುಲಸೀದೇವಿಯನ್ನು ಅಲ್ಲಿ ಬೆಳೆಸಿದ. ಹಾಲು ಮುಂತಾದ ಸಾಧನಗಳಿಂದ ತುಲಸಿಯನ್ನು ಬೆಳೆಸಿದ.

ದಶರಥನ ಪಟ್ಟಮಹಿಷಿಯಾದ ಕೌಸಲ್ಯೆಯೂ ತುಲಸಿಯ ಅರ್ಚನದಲ್ಲಿ ತತ್ಪರಳಾದಳು. ತುಲಸಿಯ ಮುಂದೆ ವಿಧ-ವಿಧವಾದ ರಂಗೋಲಿಗಳನ್ನು ಮನೋಹರವಾಗಿ ಬಿಡಿಸಿದಳು. ಧ್ವಜ-ಚಾಮರ-ದರ್ಪಣಾದಿ ಸೇವೆಗಳನ್ನು ಸಮರ್ಪಿಸಿದಳು. ನಾನಾ ವಿಧವಾದ ಸುರುಚಿರವಾದ ಉಪಚಾರಗಳಿಂದ ತುಲಸಿಯನ್ನು ಪೂಜಿಸಿದಳು. ಮತ್ತು ಬ್ರಾಹ್ಮಣಭೋಜನಗಳಿಂದ ತುಲಸಿಯನ್ನು

ಪುಷ್ಟವಾದ ಧರ್ಮವನ್ನು ಮಾಡಲಾಗುವುದಿಲ್ಲ. ಆದ್ದರಿಂದ ಧರ್ಮದ ಪುಷ್ಟಿಗೆ ದೇಹದ ಪುಷ್ಟಿಯೂ ಆವಶ್ಯಕವಾಗಿದೆ. ಹೇ ರಾಜನೇ ! ದೇಹಗತವಾದ ಚಿಂತೆಯು ದೇಹವನ್ನೇ ಸುಟ್ಟು ಹಾಕುತ್ತದೆ. ಚಿಂತಾವಿಷ್ಟನಾದವನಿಗೆ ಸುಖ ಎಲ್ಲಿಯೂ ಕಾಣದು. ಇರುವ ಸುಖವೂ ದುಃಖವಾಗಿಯೇ ತೋರುತ್ತದೆ. ಚಿಂತಾಕುಲನಾದ ರಾಜನನ್ನು ಶತ್ರುಗಳು ಸುಖವಾಗಿ ಸೋಲಿಸಬಹುದು. ಆದ್ದರಿಂದ ಚಿಂತೆಯನ್ನು ಪರಿತ್ಯಜಿಸಿ. ಯಥಾಸುಖವಾಗಿ ವಿಹರಿಸಿ. ನಿಮಗೆ ಹೆಚ್ಚಿಗೆ ಹೇಳಲು ನಾನಾರು ?

ನಮ್ಮ ವಾಂಛಿತವು ಸಿದ್ಧವಾಗುವುದಕ್ಕಾಗಿ ದೇವರ ಆರಾಧನೆಯನ್ನು ವಿಶಿಷ್ಟವಾದ ರೀತಿಯಲ್ಲಿ ಮಾಡೋಣ. ದೇವರ ಆರಾಧನೆಯಿಂದ ಬಗೆಹರಿಯದ ವಾಂಛೆಗಳು ಯಾವುದೂ ಇಲ್ಲವಲ್ಲವೇ ? ದೇವರ ಪೂಜಾಫಲವಾಗಿಯೇ ಹೆಂಡತಿ, ಮಕ್ಕಳು, ಬಂಧುಗಳು, ಮಿತ್ರರು, ಮನೆ, ಕಿಂಬಹುನಾ ಎಲ್ಲವೂ ದೇವರ ಪೂಜೆಯ ಫಲಗಳೇ ಆಗಿವೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ. ತನ್ನ ಆರಾಧನೆಯಿಂದ ಸಂತುಷ್ಟನಾದ ಪರಮಾತ್ಮ ಮುಕ್ತಿಯನ್ನೇ ನೀಡುತ್ತಾನೆ. ಈ ಪುತ್ರಾದಿಸಂಪತ್ತಿ ಎಲ್ಲವೂ ಕೈಮುತ್ಯಸಿದ್ಧ.

ಹೆಂಡತಿಯಾಗಿ ಯಾವ ಪ್ರಸಂಗದಲ್ಲಿ ಹೇಗಿರಬೇಕೆಂದು ಕೌಲಸ್ಯೆಯು ಬಹಳ ಎಚ್ಚರಿಕೆಯಿಂದ ನಡೆದುಕೊಂಡಿದ್ದಳು. ರಾಜನಿಗಿಂತಲೂ ಹೆಚ್ಚಿನ ದುಃಖ ಕೌಸಲ್ಯೆಯದ್ದಾಗಿತ್ತು. ಅದು ಸಹಜವೇ ಆಗಿದೆ. ಆದರೆ ಆ ಶೋಕವನ್ನು ನಿಯಂತ್ರಿಸಿದಳು. ರಾಜನ ದುಃಖವನ್ನು ಪರಿಹರಿಸಿದಳು. ಇಷ್ಟಾದರೂ ದೇವರಲ್ಲಿ ಕೌಸಲ್ಯೆಗೆ ನಂಬುಗೆ ಸಡಿಲಾಗಿರಲಿಲ್ಲ. ದಶರಥಮಹಾರಾಜ ಮಹಾರಥಿಕ. ಹೆಂಡತಿಯ ಹಿತವಾದ ಮಾತುಗಳನ್ನಾಲಿಸಿದ. ನಿರಂತರ ವರ್ಷದ ವರೆಗೆ ದೇವರನ್ನು ಆರಾಧಿಸಿದ.

ಆದೊಂದು ದಿನ. ಕೌಸಲ್ಯಾ-ದಶರಥರು ಮಲಗಿಕೊಂಡಿದ್ದಾರೆ. ಬ್ರಾಹ್ಮಮುಹೂರ್ತದ ಹತ್ತಿರದ ಕಾಲ. ಇಬ್ಬರ ಕನಸಿನಲ್ಲಿಯೂ ಭಗವಂತ ಕಾಣಿಸಿಕೊಂಡ. ಶಂಖ-ಚಕ್ರ-ಗದಾಧಾರಿಯಾಗಿದ್ದ. ಪೀತಾಂಬರವನ್ನು ಧರಿಸಿದ್ದ. ತುಲಸೀಮಾಲೆಯನ್ನು ಅಡಿಯಿಂದ ಮುಡಿಯ ವರೆಗೆ ಧರಿಸಿದ್ದ. ಕೌಸ್ತುಭದಿಂದ ಅಲಂಕರಿಸಿಕೊಂಡಿದ್ದ. ವಿಧವಿಧವಾದ ಹಾರಗಳಿಂದ ಭೂಷಿತನಾಗಿದ್ದ. ಮಂದಹಾಸವನ್ನು ಬೀರಿದ. ಮಾತನಾಡಿದ.

ಹೇ ರಾಜನ್ ! ವರ್ಷದ ತನಕ ನೀನು ಮಾಡಿದ ಪೂಜೆಯಿಂದ ನಾನು ಸಂತುಷ್ಟನಾಗಿದ್ದೇನೆ. ನೀವಿಬ್ಬರೂ ಅತಿಶಯವಾದ ಭಕ್ತಿಯಿಂದ ನನ್ನನ್ನು ಪೂಜಿಸಿದ್ದೀರಿ. ಭದ್ರವಾದ ವರವನ್ನು ನೀಡಲು ನಾನು ಬಂದಿರುವೆ. ಬೇಕಾದ ವರವನ್ನು ಕೇಳು. ಎಂದು ಹೇಳಿದ.

ರಾಜ ಹೇಳಿದ. ಮಮ ಸ್ವಾಮಿನ್ ! ಜಗತ್ಸ್ವಾಮಿನ್ ! ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ, ನಾನು ವರಕ್ಕೆ ಯೋಗ್ಯನಾಗಿದ್ದರೆ, ನಿನಗೆ ಸಮನಾದ ಮಗನನ್ನು ನನಗೆ ನೀಡು. ನೀನು ಅಂದುಕೊಂಡದ್ದು ಆಗದೆ ಇರಲಾರದು.

ಪರಮಾತ್ಮ ಹೇಳಿದ. ರಾಜನ್ ! ನನಗೆ ಸಮನಾದವನು ಈ ಪ್ರಪಂಚದಲ್ಲಿ ನನ್ನ ಹೊರತು ಮತ್ತಾರೂ ಇಲ್ಲ. ಹೀಗಾಗಿ ನಾನೇ ನಿನಗೆ ಮಗನಾಗಿ ಬರುತ್ತೇನೆ.

ನನ್ನ ಕಣ್ಣೀರಿನಿಂದ ಅಮೃತಕಲಶದಲ್ಲಿ ಜನಿಸಿದ್ದಾಳೆ ಶ್ರೀತುಲಸಿ. ಎಲ್ಲ ಲೋಕಗಳಲ್ಲಿ ಅವಳು ಪೂಜ್ಯಳಾಗಿದ್ದಾಳೆ. ಅವಳು ನನಗೆ ಪ್ರಿಯಳೂ ನಿಜ. ಪರಮಮಂಗಳಮೂರ್ತಿ ಅವಳು. ಅವಳನ್ನು ನೀನು ಪೂಜಿಸು. ಪಾಯಸ-ಮೋದಕಗಳಿಂದ, ಸಾವಿರಾರು ತುಪ್ಪದ ದೀಪದ ಸಾಲುಗಳಿಂದ, ಜಗದ್ಧಾತ್ರಿಯಾದ ತುಲಸಿಯನ್ನು ಸತೀಸಹಿತನಾಗಿ ಪೂಜಿಸು. ಅವಳ ಪೂಜೆಯಿಂದ ತುಷ್ಟನಾಗಿ ನಾನು ನಿನ್ನ ಮಗನಾಗಿ ಅವತರಿಸುತ್ತೇನೆ. ಈ ರೀತಿಯಾಗಿ ವರವನ್ನು ನೀಡಿ ದೇವರು ಅಂತರ್ಹಿತನಾದ.

ದಶರಥ ಮತ್ತು ಕೌಸಲ್ಯೆಯರು ಎದ್ದರು. ಸ್ವಪ್ನವೃತ್ತಾಂತವನ್ನು ಮಂತ್ರಿಗಳಿಗೆ ಹೇಳಿದರು. ಲೋಕಮಾತೆಯಾದ ತುಲಸಿಯನ್ನು ಸುತಾರ್ಥಿಯಾಗಿ ಆರಾಧಿಸಿದರು. ಮನಸ್ಸನ್ನು ನಿಗ್ರಹಿಸಿಕೊಂಡರು. ದಂಪತಿಗಳಿಬ್ಬರೂ ತುಲಸಿಯನ್ನು ಆರಾಧಿಸಿದರು. ತಮ್ಮ ಮನೆಯ ಅಂಗಳದಲ್ಲಿ ಮಂಟಪವನ್ನು ನಿರ್ಮಿಸಿದ ರಾಜ. ಅಲ್ಲಿ ವೇದಿಕೆಯನ್ನು ಮಾಡಿಸಿದ. ವಿಧಿಪೂರ್ವಕವಾಗಿ ತುಲಸೀದೇವಿಯನ್ನು ಅಲ್ಲಿ ಬೆಳೆಸಿದ. ಹಾಲು ಮುಂತಾದ ಸಾಧನಗಳಿಂದ ತುಲಸಿಯನ್ನು ಬೆಳಿಸಿದ.

ದಶರಥನ ಪಟ್ಟಮಹಿಷಿಯಾದ ಕೌಸಲ್ಯೆಯೂ ತುಲಸಿಯ ಅರ್ಚನದಲ್ಲಿ ತತ್ಪರಳಾದಳು. ತುಲಸಿಯ ಮುಂದೆ ವಿಧ-ವಿಧವಾದ ರಂಗೋಲಿಗಳನ್ನು ಮನೋಹರವಾಗಿ ಬಿಡಿಸಿದಳು. ಧ್ವಜ-ಚಾಮರ-ದರ್ಪಣಾದಿ ಸೇವೆಗಳನ್ನು ಸಮರ್ಪಿಸಿದಳು. ನಾನಾ ವಿಧವಾದ ಸುರುಚಿರವಾದ ಉಪಚಾರಗಳಿಂದ ತುಲಸಿಯನ್ನು ಪೂಜಿಸಿದಳು. ಮತ್ತು ಬ್ರಾಹ್ಮಣಭೋಜನಗಳಿಂದ ತುಲಸಿಯನ್ನು

ಪುಷ್ಟವಾದ ಧರ್ಮವನ್ನು ಮಾಡಲಾಗುವುದಿಲ್ಲ. ಆದ್ದರಿಂದ ಧರ್ಮದ ಪುಷ್ಟಿಗೆ ದೇಹದ ಪುಷ್ಟಿಯೂ ಆವಶ್ಯಕವಾಗಿದೆ. ಹೇ ರಾಜನೇ ! ದೇಹಗತವಾದ ಚಿಂತೆಯು ದೇಹವನ್ನೇ ಸುಟ್ಟು ಹಾಕುತ್ತದೆ. ಚಿಂತಾವಿಷ್ಟನಾದವನಿಗೆ ಸುಖ ಎಲ್ಲಿಯೂ ಕಾಣದು. ಇರುವ ಸುಖವೂ ದುಃಖವಾಗಿಯೇ ತೋರುತ್ತದೆ. ಚಿಂತಾಕುಲನಾದ ರಾಜನನ್ನು ಶತ್ರುಗಳು ಸುಖವಾಗಿ ಸೋಲಿಸಬಹುದು. ಆದ್ದರಿಂದ ಚಿಂತೆಯನ್ನು ಪರಿತ್ಯಜಿಸಿ. ಯಥಾಸುಖವಾಗಿ ವಿಹರಿಸಿ. ನಿಮಗೆ ಹೆಚ್ಚಿಗೆ ಹೇಳಲು ನಾನಾರು ?

ನಮ್ಮ ವಾಂಛಿತವು ಸಿದ್ಧವಾಗುವುದಕ್ಕಾಗಿ ದೇವರ ಆರಾಧನೆಯನ್ನು ವಿಶಿಷ್ಟವಾದ ರೀತಿಯಲ್ಲಿ ಮಾಡೋಣ. ದೇವರ ಆರಾಧನೆಯಿಂದ ಬಗೆಹರಿಯದ ವಾಂಛೆಗಳು ಯಾವುದೂ ಇಲ್ಲವಲ್ಲವೇ ? ದೇವರ ಪೂಜಾಫಲವಾಗಿಯೇ ಹೆಂಡತಿ, ಮಕ್ಕಳು, ಬಂಧುಗಳು, ಮಿತ್ರರು, ಮನೆ, ಕಿಂಬಹುನಾ ಎಲ್ಲವೂ ದೇವರ ಪೂಜೆಯ ಫಲಗಳೇ ಆಗಿವೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ. ತನ್ನ ಆರಾಧನೆಯಿಂದ ಸಂತುಷ್ಟನಾದ ಪರಮಾತ್ಮ ಮುಕ್ತಿಯನ್ನೇ ನೀಡುತ್ತಾನೆ. ಈ ಪುತ್ರಾದಿಸಂಪತ್ತಿ ಎಲ್ಲವೂ ಕೈಮುತ್ಯಸಿದ್ಧ.

ಹೆಂಡತಿಯಾಗಿ ಯಾವ ಪ್ರಸಂಗದಲ್ಲಿ ಹೇಗಿರಬೇಕೆಂದು ಕೌಲಸ್ಯೆಯು ಬಹಳ ಎಚ್ಚರಿಕೆಯಿಂದ ನಡೆದುಕೊಂಡಿದ್ದಳು. ರಾಜನಿಗಿಂತಲೂ ಹೆಚ್ಚಿನ ದುಃಖ ಕೌಸಲ್ಯೆಯದ್ದಾಗಿತ್ತು. ಆದು ಸಹಜವೇ ಆಗಿದೆ. ಆದರೆ ಆ ಶೋಕವನ್ನು ನಿಯಂತ್ರಿಸಿದಳು. ರಾಜನ ದುಃಖವನ್ನು ಪರಿಹರಿಸಿದಳು. ಇಷ್ಟಾದರೂ ದೇವರಲ್ಲಿ ಕೌಸಲ್ಯೆಗೆ ನಂಬುಗೆ ಸಡಿಲಾಗಿರಲಿಲ್ಲ. ದಶರಥಮಹಾರಾಜ ಮಹಾರಥಿಕ. ಹೆಂಡತಿಯ ಹಿತವಾದ ಮಾತುಗಳನ್ನಾಲಿಸಿದ. ನಿರಂತರ ವರ್ಷದ ವರೆಗೆ ದೇವರನ್ನು ಆರಾಧಿಸಿದ.

ಆದೊಂದು ದಿನ. ಕೌಸಲ್ಯಾ-ದಶರಥರು ಮಲಗಿಕೊಂಡಿದ್ದಾರೆ. ಬ್ರಾಹ್ಮಮುಹೂರ್ತದ ಹತ್ತಿರದ ಕಾಲ. ಇಬ್ಬರ ಕನಸಿನಲ್ಲಿಯೂ ಭಗವಂತ ಕಾಣಿಸಿಕೊಂಡ. ಶಂಖ-ಚಕ್ರ-ಗದಾಧಾರಿಯಾಗಿದ್ದ. ಪೀತಾಂಬರವನ್ನು ಧರಿಸಿದ್ದ. ತುಲಸೀಮಾಲೆಯನ್ನು ಅಡಿಯಿಂದ ಮುಡಿಯ ವರೆಗೆ ಧರಿಸಿದ್ದ. ಕೌಸ್ತುಭದಿಂದ ಅಲಂಕರಿಸಿಕೊಂಡಿದ್ದ. ವಿಧವಿಧವಾದ ಹಾರಗಳಿಂದ ಭೂಷಿತನಾಗಿದ್ದ. ಮಂದಹಾಸವನ್ನು ಬೀರಿದ. ಮಾತನಾಡಿದ.

ಹೇ ರಾಜನ್ ! ವರ್ಷದ ತನಕ ನೀನು ಮಾಡಿದ ಪೂಜೆಯಿಂದ ನಾನು ಸಂತುಷ್ಟನಾಗಿದ್ದೇನೆ. ನೀವಿಬ್ಬರೂ ಅತಿಶಯವಾದ ಭಕ್ತಿಯಿಂದ ನನ್ನನ್ನು ಪೂಜಿಸಿದ್ದೀರಿ. ಭದ್ರವಾದ ವರವನ್ನು ನೀಡಲು ನಾನು ಬಂದಿರುವೆ. ಬೇಕಾದ ವರವನ್ನು ಕೇಳು. ಎಂದು ಹೇಳಿದ.

ರಾಜ ಹೇಳಿದ. ಮಮ ಸ್ವಾಮಿನ್ ! ಜಗತ್ಸ್ವಾಮಿನ್ ! ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ, ನಾನು ವರಕ್ಕೆ ಯೋಗ್ಯನಾಗಿದ್ದರೆ, ನಿನಗೆ ಸಮನಾದ ಮಗನನ್ನು ನನಗೆ ನೀಡು. ನೀನು ಅಂದುಕೊಂಡದ್ದು ಆಗದೆ ಇರಲಾರದು.

ಪರಮಾತ್ಮ ಹೇಳಿದ. ರಾಜನ್ ! ನನಗೆ ಸಮನಾದವನು ಈ ಪ್ರಪಂಚದಲ್ಲಿ ನನ್ನ ಹೊರತು ಮತ್ತಾರೂ ಇಲ್ಲ. ಹೀಗಾಗಿ ನಾನೇ ನಿನಗೆ ಮಗನಾಗಿ ಬರುತ್ತೇನೆ.

ನನ್ನ ಕಣ್ಣೀರಿನಿಂದ ಅಮೃತಕಲಶದಲ್ಲಿ ಜನಿಸಿದ್ದಾಳೆ ಶ್ರೀತುಲಸಿ. ಎಲ್ಲ ಲೋಕಗಳಲ್ಲಿ ಅವಳು ಪೂಜ್ಯಳಾಗಿದ್ದಾಳೆ. ಅವಳು ನನಗೆ ಪ್ರಿಯಳೂ ನಿಜ. ಪರಮಮಂಗಳಮೂರ್ತಿ ಅವಳು. ಅವಳನ್ನು ನೀನು ಪೂಜಿಸು. ಪಾಯಸ-ಮೋದಕಗಳಿಂದ, ಸಾವಿರಾರು ತುಪ್ಪದ ದೀಪದ ಸಾಲುಗಳಿಂದ, ಜಗದ್ಧಾತ್ರಿಯಾದ ತುಲಸಿಯನ್ನು ಸತೀಸಹಿತನಾಗಿ ಪೂಜಿಸು. ಅವಳ ಪೂಜೆಯಿಂದ ತುಷ್ಟನಾಗಿ ನಾನು ನಿನ್ನ ಮಗನಾಗಿ ಅವತರಿಸುತ್ತೇನೆ. ಈ ರೀತಿಯಾಗಿ ವರವನ್ನು ನೀಡಿ ದೇವರು ಅಂತರ್ಹಿತನಾದ.

ದಶರಥ ಮತ್ತು ಕೌಸಲ್ಯೆಯರು ಎದ್ದರು. ಸ್ವಪ್ನವೃತ್ತಾಂತವನ್ನು ಮಂತ್ರಿಗಳಿಗೆ ಹೇಳಿದರು. ಲೋಕಮಾತೆಯಾದ ತುಲಸಿಯನ್ನು ಸುತಾರ್ಥಿಯಾಗಿ ಆರಾಧಿಸಿದರು. ಮನಸ್ಸನ್ನು ನಿಗ್ರಹಿಸಿಕೊಂಡರು. ದಂಪತಿಗಳಿಬ್ಬರೂ ತುಲಸಿಯನ್ನು ಆರಾಧಿಸಿದರು. ತಮ್ಮ ಮನೆಯ ಅಂಗಳದಲ್ಲಿ ಮಂಟಪವನ್ನು ನಿರ್ಮಿಸಿದ ರಾಜ. ಅಲ್ಲಿ ವೇದಿಕೆಯನ್ನು ಮಾಡಿಸಿದ. ವಿಧಿಪೂರ್ವಕವಾಗಿ ತುಲಸೀದೇವಿಯನ್ನು ಅಲ್ಲಿ ಬೆಳೆಸಿದ. ಹಾಲು ಮುಂತಾದ ಸಾಧನಗಳಿಂದ ತುಲಸಿಯನ್ನು ಬೆಳಿಸಿದ.

ದಶರಥನ ಪಟ್ಟಮಹಿಷಿಯಾದ ಕೌಸಲ್ಯೆಯೂ ತುಲಸಿಯ ಅರ್ಚನದಲ್ಲಿ ತತ್ಪರಳಾದಳು. ತುಲಸಿಯ ಮುಂದೆ ವಿಧ-ವಿಧವಾದ ರಂಗೋಲಿಗಳನ್ನು ಮನೋಹರವಾಗಿ ಬಿಡಿಸಿದಳು. ಧ್ವಜ-ಚಾಮರ-ದರ್ಪಣಾದಿ ಸೇವೆಗಳನ್ನು ಸಮರ್ಪಿಸಿದಳು. ನಾನಾ ವಿಧವಾದ ಸುರುಚಿರವಾದ ಉಪಚಾರಗಳಿಂದ ತುಲಸಿಯನ್ನು ಪೂಜಿಸಿದಳು. ಮತ್ತು ಬ್ರಾಹ್ಮಣಭೋಜನಗಳಿಂದ ತುಲಸಿಯನ್ನು

ಅರ್ಚಿಸಿದಳು. ತುಲಸಿಯ ಸ್ತೋತ್ರಗಳನ್ನು, ಮಂತ್ರಗಳನ್ನು ತತ್ಪರಳಾಗಿ ಜಪಿಸಿದಳು. ರಾಜನಿಂದ ಕೂಡಿಕೊಂಡು ವರ್ಷದ ವರೆಗೆ ತುಲಸಿಯನ್ನು ಶ್ರದ್ಧಾ-ನಿಷ್ಠೆಗಳಿಂದ ಭಜಿಸಿದಳು. ದಂಪತಿಗಳು ಮಾಡಿದ ಅತಿವಿಶಿಷ್ಟವಾದ ಈ ಪೂಜೆಗಳಿಂದ ಹರಿಪ್ರಿಯಳಾದ ತುಲಸಿಯು ಸಂತುಷ್ಟಳಾದಳು. ಪೀತಾಂಬರಧಾರಿಯಾಗಿ ಪ್ರತ್ಯಕ್ಷವಾದಳು. ತನ್ನನ್ನು ಅನುಗ್ರಹಿಸುವ ತವಕದಿಂದ ಪ್ರತ್ಯಕ್ಷಳಾದ ತುಲಸಿಯನ್ನು ರಾಜ ಸ್ತೋತ್ರಮಾಡಿದ.

ತಾಯಿ ನೀನು ಜಗದ್ಧಾತ್ರಿಯಾಗಿರುವಿ. ಶ್ರೀಹರಿಗೆ ಪ್ರಿಯಳಾಗಿರುವಿ. ನಿನ್ನ ಪೂಜೆಯಲ್ಲಿ ಆಸಕ್ತರಾದವರು ಪಾಪಗಳಿಂದ ಮುಕ್ತರಾಗುತ್ತಾರೆ. ನಿನ್ನ ಪಾದಗಳಲ್ಲಿ ಆಸಕ್ತನಾದವನಿಗೆ ದುರ್ಲಭವಾದುದು ಈ ಜಗತ್ತಿನಲ್ಲಿಯೇ ಇಲ್ಲ. ನೀನು ಯಾರಿಗೆ ಪ್ರಸನ್ನಳಾಗಿರುವಿಯೋ ಅವರು ಈ ಜಗತ್ತಿನಲ್ಲಿ ಶ್ಲಾಘ್ಯರಾಗಿದ್ದಾರೆ. ನಿನ್ನ ಪ್ರಸಾದದಿಂದ ಮಕ್ಕಳ ಕನಸು ನನಸಾಗಬೇಕು. ನನಗೆ ವರವನ್ನು ನೀಡು. ನೀನು ವರದೆಯಲ್ಲವೇ? ಹಾಗಾದರೆ ನನಗೆ ನೀನು ಸಂತಾನವರವನ್ನು ಕರುಣಿಸಬೇಕು. ಎಂದು ವಿನಮ್ರನಾಗಿ ರಾಜ ಪ್ರಾರ್ಥಿಸಿದ.

ತುಲಸಿಯು ರಾಜನಿಗೆ ಹೇಳಿದಳು. ರಾಜನ್ ! ನಿನ್ನ ಪೂಜೆಯಿಂದ ನಾನು ಸಂತುಷ್ಟಳಾಗಿದ್ದೇನೆ. ನಿನಗೆ ವರಗಳನ್ನು ನೀಡಲು ಬಂದಿರುವೆ. ಒಣಗಿದ ತುಲಸೀಕಾಷ್ಠಗಳಿಂದ ಪುತ್ರಕಾಮೇಷ್ಟಿಯಾಗವನ್ನು ಆಚರಿಸು. ಅತ್ಯುದಾರವಾದ ಕಾಷ್ಠಗಳು ಅವು. ವಿಷ್ಣುವಿಗೆ ಪ್ರತಿನಿತ್ಯವೂ ಪಾಯಸವನ್ನು ನಿವೇದಿಸು. ವಿಷ್ಣುನಿವೇದಿತವಾದ ಪಾಯಸದಿಂದ ಬ್ರಹ್ಮಚಾರಿಗಳಿಗೆ ಭೋಜನ ಮಾಡಿಸು. ಇದರಿಂದ ಪ್ರೀತನಾದ ಪರಮಾತ್ಮ ನಿನಗೆ ಮಗನಾಗಿ ಜನಿಸುತ್ತಾನೆ. ಮುಂಬರುವ ಚೈತ್ರದಲ್ಲಿ ನಿನ್ನ ಮನೆಯಲ್ಲಿ ಪುತ್ರೋತ್ಸವವಾಗುತ್ತದೆ. ಆ ಮಗ ಜಗದ್ವಿಖ್ಯಾತ-ನಾಗುತ್ತಾನೆ. ಜಗದ್ವಿಖ್ಯಾತನಾದ ಪರಮಾತ್ಮನೇ ನಿನಗೆ ಮಗನಾಗಿ ಜನಿಸುತ್ತಾನೆ.

ಈ ರೀತಿಯಾಗಿ ವರವನ್ನು ನೀಡಿ ತುಲಸಿಯು ಅಂತರ್ಹಿತಳಾದಳು. ರಾಜನೂ ಸಂತುಷ್ಟನಾದ. ಬ್ರಹ್ಮಚಾರಿಗಳನ್ನು ಪಾಯಸಾನ್ನದಿಂದ ಭೋಜನ ಮಾಡಿಸಿದ. ತುಲಸಿಯನ್ನು ಪೂಜಿಸಿದ. ತುಲಸೀಕಾಷ್ಠಗಳನ್ನು ಸಂಗ್ರಹಿಸಿದ. ಪುತ್ರಕಾಮೇಷ್ಟಿ ಯಾಗವನ್ನು ಮಾಡಿದ.

ಪೂಜಾಫಲವಾಗಿ ನಾಲ್ಕು ಜನ ಮಕ್ಕಳು ಜನಿಸಿದರು. ಸಾಕ್ಷಾತ್ ಪರಮಾತ್ಮ ರಾಮನಾಗಿ ಅವತರಿಸಿದ. ಅವನ ಸೇವಕನಾಗಿ ಲಕ್ಷ್ಮಣನೂ ಜನಿಸಿದ. ಭರತನು

ಜನಿಸಿದ. ಅವನಿಗೆ ಅನುಯಾಯಿಯಾಗಿ ಶತ್ರುಘ್ನ ಜನಿಸಿದ. ಮಕ್ಕಳ ಪ್ರಾಪ್ತಿಯಿಂದ ರಾಜನಿಗೆ ಮತ್ತೆ ಬಲ ಬಂದಿತು. ಚಿಂತೆ ದೂರವಾಯಿತು. ವಿಪುಲವಾದ ಭೋಗಗಳನ್ನು ಅನುಭವಿಸಿದ. ಕೊನೆಗೆ ಸದ್ಗತಿಯನ್ನು ಪಡೆದ.

ಈ ಇತಿಹಾಸ ಅತ್ಯಂತ ಪವಿತ್ರ. ಈ ತುಲಸೀಮಾಹಾತ್ಮ್ಯವನ್ನು ಸರ್ವದಾ ಪಠಿಸಬೇಕು. ವಿಷುವಕಾಲ, ಪರ್ವಕಾಲ, ಪರಮಪುಣ್ಯಪ್ರದವಾದ ಯಾವುದೇ ಪ್ರಸಂಗದಲ್ಲಿ ಈ ತುಲಸೀಮಹಿಮೆಯನ್ನು ಚಿಂತಿಸಬೇಕು.

ಅಮಾವಾಸ್ಯಾದಿನದಲ್ಲಿ, ಶ್ರಾದ್ಧಕಾಲದಲ್ಲಿ, ಗ್ರಹಣಪ್ರಸಂಗದಲ್ಲಿ, ವಿಶೇಷವಾಗಿ ಶ್ರಾದ್ಧಕಾಲದಲ್ಲಿ ಈ ಮಹಿಮೆಯನ್ನು ಪಠಿಸಬೇಕು. ಕೃಷ್ಣಜಯಂತೀಯಲ್ಲಿ, ಶಿವರಾತ್ರಿಯ ಪ್ರಸಂಗದಲ್ಲಿ, ದ್ವಾದಶೀದಿನದಲ್ಲಿ, ಏಕಾದಶೀದಿನದಲ್ಲಿ, ಮಹಾನವಮಿಯಂದು, ರಾಮನವಮಿಯಂದು, ಶಿವ-ದುರ್ಗಾ ಇತ್ಯಾದಿದೇವತೆಗಳ ಪೂಜೆ ಮಾಡುವ ಪ್ರಸಂಗದಲ್ಲಿ ವಿಧವಿಧವಾದ ವ್ರತಗಳನ್ನು ಮಾಡುವಾಗ, ತುಲಸಿಯನ್ನು ಶ್ರದ್ಧೆಯಿಂದ ಸ್ಮರಿಸಬೇಕು. ಅತ್ಯಧಿಕವಾದ ಪುಣ್ಯವು ಇದರಿಂದ ಲಭ್ಯವಾಗುತ್ತದೆ.

ತುಲಸಿಯ ಸೇವೆಯಿಂದ ಮಕ್ಕಳಿಲ್ಲದವರು ಮಕ್ಕಳನ್ನು ಪಡೆಯುತ್ತಾರೆ. ಮದುವೆಯಾಗದೇ ಇದ್ದವರಿಗೆ ಮದುವೆಯಾಗುತ್ತದೆ. ವಿಯುಕ್ತರಾದ ದಂಪತಿಗಳು ಮತ್ತೆ ಒಂದಾಗುತ್ತಾರೆ. ಅವಿದ್ಯಾವಂತರು ವಿದ್ಯಾಸಂಪನ್ನರಾಗುತ್ತಾರೆ. ದರಿದ್ರರು ಶ್ರೀಮಂತರಾಗುತ್ತಾರೆ. ಕ್ಷತ್ರಿಯರು ರಾಜ್ಯವನ್ನು ಗೆಲ್ಲುತ್ತಾರೆ. ವೈಶ್ಯರ ವ್ಯಾಪಾರ ದುಪ್ಪಟ್ಟಾಗುತ್ತದೆ. ಈ ಸ್ತೋತ್ರವನ್ನು ತುಲಸಿಯ ಮುಂದೆ ಪಠಿಸಬೇಕು. ಆಯುಷ್ಯ ಆರೋಗ್ಯ ಐಶ್ವರ್ಯ, ಇವೆಲ್ಲವನ್ನು ಪಡೆಯುತ್ತಾರೆ. ಕೊನೆಗೆ ಸದ್ಗತಿಯನ್ನು ಪಡೆಯುತ್ತಾರೆ. ಇದು ಸೂತಸಂಹಿತಾ ನಿರೂಪಿಸಿರುವ ಕಥೆ.



★★★★★

## ೬. ತುಲಸಿಯ ಗಾಳಿಗೆ ಪಾಪವೆಲ್ಲ ಹಾರಿಹೋಗುತ್ತವೆ

ತುಲಸೀಮೂಲವನ್ನಾಶ್ರಯಿಸಿದ ಗಾಳಿ ಯಾವ ದೇಶದಲ್ಲಿ ಪ್ರವಹಿಸುವುದೋ, ಆ ದೇಶದಲ್ಲಿ ವಾಸಮಾಡಿದವರೂ ಪಾಪಗಳಿಂದ ಮುಕ್ತರಾಗುತ್ತಾರೆ. ತುಲಸಿಯೇ ಯಾರ ಮನೆಯಲ್ಲಿದೆಯೋ ಅಂಥವರು ಪಾಪಗಳಿಂದ ಮುಕ್ತರಾಗುತ್ತಾರೆ. ಈ ವಿಷಯದಲ್ಲಿ ಅಸಾಧ್ಯವೇನಿದೆ? ತುಲಸಿಯನ್ನು ಸ್ಪರ್ಶಿಸಿದ ಗಾಳಿ ಯಾರಿಗೆ ಸೋಕುವುದೋ ಅವರು ಎಲ್ಲ ವಿಧವಾದ ಪಾಪಗಳಿಂದ ಮುಕ್ತರಾಗುತ್ತಾರೆ. ಸಂದೇಹಪರಿಹಾರಕ್ಕಾಗಿ ಸೂತರು ಶೌನಕಾದಿಗಳಿಗೆ ನಿರೂಪಿಸದ ಇತಿಹಾಸ ಈ ರೀತಿಯಾಗಿದೆ.

ಪೌಂಡ್ರಕ ಎಂಬ ಹೆಸರಿನ ದುರಾಚಾರಿ ಇದ್ದ. ಅವನು ಬೇಡ. ಪ್ರತಿನಿತ್ಯ ನೂರು ಮೃಗಗಳನ್ನು ಕೊಲ್ಲುವುದನ್ನು ರೂಢಿಯಲ್ಲಿಟ್ಟುಕೊಂಡಿದ್ದ. ಆದರಿಂದಲೇ ಅವನು ಜೀವನವನ್ನು ಮಾಡುತ್ತಿದ್ದ. ಅಲ್ಲಿಗೆ ಅವನ ವ್ಯಾಪಾರ ನಿಲ್ಲಲಿಲ್ಲ. ಬ್ರಾಹ್ಮಣರ ಸಂಪತ್ತನ್ನೆಲ್ಲ ದೋಚಿದ. ನಾನಾವಿಧವಾದ ಪಾಪಕರ್ಮಗಳನ್ನು ಮಾಡಿದ. ಯಾತ್ರಾರ್ಥಿಗಳನ್ನು ದೋಚಿಕೊಂಡ. ಬ್ರಾಹ್ಮಣರನ್ನು ಸಂಹರಿಸಿದ. ಅವರ ಸಂಪತ್ತನ್ನೆಲ್ಲ ಸುಲಿಗೆ ಮಾಡಿದ. ಗೋಹತ್ಯಾ, ಸ್ತ್ರೀಹತ್ಯಾದಿಗಳನ್ನು ನಿರ್ಭಯವಾಗಿ ಆಚರಿಸಿದ. ಮದೋದ್ಧತನಾದ. ಎಲ್ಲರ ಮಾಂಸವನ್ನೂ ತಿಂದು ತೇಗಿದ. ಚಂಡಾಲಕನ್ಯೆಯ ಜೊತೆ ಬಹುಕಾಲ ರಮಿಸಿದ.

ಈ ರೀತಿಯಾಗಿ ಅತಿ ಘೋರವಾದ ಜೀವನವನ್ನು ನಡೆಸಿದ. ಒಂಭತ್ತು ಸಾವಿರದ ಹನ್ನೆರಡು ವರ್ಷಗಳು ನಿರಾತಂಕವಾಗಿ ಕಳೆದವು. ಅವನು ವಾಸಮಾಡುವ ಪ್ರದೇಶದಲ್ಲಿಯ ಜಲವೆಲ್ಲ ಬತ್ತಿಹೋಯಿತು. ಕಾಡಿನ ನೆಲವೆಲ್ಲ ಒಣಗಿಹೋಯಿತು. ಆ ಪ್ರದೇಶವೇ ನಿರ್ಮಾನುಷ್ಯವಾಯಿತು. ಎಲ್ಲರನ್ನು, ಎಲ್ಲವನ್ನು ತಿಂದಿದ್ದರಿಂದ ಯಾವ ಪದಾರ್ಥಗಳೂ ಉಳಿಯಲಿಲ್ಲ.

ಒಂದು ದಿನ ಅವನಿಗೆ ತಿನ್ನಲು ಏನೂ ಸಿಗಲಿಲ್ಲ. ಹಸಿದ. ಹಸಿದವನು ಪಾಪ ಮಾಡುತ್ತಾನೆ ಸಹಜ. ಸಹಜಪಾಪಿಯೇ ಹಸಿದಾಗ ಮತ್ತೇನು ಹೇಳುವುದು? ಅವನ ಪಿತ್ತ ನೆತ್ತಿಗೇರಿತು. ಕ್ರುದ್ಧನಾದ. ಮನೆಗೆ ಧಾವಿಸಿ ಬಂದ. ಮನೆಯಲ್ಲಿ ತನ್ನ ಹಣ್ಣು ಹಣ್ಣು ಮುದಿಯಾದ ತಂದೆ ಇದ್ದ. ತಂದೆಯನ್ನೇ ಕೊಂದು ಹಾಕಿದ. ಅಷ್ಟೇ ವೇಗದಿಂದ ತಿಂದೂ ಹಾಕಿದ. ದುಷ್ಟರು ಹಸಿದಾಗ ಎಷ್ಟು ಕಟುಕರಾಗುತ್ತಾರೆ. ಪೌಂಡ್ರಕನೇ ಇದಕ್ಕೆ ನಿದರ್ಶನ.

ಮಾರನೆಯ ದಿನ ತಾಯಿಯನ್ನು, ಅದರ ಮರುದಿನ ತನ್ನ ಹೆಂಡತಿಯನ್ನೇ ಕೊಂದು ಹಾಕಿ ತಿಂದು ಬಿಟ್ಟ. ಕ್ರಮವಾಗಿ ತನ್ನ ಗಂಡು ಮಕ್ಕಳನ್ನೂ ನಂತರ ಹೆಣ್ಣು ಮಕ್ಕಳನ್ನೂ ಸಂಹರಿಸಿದ. ತಿಂದುಬಿಟ್ಟ. ಈಗ ತಿನ್ನಲು ತಾನೇ ಉಳಿದ. ಅದು ಸಾಧ್ಯವಿಲ್ಲ.

ವಾಸಸ್ಥಾನವನ್ನು ಬದಲಿಸಿದ. ಅತಿ ಭೀಕರವಾದ ವನವನ್ನು ಪ್ರವೇಶಿಸಿದ. ದಾರಿಯಲ್ಲಿ ಬರುವ ಜನರನ್ನೆಲ್ಲ ತಿಂದ. ಮತ್ತೆ ಅವರ ದ್ರವ್ಯವನ್ನೆಲ್ಲ ಅಪಹರಿಸಿದ. ಇಂತಹ ಅಧಮಜೀವನವನ್ನು ನಡೆಸಿದ. ಅತಿಘೋರವಾದ ಜೀವನ ಅವನದಾಯಿತು. ದುರಾತ್ಮನಾದ. ಅವನು ಸಂಹಾರಮಾಡಿದ ಜನರ ಸಂಖ್ಯೆಯನ್ನು ಹೇಳಲು ತೀರದು.

ಒಂದು ದಿನ ಬೇಟೆಯಾಡಲು ವನಕ್ಕೆ ಹೋದ. ವನವೆಲ್ಲ ಅಲೆದಾಡಿದ. ಎಲ್ಲಿಯೂ ಯಾವ ಪ್ರಾಣಿಯೂ ಕಾಣಲಿಲ್ಲ. ಎದುರಿಗೆ ಸಿಂಹವನ್ನು ನೋಡಿದ. ನೋಡಲು ಮಹಾಕ್ರೂರಿಯಾಗಿತ್ತು. ಆದರೆ ಪೌಂಡ್ರಕನನ್ನು ನೋಡಿ ಸಿಂಹವನ್ನು ನೋಡಿದರೇ ಸಿಂಹವನ್ನು ಆಕಳಿಗೆ ಹೋಲಿಸಬಹುದು. ಅಷ್ಟು ಕ್ರೂರಿಯಾಗಿದ್ದ ಪೌಂಡ್ರಕ. ಮಹಾಸಿಂಹವನ್ನು ಸಂಹರಿಸಲು ನಿರ್ಧರಿಸಿದ.

ಸಿಂಹವು ಕಡಿಮೆಯದ್ದಾಗಿರಲಿಲ್ಲ. ಅದೂ ಹಸಿದಿತ್ತು. ಪರ್ವತದ ಗಾತ್ರದ್ದಾಗಿತ್ತು. ಪೌಂಡ್ರಕನನ್ನು ತಿನ್ನಲು ಓಡುತ್ತಿತ್ತು. ಅಷ್ಟರಲ್ಲಿಯೇ ಪೌಂಡ್ರಕ ಬಾಣವನ್ನು ಪ್ರಯೋಗಿಸಿದ. ಸಿಂಹಕ್ಕೆ ಬಾಣ ಬಡಿಯಿತು. ಮೊದಲೇ ಹಸಿದಿತ್ತು. ಈಗ ಈ ಗಾಯದ ಬೇನೆ ಬೇರೆ. ಗಾಯದ ಮೇಲೆ ಬರೆ ಎಳೆದ ಹಾಗಾಯಿತು ಸಿಂಹಕ್ಕೆ. ಸಿಟ್ಟು ಉಕ್ಕೇರಿತು. ಧಾವಿಸಿ ಬಂದಿತು. ಪೌಂಡ್ರಕನನ್ನು ಸೀಳಿ ಹಾಕಿತು. ಸಿಂಹ ಸತ್ತು ಹೋಯಿತು.

ಪೌಂಡ್ರಕನೂ ಈಗ ಮರಣಾಸನ್ನನಾಗಿದ್ದಾನೆ. ಆವಾಗ ಸುಗಂಧಭರಿತವಾದ, ತುಲಸೀವನದ ಮೇಲಿನ ಗಾಳಿ ಅವನಿಗೆ ಬಡಿಯಿತು. ತಾಯಿಯ ಪ್ರೇಮದ ಅಪ್ಪುಗೆಯ ನೆನಪಾಯಿತು ಪೌಂಡ್ರಕನಿಗೆ. ಆ ಗಾಳಿ ಅವನಲ್ಲಿಯ ದೌರಾತ್ಮವನ್ನು ಹಾರಿಸಿತು. ಒಳಗೆ ಹುದುಗಿದ ಸಜ್ಜನಿಕೆಯನ್ನು ಹೊರಸೂಸುವಂತೆ ಮಾಡಿತು. ಕ್ಷಣದಲ್ಲಿಯೇ ಶ್ರೀಹರಿಭಕ್ತನಾಗಿಹೋದ.

ಇದು ಭಕ್ತರ ಸ್ವಭಾವ. ದೀರ್ಘಕಾಲದ ತನಕ ಅತಿಮಹಾಪಾತಕಗಳಲ್ಲಿ ಸಕ್ತರಾಗಿದ್ದರೂ, ಒಂದೇ ಕ್ಷಣದಲ್ಲಿ ಶ್ರೀಹರಿಯ ಭಕ್ತರಾಗುತ್ತಾರೆ. ಭಾವುಕತೆಯಿಂದ ಪುನೀತರಾಗುತ್ತಾರೆ. ಕ್ಷಣದ ಆ ಭಕ್ತಿಯೇ ಅವರ ಪಾಪಪರ್ವತಗಳನ್ನು ನಿರ್ನಾಮ ಮಾಡುತ್ತದೆ.

ಈಗಿನ ಪೌಂಡ್ರಕ ಬೇರೆಯೇ ಆಗಿದ್ದ. ತಾನು ಮಾಡಿದ ಪಾಪದ ರಾಶಿಗಳನ್ನು ನೆನಪಿಸಿಕೊಳ್ಳುತ್ತಿದ್ದ. ಅವುಗಳನ್ನು ನೆನೆಸಿಕೊಂಡು ಭಯಪಡಬೇಕಾದ ಅವಸ್ಥೆಯಲ್ಲಿಯೂ ಮಂದಹಾಸ ಅವನ ಮುಖಸಿಂಹಾಸನದಲ್ಲಿ ವಿರಾಜಮಾನವಾಗಿತ್ತು. ಮಾಡಿದ ಪಾಪಕ್ಕೆ ಯಾವ ಶಿಕ್ಷೆಯನ್ನಾದರೂ ಅನುಭವಿಸಲು ಅವನು ಸಿದ್ಧನಾಗಿದ್ದ.

ಯಮಭಟರು ಕಾಣಿಸಿಕೊಂಡರು. ಯಮನಿಂದ ಆಜ್ಞಪ್ತರಾಗಿ ಈ ಪೌಂಡ್ರಕನನ್ನು ಎಳೆದೊಯ್ಯಲು ಬಂದಿದ್ದರು. ಅತಿಕ್ರೂರವಾದ, ಭಯಾನಕವಾದ ಪಾಶಗಳನ್ನು ಕೈಯಲ್ಲಿ ಧರಿಸಿದ್ದರು. ಸ್ವಯಂ ಭಯಾನಕರಾಗಿದ್ದರು. ಇವನು ಮಹಾಪಾಪಿ. ಇವನನ್ನು ಕೊಲ್ಲಿರಿ. ಸುಟ್ಟು ಹಾಕಿರಿ. ಎನ್ನುತ್ತಾ ಶಬ್ದದಿಂದಲೇ ಭಯಪಡಿಸುತ್ತಾ ಓಡಿ ಬಂದರು. ಪಾಶದಿಂದ ಆ ಜೀವನನ್ನು ಬಂಧಿಸಿದರು. ನಾನು ಮಾಡಿದ ಪಾಪಕ್ಕೆ ಇದು ಅತಿ ಸಣ್ಣದಾದ ಶಿಕ್ಷೆ ಎಂದು ತಿಳಿದ ಪೌಂಡ್ರಕ. ಮಂದಹಾಸದಿಂದಲೇ ಯಮಭಟರನ್ನು ಸ್ವಾಗತಿಸಿದ.

ಅಷ್ಟರಲ್ಲಿಯೇ ವಿಷ್ಣುದೂತರು ಅಲ್ಲಿಗೆ ಧಾವಿಸಿದರು. ಅವರ ಮುಖದಲ್ಲಿ ಪ್ರಸನ್ನತೆ ಕಂಗೊಳಿಸುತ್ತಿತ್ತು. ಪರಮಾತ್ಮನಿಗೆ ಪ್ರಿಯರಾದವರು. ಯಮಭಟರ ಅತಿಭಯಾನಕವಾದ ಬಂಧನದಲ್ಲಿ ಬದ್ಧನಾಗಿದ್ದ ಪೌಂಡ್ರಕ. ಆದರೂ ಮುಖದಲ್ಲಿ ನಗುವಿತ್ತು. ಆ ನಗುವಿಗೆ ಶ್ರೀಹರಿಯ ಸ್ಮರಣೆ ನಿಮಿತ್ತವಾಗಿತ್ತು. ಶ್ರೀಹರಿಯ ಭಕ್ತರಿಗೆ ಮಾತ್ರ ಇದರ ಅರಿವಾಗುತ್ತದೆ. ಆ ನಗುವಿಗೆ ಹಿನ್ನೆಲೆ ವಿಷ್ಣುಸ್ಮರಣೆ ಎಂದು ತಿಳಿದ ವಿಷ್ಣುದೂತರಿಗೆ ಸಂತೋಷವಾಯಿತು. ಭಗವದ್ಭಕ್ತರ ಮಹಾಮಹಿಮೆಯನ್ನು ಕಂಡು ರೋಮಾಂಚಿತರಾದರು. ಯಮಭಟರಿಗೆ ಹೇಳಿದರು. ಅದು ಹೇಳಿಕೆಯಂತಿರಲಿಲ್ಲ. ಆಜ್ಞಾರೂಪವಾಗಿತ್ತು. ಈ ಬಂಧನದಿಂದ ಇವನು ಮುಕ್ತನಾಗಬೇಕು. ಇವನು ಪುಣ್ಯಪುರುಷ. ಶ್ರೀಹರಿಗೆ ಪ್ರಿಯನಾದವನು. ಸರ್ವಥಾ ಇವನನ್ನು ಬಿಡಲೇಬೇಕೆಂದು ಹಠ ಹಿಡಿದರು ವಿಷ್ಣುದೂತರು.

ವಿಷ್ಣುದೂತರ ಈ ಮಾತುಗಳು ಯಮದೂತರಿಗೆ ರುಚಿಸಲಿಲ್ಲ. ಹೀಗಾಗಿ ಬಂಧನದಿಂದ ಮುಕ್ತಗೊಳಿಸಲಿಲ್ಲ. ವಿಷ್ಣುದೂತರ ಜೊತೆ ಯುದ್ಧಕ್ಕೆ ತಯಾರಾದರು. ಪರಸ್ಪರವಾಗಿ ಯುದ್ಧ ಮಾಡಿದರು. ಬಹಳ ಕಾಲ ಯುದ್ಧವಾಯಿತು. ಅವರ ಯುದ್ಧ ರೋಮಾಂಚಕವಾಗಿತ್ತು. ಆ ಯುದ್ಧದಲ್ಲಿ ಯಮದೂತರು ಸೋತುಬಿಟ್ಟರು.

ಯಮದೂತರು ನಿರಾಶರಾದರು. ಯಮನ ಲೋಕಕ್ಕೆ ತೆರಳಿದರು. ನಡೆದ ಘಟನೆಯನ್ನೆಲ್ಲ ಯಮನ ಮುಂದೆ ವಿಜ್ಞಾಪಿಸಿಕೊಂಡರು. ಯಮ ಸಭೆಯಲ್ಲಿ

ಆಸೀನನಾಗಿದ್ದ. ಈ ವೃತ್ತಾಂತವನ್ನು ಕೇಳಿದ. ಕ್ರುದ್ಧನಾದ. ಚಿತ್ರಗುಪ್ತನನ್ನು ಕರೆದ. ಪೌಂಡ್ರಕನು ಆಚರಿಸಿದ ಕರ್ಮಗಳ ಬಗ್ಗೆ ವಿವರ ಬೇಕೆಂದ. ಚಿತ್ರಗುಪ್ತ ತಾನು ಬರೆದದ್ದನ್ನು ಗಮನಿಸಿ ನೋಡಿದ. ಯಾವ ಮೂಲೆಯಲ್ಲಿಯೂ ಪೌಂಡ್ರಕ ಮಾಡಿದ ಪುಣ್ಯಕರ್ಮದ ವಿವರವಿರಲಿಲ್ಲ. ಪರಮಾಣುವಿನಷ್ಟು ಪುಣ್ಯಕರ್ಮ ಅಲ್ಲಿ ಕಾಣಲಿಲ್ಲ. ಚಿತ್ರಗುಪ್ತನ ಬುದ್ಧಿ ಅತೀವ ಸೂಕ್ಷ್ಮವಾದದ್ದು. ಯಾವುದನ್ನೂ ಎರಡನೇ ಬಾರಿ ನೋಡುವ ಕಾರಣವೇ ಇರಲಿಲ್ಲ. ಆದರೂ ಮತ್ತೆ ಮತ್ತೆ ಹುಡುಕಿ ನೋಡಿದ. ಎಲ್ಲಿಯೂ ಸಣ್ಣ ಪುಣ್ಯಕರ್ಮವೂ ಕಾಣಲಿಲ್ಲ. ಅದನ್ನೇ ಯಮನಿಗೆ ಹೇಳಿದ.

ಯಮನೂ ಸಾಕಷ್ಟು ವಿಚಾರಿಸಿದ. ಪೌಂಡ್ರಕನು ಮಾಡಿದ ಯಾವ ಸತ್ಕರ್ಮದಿಂದ ಅವನಿಗೆ ಸದ್ಗತಿಯಾಗಿದೆ? ಯಾಕೋ ಇದು ಅತ್ಯಾಶ್ಚರ್ಯವೆನಿಸಿತು. ತನ್ನಲ್ಲೇ ಹೇಳಿಕೊಂಡ. ದುಷ್ಕರ್ಮಮಾಡಿದವರೆಲ್ಲರೂ ಹೀಗೆ ಸ್ವರ್ಗಕ್ಕೆ, ವೈಕುಂಠಕ್ಕೆ ತೆರಳುವುದಾದರೆ, ನಾನೇಕೆ? ನನ್ನ ಈ ಕೆಲಸವೇಕೆ? ಈ ಕೆಲಸದಲ್ಲಿ ನನಗೆ ಅಧಿಕಾರವೇಕೆ? ಯಮ ಮಾಡಿದ ವಿಚಾರಕ್ಕೆ ಚಿತ್ರಗುಪ್ತಾದಿಗಳೆಲ್ಲರೂ ಸ್ಪಂದಿಸಿದರು. ಅನುಮೋದಿಸಿದರು. ಶ್ರೀಹರಿಯನ್ನೇ ಕಂಡು ಇತ್ಯರ್ಥ ಮಾಡಿಕೊಳ್ಳಬೇಕೆಂದು-ಕೊಂಡರು. ಎಲ್ಲರೂ ಸೇರಿ ವಿಷ್ಣುಲೋಕಕ್ಕೆ ಹೊರಟರು.

ಸರ್ವಜನರಿಂದ ನಮಸ್ಕೃತವಾದದ್ದು ವಿಷ್ಣುಲೋಕ. ಸುಖೀಪುರುಷರ ವಾಸಸ್ಥಾನವದು. ನಾನಾವಿಧರಾದ ಸ್ತ್ರೀಯರು ಅಲ್ಲಿ ನೆರೆದಿದ್ದರು. ಪಾರಿಜಾತವೃಕ್ಷದ ನೆರಳಲ್ಲಿ ಸುಗಂಧಭರಿತವಾದ ವಾತಾವರಣದಲ್ಲಿ ದೇವತಾಸಮೂಹವೆಲ್ಲ ನೆರೆದಿತ್ತು. ಸುಖವಾಗಿ ಶ್ರೀಹರಿಯ ಗಾನವನ್ನು ಮಾಡುತ್ತಾ ಮಗ್ನರಾಗಿದ್ದರು. ದೇವರ ಅಂತಃಪುರವನ್ನು ಪ್ರವೇಶಿಸಿದ. ರಮಾದಿದೇವತೆಗಳೆಲ್ಲ ಶ್ರೀಹರಿಯನ್ನು ಮುದದಿಂದ ಸೇವಿಸುತ್ತಿದ್ದರು. ಶ್ರಿಹರಿಯನ್ನು ನಮಸ್ಕರಿಸಿದ. ಚಿತ್ರಗುಪ್ತಾದಿಗಳೆಲ್ಲರೂ ದೇವರಿಗೆ ಸಾಷ್ಟಾಂಗವೆರಗಿದರು. ನಂತರ ಯಮ ಈ ರೀತಿಯಾಗಿ ಸ್ತುತಿಸಿದ.

ಬಯಸಿದ ಪದಾರ್ಥಗಳನ್ನೆಲ್ಲ ಭಕ್ತರಿಗೆ ನೀಡುವ ದೊರೆ ನೀನು. ಎಲ್ಲ ವೇದಗಳಿಂದ ಪ್ರತಿಪಾದ್ಯನಾಗಿರುವಿ. ನಿನ್ನನ್ನು ನೋಡಿಯೇ ಕಲ್ಪವೃಕ್ಷವು ಕೊಡುವುದನ್ನು ಕಲಿತಿದೆ. ನಿನ್ನನ್ನೇ ಅನುಕರಿಸುತ್ತಿದೆ. ನೀನು ಸರ್ವೋತ್ತಮನಾಗಿರುವಿ. ನಿನ್ನ ಆವಾಸಸ್ಥಾನಕ್ಕೆ ಎಂದಿಗೂ ನಾಶವಿಲ್ಲ. ಹೀಗಿರುವಾಗ ನಿನಗೆ ನಾಶವೇ? ಸರ್ವಥಾ ಸಾಧ್ಯವಿಲ್ಲ. ಎಲ್ಲ ಜನರನ್ನು ರಕ್ಷಿಸುವುದು ನಿನಗೆ ಅತಿ ಪ್ರೀತಿಯ ಕಾರ್ಯ. ಎಲ್ಲ ಪದಾರ್ಥಗಳ ರೂಪ ನಿನಗಿದೆ. ಆದರೇ ಅವುಗಳ ಗುಣ-ಧರ್ಮಗಳು ಮಾತ್ರ

ನಿನಗಿಲ್ಲ. ನಿನ್ನ ಆನಂದ ನಿತ್ಯ. ಎಲ್ಲ ಜೀವರಾಶಿಗಳಿಗೆ ಸಾಧನಶರೀರವನ್ನು ನೀಡಿ ಅವರನ್ನು ಸಂರಕ್ಷಿಸುವ ದೊರೆ ನೀನು. ಇಂದ್ರಾದಿದೇವತೆಗಳು ನಿನ್ನನ್ನೇ ಪ್ರಧಾನ ಎಂದು ಸ್ತುತಿಸುತ್ತಾರೆ. ನಿನ್ನನ್ನೇ ಅನನ್ಯವಾಗಿ ನಿತ್ಯವೂ ಸೇವಿಸುತ್ತಾರೆ. ನಿನ್ನ ವೈಭವವನ್ನು ಚಿಂತಿಸಿದವನಿಗೆ ನಿತ್ಯಸುಖವೈಭವ. ನಿನ್ನ ವೈಭವವನ್ನು ಮರೆತವರಿಗೆ ನಿತ್ಯವೂ ಭವ. ನನ್ನಲ್ಲಿ ಕರುಣೆ ಇರಲಿ. ರಮಾನಾಥನಾದ ಪರಮಾತ್ಮನನ್ನು ಈ ರೀತಿಯಾಗಿ ಸ್ತುತಿಸಿದ ಯಮ. ಸಾಷ್ಟಾಂಗನಮಸ್ಕಾರ ಮಾಡಿದ.

ಯಮ ವಿನೀತನಾಗಿ ತಾನು ಬಂದ ಕಾರಣವನ್ನು ಹೇಳಿದ. ಸ್ವಾಮಿನ್ ! ನನ್ನ ಅಧಿಕಾರವೆಲ್ಲ ವ್ಯರ್ಥವಾಗುತ್ತಿದೆ. ಪಾಪಿಗಳನ್ನು ಶಿಕ್ಷಿಸುವುದು ನನ್ನ ಕೆಲಸ. ಈ ಕೆಲಸದಲ್ಲಿ ಇದ್ದಾದರೂ ನಾನೇನು ಮಾಡಲಿ? ಈ ಕೆಲಸವನ್ನು ನಾನು ಪರಿತ್ಯಜಿಸುತ್ತೇನೆ. ಈ ಧಾರ್ಷ್ಟ್ಯಕ್ಕೆ ಕ್ಷಮೆ ಇರಲಿ.

ಪಾಪಾತ್ಮರು, ದುಷ್ಕರ್ಮಿಗಳು, ಕೃತಘ್ನರು ಇವರಿಗೆಲ್ಲ ಸದ್ಗತಿಯಾಗುತ್ತದೆಂದಾದರೆ ನರಕವೇಕೆ? ಅದಕ್ಕೆ ನಿಯಾಮಕನಾಗಿ ನಾನೇಕೆ? ದುಷ್ಕರ್ಮಿಗಳನ್ನು ಶಿಕ್ಷಿಸುವ ಅಧಿಕಾರವನ್ನು ನೀನೇ ನನಗೆ ನೀಡಿರುವಿ. ಆದರೆ ಈ ಕಾರ್ಯ ವಿಫಲವಾಗುತ್ತಿದೆ. ಇವತ್ತು ಪೌಂಡ್ರಕನೆಂಬ ಮಹಾಪಾಪಿ ಸದ್ಗತಿಯನ್ನು ಪಡೆದಿದ್ದಾನೆ. ಅವನು ಮಾಡದ ಪಾಪವೇ ಇಲ್ಲ. ಮಾಡಿದ ಪುಣ್ಯಲೇಶವೂ ಇಲ್ಲ. ಅವನನ್ನು ನನ್ನ ದೂತರು ಎಳೆದು ತರುತ್ತಿದ್ದರು. ಅವನಿಗೆ ರೌರವಾದಿ ನರಕಗಳಾಗಬೇಕಿತ್ತು. ಅವನನ್ನು ನಿನ್ನ ದೂತರು ನಿನ್ನ ಲೋಕಕ್ಕೆ ಕರೆದೊಯ್ದಿದ್ದಾರೆ. ಅವನಿಗೆ ಈಗ ಸದ್ಗತಿಯಾಗಿದೆ. ಪುಣ್ಯಲೋಕದಲ್ಲಿ ಅವನೀಗ ಸುಖಿಸುತ್ತಿದ್ದಾನೆ. ಅದಕ್ಕಾಗಿ ನಾನು ಈ ಕೆಲಸವನ್ನು ಬಿಡುತ್ತೇನೆ. ನನ್ನನ್ನು ಕ್ಷಮಿಸು.

ಪ್ರೀತಿಯಿಂದ ದೇವರು ಹೇಳಿದ. ಮಗೂ ಯಮ ! ಇಲ್ಲಿ ನೋಡು. ನಾನು ಹೇಳುವ ಈ ಮಾತನ್ನು ಆಲಿಸು. ಈ ಪೌಂಡ್ರಕ ಕಿರಾತ. ಮಹಾಪಾಪಿ. ಈ ವಿಷಯದಲ್ಲಿ ಸರ್ವಥಾ ಸಂದೇಹವಿಲ್ಲ. ಇವನು ಮಾಡದ ಪಾಪವಿಲ್ಲ. ಯಾವ ಪುಣ್ಯವನ್ನೂ ಸಂಪಾದಿಸಿಲ್ಲ. ಇವನಿಗೆ ನರಕಾದ್ಯನರ್ಥಗಳು ಆಗಲೇ ಬೇಕು. ಆದರೂ ದೈವಯೋಗದಿಂದ ಅವನು ಒಂದು ಪುಣ್ಯಕರ್ಮವನ್ನು ಮಾಡಿದ್ದಾನೆ. ಅಂತಕಾಲದಲ್ಲಿ ತುಲಸೀವನಸ್ಪೃಷ್ಟವಾದ ಗಾಳಿ ಅವನಿಗೆ ತಗುಲಿದೆ. ಆ ವಾಯುಸ್ಪರ್ಶದಿಂದ ನನ್ನ ನೆನಪಾಗಿದೆ. ಆರ್ತಿಯಿಂದ ನನ್ನನ್ನು ಸ್ಮರಿಸಿದ್ದಾನೆ. ಹೀಗಾಗಿ ಅವನು ಪುನೀತನಾಗಿದ್ದಾನೆ. ಇಷ್ಟೇ ಅಲ್ಲದೇ ಪಶ್ಚಾತ್ತಾಪದಿಂದ ಬೆಂದಿದ್ದಾನೆ. ಅವನ

ಪಾಪಗಳೆಲ್ಲ ಭಸ್ಮವಾಗಿ ಹೋಗಿವೆ. ಪ್ರಾಚೀನಪುಣ್ಯದಿಂದ ಅವನೀಗ ಪುಣ್ಯಲೋಕದಲ್ಲಿದ್ದಾನೆ.

ರಹಸ್ಯವಾದ ವಿಷಯವನ್ನೊಂದು ನಿನಗೆ ತಿಳಿಸುತ್ತೇನೆ. ಸಾವಧಾನಚಿತ್ತನಾಗಿ ಕೇಳು. ತುಲಸಿಯ ಶ್ರವಣ, ತುಲಸೀಸ್ಮರಣ, ತುಲಸೀಮಹಿಮೆಯ ಕೀರ್ತನ, ಇದು ಪಾಪಪರಿಹಾರಕವಾಗಿದೆ. ತುಲಸಿಯನ್ನು ಭಕ್ಷಿಸಿದರಂತೂ ಪರಿಹಾರವಾಗದ ಪಾಪವೇ ಇಲ್ಲ. ತುಲಸೀವಾಯು ಪ್ರವಹಿಸುವ ಪ್ರದೇಶದಲ್ಲಿ ಯಾರು ವಾಸಿಸುತ್ತಾರೋ ಅವರು ಕೂಡಾ ಪಾಪಮುಕ್ತರಾಗುತ್ತಾರೆ. ಎಲ್ಲ ಮನುಷ್ಯರೂ ನಿಷ್ಪಾಪರಾಗುತ್ತಾರೆ.

ಮನುಷ್ಯಜನ್ಮ ಬಹುದುರ್ಲಭ. ಅದನ್ನು ಪಡೆದವರು ತುಲಸಿಯ ಸೇವೆಯನ್ನು ಮಾಡಲೇಬೇಕು. ತುಲಸಿಯನ್ನು ಸೇವಿಸದ ಜನರ ಜನ್ಮ ವ್ಯರ್ಥ. ಅವನಿಗೂ, ಗಿಡಗಳಿಗೂ, ಜಡಕ್ಕೂ ಯಾವ ವಿಶೇಷವೂ ಇಲ್ಲ.

ಹೀಗಾಗಿ ತುಲಸೀವಾಯುಸ್ಪೃಷ್ಟನಾದ ಮನುಷ್ಯನನ್ನು ನಿನ್ನ ಭಟರು ಮುಟ್ಟಕೂಡದು. ಇನ್ನು ಮೇಲೆ ಈ ಮಾತನ್ನು ನೆನಪಿಡು. ತುಲಸೀಸ್ಮರಣೆ ಮಾಡುವವರು, ತುಲಸೀಪತ್ರವನ್ನು ಭಕ್ಷಿಸುವವರು, ತುಲಸಿಯನ್ನು ಬೆಳೆಸುವವರು, ತುಲಸೀಮಾಲೆಯನ್ನು ಧರಿಸುವವರು, ಇವರನ್ನು ನಿನ್ನ ಭಟರು ಮುಟ್ಟಬಾರದು. ಇವರನ್ನು ಬಿಟ್ಟು ಉಳಿದ ಪಾಪಿಗಳನ್ನು ನೀನು ದಂಡಿಸು. ಈ ಕೆಲಸಕ್ಕೆ ಸಮರ್ಥನಾದವನು ನೀನು ಮಾತ್ರ.

ಯಾರು ತುಲಸೀವಾಯುಸ್ಪೃಷ್ಟರಾಗಿರುವರೋ ಅವರು ಜನ್ಮಪ್ರಭೃತಿ ಪಾಪಗಳನ್ನು ಮಾಡಿದ್ದರೂ ಆ ಎಲ್ಲ ಪಾಪಗಳು ದೂರವಾಗುತ್ತವೆ. ತುಲಸಿಯನ್ನು ನೋಡಿ ಯಾರು ನಮಸ್ಕರಿಸುವುದಿಲ್ಲವೋ, ಯಾರು ತುಲಸಿಯನ್ನು ಅರ್ಚಿಸುವುದಿಲ್ಲವೋ ಅಂತಹ ಪಾಪಿಯನ್ನು ನೀನು ಶಿಕ್ಷಿಸು. ತುಲಸಿಯನ್ನು ಸ್ತೋತ್ರಮಾಡುವಾಗ ಯಾರು ನಿಂದಿಸುತ್ತಾರೋ ಅಂಥವನನ್ನು ಎಳೆದು ತಾ. ತುಲಸೀಮೃತ್ತಿಕೆಯನ್ನು ಯಾರು ಕಾಲಿನಿಂದ ದಾಟಿ ಹೋಗುತ್ತಾರೋ, ದುಷ್ಕರ್ಮನಿರತರಾಗಿರುವರೋ ಅಂಥವರನ್ನು ಎಳೆದು ತಾ. ಆದ್ದರಿಂದ ಹೇ ಯಮ ! ನಿನ್ನ ಲೋಕಕ್ಕೆ ಹೋಗು. ನೀನು ಮಾಡುವ ಸೇವೆಯಿಂದ ನಾನು ಮೆಚ್ಚಿದ್ದೇನೆ. ನನ್ನ ಆಜ್ಞೆಯನ್ನು ಚೊಕ್ಕವಾಗಿ ಪಾಲಿಸುತ್ತಿದ್ದಿ. ಇನ್ನು ಮೇಲೂ ಹೀಗೆಯೇ ಪಾಲಿಸು. ಇದು ನೀನು ಮಾಡುವ ಪೂಜೆ. ಈ ಪೂಜೆಯನ್ನೇ ನಾನು ಸ್ವೀಕರಿಸುತ್ತೇನೆ. ಇದೇ ಪೂಜೆಯನ್ನೇ ನಾನು ನಿರೀಕ್ಷಿಸುತ್ತೇನೆ. ನಿನ್ನಲ್ಲಿ ನಾನು ಪ್ರೀತನಾಗಿದ್ದೇನೆ ಎಂದು ಹೇಳಿದ ಪರಮಾತ್ಮ.

ಈ ರೀತಿಯಾಗಿ ಯಮನನ್ನು ಸಮಾಧಾನ ಪಡಿಸಿದ ಪರಮಾತ್ಮ. ಯಮನನ್ನು ಅವನ ಲೋಕಕ್ಕೆ ಕಳಿಸಿದ. ಯಮನೂ ತನ್ನ ನಗರಕ್ಕೆ ತೆರಳಿದ. ಹಿಂದಿನಂತೆಯೇ ಕೆಲಸದಲ್ಲಿ ನಿಮಗ್ನನಾದ.

ತುಲಸೀಸೇವೆಯಿಂದ ದುರಾಚಾರಿಗಳೂ ಪಾಪಗಳಿಂದ ಮುಕ್ತರಾಗುತ್ತಾರೆ. ಸಜ್ಜನರು ವಿಶಿಷ್ಟವಾದ ಪುಣ್ಯವನ್ನು ಸಂಪಾದಿಸುತ್ತಾರೆ. ಆದ್ದರಿಂದ ತುಲಸೀಪೂಜೆಯನ್ನು ಕಡ್ಡಾಯವಾಗಿ ಪಾಲಿಸಬೇಕು. ಇತಿ ಸ್ಕಂದಪುರಾಣ ಉವಾಚ.

★★★★★

## ೭. ತುಲಸೀಸೇವೆ ಪಾಪಪರಿಹಾರಕ

ದೇವರ ಅರ್ಚನೆಯ ಉದ್ದೇಶದಿಂದ ತುಲಸಿಯನ್ನು ನೆಡಬೇಕು. ಅಂಥವನು ಮಾಡಿದ ಅತಿಘೋರವಾದ ಪಾಪಗಳೆಲ್ಲವೂ ಭಸ್ಮವಾಗಿಹೋಗುತ್ತವೆ. ಪ್ರಹ್ಲಾದ ಹೇಳಿದ ಮತ್ತೊಂದು ರೋಚಕವಾದ ಇತಿಹಾಸ ಈ ರೀತಿಯಾಗಿದೆ.

ಅದು ಕೈಲಾಸಶಿಖರ. ಪಾರ್ವತೀ-ಪರಮೇಶ್ವರರ ವಿಹಾರಸ್ಥಾನ. ವಾಸಭೂಮಿ. ಚಿತ್ರ-ವಿಚಿತ್ರವಾದ ಧಾತುಗಳಿಂದ ವಿರಾಜಿತವಾದ ಭೂಮಿ. ಪುಣ್ಯಮಯವಾದ ಪ್ರಾಣಿಗಳು, ಪುಣ್ಯಮಯವಾದ ಪಕ್ಷಿಗಳು, ಪುಣ್ಯಮಯವಾದ ವೃಕ್ಷ-ಲತಾ-ಗುಲ್ಮಗಳು ಅಲ್ಲಿ ಹೇರಳವಾಗಿವೆ. ಎಲ್ಲಿ ನೋಡಿದರೂ ದೇವರ ಸ್ಮರಣೆಯಾಗದೇ ಇರದು. ಅಲ್ಲಿಯ ಪರಮಾಣುವೂ ಶ್ರೀಹರಿಯ ಪ್ರತಿಮೆ. ಅಣುವಣುವೂ ವೈಷ್ಣವ.

ಅಲ್ಲಿಯ ಉದ್ಯಾನವನ್ನು ನೋಡುವ ಕೌತುಕವಾಯಿತು ಪಾರ್ವತೀಪ್ರಿಯನಿಗೆ. ಅತಿರಮಣೀಯವಾದ ವನದಲ್ಲಿ ಪ್ರವೇಶಮಾಡಿದ. ಎಲ್ಲ ಕಡೆಗೂ ದೇವರನ್ನು ನೋಡಿದರು. ಕಣ್ಣೋಟದಿಂದಲೇ ದೇವರನ್ನು ಪೂಜಿಸಿದರು. ಪ್ರಸನ್ನವದನರಾಗಿದ್ದರು.

ಆ ವನದಲ್ಲಿ ಮಾಧವೀ ಎಂಬ ಹೆಸರಿನ ಮಂಟಪವಿತ್ತು. ಅಲ್ಲಿಯ ಅತಿಪ್ರಶಸ್ತವಾದ ಆಸನದಲ್ಲಿ ಕುಳಿತರು. ಅಷ್ಟರಲ್ಲಿ ಪಾರ್ವತಿಯು ಹಿಂದಿನಿಂದ ಬಂದಳು. ಶಬ್ದಮಾಡದೇ ಸಾವಕಾಶವಾಗಿ ಬಂದಳು. ಲೀಲೆಯಿಂದ ರುದ್ರದೇವರ ಎರಡು ಕಣ್ಣುಗಳನ್ನು ಮುಚ್ಚಿದಳು. ವಿನೋದಕ್ಕಾಗಿ ಈ ಕಾರ್ಯವನ್ನು ಮಾಡಿದಳು. ಲೋಕವನ್ನು ಬೆಳಗುವ ಚಂದ್ರ-ಸೂರ್ಯರು ರುದ್ರದೇವರ ಕಣ್ಣುಗಳಲ್ಲಿ ಇರುತ್ತಾರೆ. ರುದ್ರದೇವರ ಸೇವೆಯನ್ನು ಮಾಡುತ್ತಿರುತ್ತಾರೆ. ರುದ್ರದೇವರ ಕಣ್ಣುಗಳನ್ನು

ಮುಚ್ಚುವುದರಿಂದ ಸೂರ್ಯ-ಚಂದ್ರರನ್ನೇ ಮುಚ್ಚಿದ ಹಾಗಾಯಿತು. ಸೂರ್ಯ-ಚಂದ್ರರ ಮಂಡಲವೆಲ್ಲ ಆವೃತವಾಯಿತು. ಕ್ಷಣದಲ್ಲಿಯೇ ಲೋಕವೆಲ್ಲ ಅಂಧಕಾರಮಯವಾಯಿತು. ಎಲ್ಲ ಕರ್ಮಗಳೂ ನಷ್ಟವಾದವು. ಜಗತ್ತೆಲ್ಲ ಸ್ವಾಧ್ಯಾಯರಹಿತವಾಯಿತು. ಪಕ್ಷಿ-ಪಶುಗಳೆಲ್ಲ ಅಸುವನ್ನು ನೀಗಿದವು. ಸಜ್ಜನರೆಲ್ಲ ಸತ್ಕರ್ಮರಹಿತರಾದರು. ಒಟ್ಟಾರೆ ಇದೊಂದು ರೀತಿಯಾದ ವಿಚಿತ್ರವಾದ ಬರಗಾಲವೇ ಎದುರಾಯಿತು. ಎಲ್ಲ ಇದ್ದರೂ ಬರಗಾಲ. ಹೀಗೆ ಆರು ಯುಗಗಳು ಕಳೆದವು. ಇದು ಪಾರ್ವತಿಗೆ ಕ್ಷಣವಾಯಿತು.

ರುದ್ರದೇವರು ಮಹಾನುಭಾವರು. ಜ್ಞಾನದೃಷ್ಟಿಯಿಂದ ಇದನ್ನೆಲ್ಲ ನೋಡಿದರು. ತಮ್ಮ ಮೂರನೆಯ ನೇತ್ರವನ್ನು ತೆಗೆದರು. ಇದರಿಂದ ಜಗತ್ತು ನೆಮ್ಮದಿಯ ನಿಟ್ಟುಸಿರು ಬಿಟ್ಟಿತು. ಮೂರನೆಯ ಕಣ್ಣು ತೆರೆದದ್ದು ಪಾರ್ವತಿದೇವಿಗೆ ಗೊತ್ತಾಯಿತು. ತನ್ನ ಎರಡು ಕೈಗಳನ್ನು ತೆಗೆದಳು. ತಲೆ ತಗ್ಗಿಸಿದಳು. ರುದ್ರದೇವರ ಪಕ್ಕದಲ್ಲಿ ನಿಂತಳು. ವಿನೀತಳಾಗಿ ನಿಂತಿರುವ ಪಾರ್ವತೀದೇವಿಯನ್ನು ನೋಡಿ ರುದ್ರದೇವರು ಮಾತನಾಡಿದರು.

ಗಿರಿಜೇ ! ನೀನು ಬಹಳ ತಪ್ಪು ಕೆಲಸವನ್ನು ಮಾಡಿದಿ. ನಿನ್ನ ಈ ಚೇಷ್ಟೆಯಿಂದ ಇಡಿಯ ಪ್ರಪಂಚಕ್ಕೆ ಕಷ್ಟವಾಗಿದೆ. ನನ್ನ ಕಣ್ಣುಗಳನ್ನು ಮುಚ್ಚುತ್ತಾ ಸೂರ್ಯ-ಚಂದ್ರರನ್ನೇ ಮುಚ್ಚಿ ಹಾಕಿರುವಿ. ನಿನಗೆ ಕ್ಷಣವಾಗಿರಬಹುದು. ಆದರೆ ಭೂಮಿಯಲ್ಲಿ ಈಗ ಆರು ಯುಗಗಳು ಕಳೆದುಹೋಗಿವೆ. ನಿನ್ನ ಈ ಕಾರ್ಯದಿಂದ ಎಲ್ಲ ಜನರಿಗೆ ತೊಂದರೆಯಾಗಿದೆ. ಸತ್ಕರ್ಮಗಳಿಗೆ ಹಾನಿಯುಂಟಾಗಿದೆ. ಅನೇಕ ಜನರು ಮೃತರಾಗಿದ್ದಾರೆ. ಸಜ್ಜನರು ಪೀಡಿತರಾಗಿದ್ದಾರೆ. ನಿನ್ನಿಂದ ಪಾಪವು ಘಟಿಸಿದೆ. ಪಾಪಕ್ಕೆ ಸರಿಯಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಪ್ರಾಯಶ್ಚಿತ್ತವಿಲ್ಲದೇ ಪಾಪವು ನಷ್ಟವಾಗಲು ಸಾಧ್ಯವಿಲ್ಲ. ಎಂದಿಗೂ ಅದು ಸಾಧ್ಯವಾಗದು.

ನಾವು ಹಿರಿಯರಾಗಿರಬಹುದು. ದೇವತೆಗಳಾಗಿರಬಹುದು. ಇದು ನಿನ್ನಂಥವಳಿಗೆ ಪಾಪವೂ ಆಗದಿರಬಹುದು. ಆದರೆ ಲೌಕಿಕವಾಗಿ ಇದೊಂದು ತಪ್ಪು. ಕಿರಿಯರು ತಪ್ಪಿದರೆ ಬಹಳ ತೊಂದರೆ ಇಲ್ಲ. ಹಿರಿಯರು ತಪ್ಪುವುದೆಂದರೆ ಕಿರಿಯರನ್ನು ತಪ್ಪುದಾರಿಗೆ ಎಳೆಯುವುದೆಂದೇ ಅರ್ಥ. ಆದ್ದರಿಂದ ಪ್ರಾಯಶ್ಚಿತ್ತವನ್ನು ನೀನು ಮಾಡಿಕೋ.

ರುದ್ರದೇವರ ಮಾತುಗಳನ್ನು ಕೇಳಿ ಪಾರ್ವತಿಯು ನಡುಗಿಹೋದಳು. ಅವಳ ಭಯ ಪ್ರಾಯಶ್ಚಿತ್ತಕ್ಕಾಗಿ ಅಲ್ಲ. ಎಷ್ಟೆಲ್ಲ ಜನರಿಗೆ ನನ್ನ ಈ ಚೇಷ್ಟೆಯು ಮಾರಕವಾಯಿತೆಂದು ನೊಂದು ಭಯಪಟ್ಟಿದ್ದಳು. ಅವಳ ನಾಲಿಗೆ ಒಣಗಿಹೋಯಿತು. ಮುಖ ಬಾಡಿಹೋಯಿತು. ತಿಳಿಯದೇ ನಾನೇನು ಮಾಡಿಬಿಟ್ಟೆ ಎಂದು ನೊಂದಳು. ನಾನೇನು ಮಾಡಬೇಕು. ಇದಕ್ಕೆ ಪ್ರಾಯಶ್ಚಿತ್ತವೇನು ಎಂದು ಕೇಳಿದಳು. ಪ್ರಾಯಶ್ಚಿತ್ತವನ್ನು ಹೇಳಿ ನನ್ನನ್ನು ಕೃತಾರ್ಥರನ್ನಾಗಿ ಮಾಡಿರಿ. ನೀವು ಪ್ರಸನ್ನರಾಗಿರಿ ಎಂದು ಅಂಗಲಾಚಿದಳು.

ರುದ್ರದೇವರು ಪ್ರತಿಯಾಗಿ ನುಡಿದರು. ನಿನ್ನ ಮೇಲಿನ ದಯೆಯಿಂದ ಇದಕ್ಕೆ ತಕ್ಕುದಾದ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ ಕೇಳು. ನೀನು ಸ್ವಯಂ ಕಲ್ಯಾಣಿಯಾಗಿರುವಿ. ಯಾರಿಗೂ ಕೇಡು ಮಾಡುವ ಸ್ವಭಾವ ನಿನ್ನದಲ್ಲ. ದೇವರ ಇಚ್ಛೆಯಂತೆ, ಜನರ ಪ್ರಾರಬ್ಧದಂತೆ ಈ ಘಟನೆ ನಡೆದುಹೋಗಿದೆ. ಆದಕ್ಕೆ ನಿನ್ನ ಈ ಚೇಷ್ಟೆ ನಿಮಿತ್ತವಾಗಿದೆ ಆಷ್ಟೇ. ಪ್ರಾಣಿವಧಕ್ಕೆ ತಕ್ಕುದಾದ ಪ್ರಾಯಶ್ಚಿತ್ತವೆಂದರೇ ಅದು ತುಲಸೀಸೇವೆ.

ತುಲಸಿಯು ದೇವರ ಪ್ರತಿಮೆಯಾಗಿದ್ದಾಳೆ. ಲಕ್ಷ್ಮೀದೇವಿಯೂ ಅಲ್ಲಿ ಇದ್ದಾಳೆ. ಭಕ್ತಿಯುಕ್ತವಾದ ಮನಸ್ಸಿನಿಂದ ತುಲಸಿಯನ್ನು ಪೂಜಿಸಬೇಕು. ತುಲಸಿಯಲ್ಲಿ ನೀನು ದೇವರನ್ನು ಕಾಣಬೇಕು. ಈ ಪೂಜೆ ಎಲ್ಲ ವಿಧವಾದ ಪಾಪಗಳನ್ನು ಭಸ್ಮಮಾಡುತ್ತದೆ. ಕರ್ಮಭೂಮಿಯಾದ ಭಾರತಕ್ಕೆ ನೀನೀಗ ಹೋಗಬೇಕು. ಅಲ್ಲಿ ಮಾಡಿದ ಕರ್ಮಗಳು ತಾರಕವಾಗುತ್ತವೆ. ಭಾರತದಲ್ಲಿ ಸತ್ಯವ್ರತಕ್ಷೇತ್ರವೆಂದೇ ಪ್ರಸಿದ್ಧವಾದ ಕಂಚಿಯು ಇದೆ. ಕ ಎಂದರೆ ಬ್ರಹ್ಮದೇವರು. ನನ್ನನ್ನು ಹಡೆದ ತಂದೆ. ಅವರು ಅಲ್ಲಿಯೇ ಇದ್ದು ಅಂಚನ ಅರ್ಥಾತ್ ಪೂಜನ ಮಾಡಿದ್ದಾರೆ ಆದ್ದರಿಂದ ಅದಕ್ಕೆ ಕಂಚೀ ಎಂದು ನಾಮವಾಗಿದೆ. ಸರ್ವಾರ್ಥಪ್ರದವಾದ ಕ್ಷೇತ್ರವದು. ಸಾಕ್ಷಾತ್ ರಮಾಪತಿಯಾದ ವರದರಾಜನು ಸನ್ನಿಹಿತನಾಗಿದ್ದಾನೆ. ಆ ವರದರಾಜನ ಸನ್ನಿಧಾನದಲ್ಲಿ ತುಲಸೀವನವನ್ನು ನೀನು ನಿರ್ಮಾಣಮಾಡು.

ಮನಸ್ಸನ್ನು ವಶದಲ್ಲಿಟ್ಟುಕೋ. ಆ ವನದಲ್ಲಿ ತುಲಸಿಯನ್ನು ಸೇವಿಸು. ಅಲ್ಲಿಯೇ ಒಂದು ಮಾವಿನಮರವಿದೆ. ಯಾವಾಗಲೂ ಫಲ-ಪುಷ್ಪಗಳಿಂದ ಪರಿಶೋಭಿತವಾದ ಪುಣ್ಯವೃಕ್ಷ. ಅದರ ಮೂಲದಲ್ಲಿ ಉಸುಕಿನಿಂದ ಲಿಂಗವನ್ನು ಪ್ರತಿಷ್ಠಾಪನ ಮಾಡು. ನನ್ನನ್ನು ಪೂಜಿಸು. ಸ್ತ್ರೀಯರು ಪತಿಯಲ್ಲಿಯೇ ಪರಮಾತ್ಮನನ್ನು ಕಾಣಬೇಕು. ಪರಮಾತ್ಮನ ಪ್ರತಿಮೆಯಾಗಿದ್ದಾನೆ ಪತಿ ಎಂಬ ಭಾವನೆಯೇ ಮಹಿಳೆಯರಿಗೆ

ತಾರಕವಾಗುತ್ತದೆ. ನನ್ನಲ್ಲಿಯ ದೇವರನ್ನು ಪೂಜಿಸು. ಆ ಲಿಂಗ ಓಂಕಾರನಾಥ ಎಂದೇ ಪ್ರಸಿದ್ಧವಾಗುತ್ತದೆ. ಆ ಲಿಂಗದಲ್ಲಿ ಓಂಕಾರವಾಚ್ಯನಾದ ಪರಮಾತ್ಮನೇ ಇರುತ್ತಾನೆ. ತುಲಸೀಪತ್ರಗಳಿಂದ ನಿತ್ಯವೂ ಓಂಕಾರೇಶ್ವರನಾದ ಪರಮಾತ್ಮನನ್ನು ನನ್ನ ಅಂತರ್ಯಾಮಿ ಎಂದು ತಿಳಿದು ಅರ್ಚಿಸು. ತುಲಸಿಯಿಂದ ದೇವರನ್ನು ಅರ್ಚಿಸುವ ಅಧಿಕಾರ ಸ್ತ್ರೀಯರಿಗೆ ಇರುವುದಿಲ್ಲ. ಆದರೆ ನೀನು ಉತ್ತಮ ದೇವತೆ. ಹೀಗಾಗಿ ನೀನು ಈ ಕಾರ್ಯದಲ್ಲಿ ಅಧಿಕೃತಳಾಗಿದ್ದಿ. ಸಾಮಾನ್ಯ ಜನರ ವಿಧಿ -ನಿಷೇಧಗಳಿಂದ ನೀನು ಬದ್ಧಳಲ್ಲ. ಹೀಗಾಗಿ ನಿಶ್ಶಂಕವಾಗಿ ತುಲಸೀಪತ್ರಗಳನ್ನು ತಂದು ನನ್ನ ಅಂತರ್ಯಾಮಿಯಾದ ಪರಮಾತ್ಮನನ್ನು ಅರ್ಚಿಸು.

ತುಲಸಿಯನ್ನು ದೇವರಿಗೆ ಸಮರ್ಪಿಸುವುದೇ ನಿಜವಾದ ತುಲಸೀಪೂಜೆ. ಹೀಗಾಗಿ ಈ ತುಲಸೀಪೂಜೆಯಿಂದ ತುಲಸಿಯು ಸಂತುಷ್ಟಳಾಗುತ್ತಾಳೆ. ನಾನೂ ಸಂತುಷ್ಟನಾಗುತ್ತೇನೆ. ಪತಿಯ ಪ್ರಸಾದದಿಂದ ಪರಮಾತ್ಮನ ಪ್ರಸಾದ ಸುಲಭವಾಗುತ್ತದೆ.

ನಾಲ್ಕು ತಿಂಗಳು ಜೇನುತುಪ್ಪದಿಂದ ತುಲಸೀವೃಕ್ಷಗಳನ್ನು ಬೆಳಿಸು. ಐದು ತಿಂಗಳು ಹಾಲನ್ನು ತುಲಸಿಗೆ ಹಾಕಿ ಸೇವಿಸು. ಎರಡೆರಡು ತಿಂಗಳು ಎಳನೀರಿನಿಂದ ಮತ್ತು ಕಬ್ಬಿನ ಹಾಲನ್ನು ಹಾಕಿ ತುಲಸಿಯನ್ನು ಬೆಳೆಸು. ಇದರಿಂದ ತುಲಸಿಯು ಪ್ರಸನ್ನಳಾಗುತ್ತಾಳೆ. ನಿತ್ಯವೂ ಪಾಯಸಾನ್ನವನ್ನು ತುಲಸಿಗೆ ನೈವೇದ್ಯ ಮಾಡು. ಷೋಡಶೋಪಚಾರಗಳಿಂದ ತುಲಸಿಯನ್ನು ಪೂಜಿಸು. ಈ ಪೂಜೆಯಿಂದ ತುಲಸಿಗೆ ಸಂತೋಷವಾಗುತ್ತದೆ. ನಿನ್ನ ಪಾಪಗಳೆಲ್ಲ ದೂರವಾಗುತ್ತವೆ. ದೇವತೆಗಳ ಸೈನ್ಯಕ್ಕೆ ನಾಯಕನಾಗುವಂಥ ವೀರ ನಿನಗೆ ಮಗನಾಗಿ ಜನಿಸುತ್ತಾನೆ. ನಾನು ಕೂಡಾ ಮುಂದಿನ ಫಾಲ್ಗುಣ ಹುಣ್ಣಿಮೆಯಲ್ಲಿ ನಿನಗೆ ಪ್ರತ್ಯಕ್ಷನಾಗುತ್ತೇನೆ. ನಿನ್ನ ಪಾಣಿಗ್ರಹಣವನ್ನು ಮತ್ತೊಮ್ಮೆ ಮಾಡುತ್ತೇನೆ.

ಆದ್ದರಿಂದ ನೀನು ಆ ಕಂಚೀಕ್ಷೇತ್ರಕ್ಕೆ ಹೋಗು. ನಾನು ಹೇಳಿದಂತೆ ತುಲಸಿಯನ್ನು ಪೂಜಿಸು. ಎಂದು ಹೇಳಿದರು. ಕ್ಷಣದಲ್ಲಿಯೇ ಅದೃಶ್ಯರಾದರು.

ಪಾರ್ವತೀದೇವಿಯೂ ಕಾಂಚೀಪುರಕ್ಕೆ ಹೋಗಿ ತುಲಸಿಯ ಸೇವೆಯಲ್ಲಿ ತಲ್ಲೀನಳಾದಳು. ಪಂಪಾನದಿಯ ತೀರದಲ್ಲಿ, ಮಾವಿನ ಮರದ ಕೆಳಗೆ ಉಸುಕಿನ ಲಿಂಗವನ್ನು ಪ್ರತಿಷ್ಠಾಪನ ಮಾಡಿದಳು. ತುಲಸೀವೃಂದಾವನವನ್ನು ನಿರ್ಮಿಸಿದಳು. ಓಂಕಾರನಾಮಕನಾದ ಶ್ರೀಹರಿಯನ್ನು ಆ ಲಿಂಗದಲ್ಲಿ ಚಿಂತಿಸುತ್ತಾ ಪೂಜಿಸಿದಳು.

ಯಾವಾಗಲೂ ತನ್ನ ಪತಿಯನ್ನು ಚಿಂತಿಸುತ್ತಾ ಪತ್ಯಂತರ್ಯಾಮಿಯಾದ ಪರಮಾತ್ಮನ ಆರಾಧನೆಯನ್ನು ಪರಮಶುದ್ಧಳಾಗಿ ಮಾಡಿದಳು. ನಾನಾವಿಧವಾದ ನೈವೇದ್ಯಾದಿಗಳಿಂದ ಬ್ರಾಹ್ಮಣಭೋಜನಾದಿಗಳಿಂದ ತುಲಸಿಯನ್ನು ಆರಾಧಿಸಿದಳು. ಅನ್ನದಾನಾದಿಗಳಿಂದ ಪೂರ್ಣವಾದ ತುಲಸೀಪೂಜೆಯನ್ನು ಮಾಡಿದಳು. ಹೀಗಾಗಿ ಅನ್ನಪೂರ್ಣಾ ಎಂಬ ಹೆಸರಿನಿಂದ ಪ್ರಸಿದ್ಧಳಾದಳು.

ತುಲಸಿಯ ಒಂದು ಎಲೆಯೂ ವ್ಯರ್ಥವಾಗುವುದನ್ನು ಅವಳು ಸಹಿಸುತ್ತಿರಲಿಲ್ಲ. ಪರ್ಣಸ್ಯ ಕ್ಷಯಂ ನ ಸಹತೇ ಇತಿ ಅಪರ್ಣಾ ಎಂದು ಪ್ರಸಿದ್ಧಳಾದಳು. ವಿಧವಿಧವಾದ ಉಪಚಾರಗಳಿಂದ ತುಲಸಿಯನ್ನು ಪೂಜಿಸಿದಳು. ವಿಶೇಷವಾಗಿ ತುಪ್ಪದ ದೀಪಗಳನ್ನು ತುಲಸಿಯ ಸನ್ನಿಧಿಯಲ್ಲಿ ಬೆಳಗಿಸಿದಳು. ಹೀಗೆ ವರ್ಷದ ತನಕ ತುಲಸಿಯನ್ನು ವಿಶಿಷ್ಟವಾದ ರೀತಿಯಿಂದ ಪೂಜಿಸಿದಳು. ತುಲಸಿಯನ್ನು ಸಂತೋಷಪಡಿಸಿದಳು. ಪಾರ್ವತಿಯು ಮಾಡಿದ ಈ ಪೂಜೆಯಿಂದ ತುಲಸಿಯಲ್ಲಿ ಸನ್ನಿಹಿತಳಾದ ಲಕ್ಷ್ಮೀದೇವಿಯು ಸಂತುಷ್ಟಳಾದಳು. ತುಲಸಿಯನ್ನು ಗಾಢವಾಗಿ ಆಲಿಂಗಿಸಿಕೊಂಡಳು. ಗಿರಿಜೆಯನ್ನು ಕುರಿತು ಮಾತನಾಡಿದಳು.

ಹೇ ಗಿರಿಜೇ ! ನೀನು ಮಾಡುವ ಭಕ್ತಿ ಅತ್ಯಂತದೃಢವಾಗಿದೆ. ನಿನ್ನ ಸ್ಮರಣೆಯಿಂದಲೇ ಎಲ್ಲರ ಪಾಪಗಳು ದೂರವಾಗುತ್ತವೆ. ನಿನಗೆಲ್ಲಿ ಪಾಪಗಳು. ಆದರೂ ನನ್ನ ಪೂಜೆಯಿಂದ ಶಿವಲಿಂಗಾರ್ಚನದಿಂದ, ನನ್ನ ಪತ್ರಗಳನ್ನು ಭಕ್ಷಿಸುವುದರಿಂದ ನಿನ್ನ ಪಾಪ ಭಸ್ಮವಾಗಿದೆ. ಇಡಿಯ ಜನ್ಮದಲ್ಲಿ ಒಂದುಸಲವಾದರೂ ಯಾರು ತುಲಸೀಪತ್ರವನ್ನು ಭಕ್ಷಿಸುತ್ತಾರೋ ಅವರ ಪಾಪಗಳೆಲ್ಲ ಭಸ್ಮವಾಗುತ್ತವೆ.

ನನ್ನ ಪೂಜೆಯನ್ನು ವಿಶೇಷವಾದ ಶ್ರದ್ಧೆಯಿಂದ ಮಾಡಿರುವಿ. ನೀನು ಶುದ್ಧಳಾಗಿರುವಿ. ಕೈಲಾಸಪರ್ವತಕ್ಕೆ ಹೊರಡು. ಧೀರ-ವೀರ ಪುತ್ರ ನಿನಗಾಗುತ್ತಾನೆ. ಈ ರೀತಿಯಾಗಿ ಹೇಳಿ ಪಾರ್ವತಿಪ್ರಿಯಳಾದ ತುಲಸಿಯು ಅಂತರ್ಹಿತಳಾದಳು.

ರುದ್ರದೇವರು ಕೂಡಾ ಪಾರ್ವತಿಯು ಮಾಡಿದ ಸೇವೆಯಿಂದ ಸಂತುಷ್ಟರಾದರು. ತುಲಸೀಪೂಜೆಯಿಂದ ನಿಷ್ಪಾಪಳಾದ ಆ ಅನ್ನಪೂರ್ಣೆಯ ಪಾಣಿಗ್ರಹಣವನ್ನು ಫಾಲ್ಗುಣಮಾಸದಲ್ಲಿ ಮತ್ತೆ ಮಾಡಿದನು. ಕೈಲಾಸಪರ್ವತಕ್ಕೆ ಹೋಗಿ ಮತ್ತೆ ಪೂರ್ವದಂತೆ ಸರಸವಾದ ದಾಂಪತ್ಯವನ್ನು ಮಾಡಲು ಪ್ರಾರಂಭಿಸಿದನು. ಪಾಪದ ಪರಿಹಾರಕ್ಕಾಗಿ ಪಾರ್ವತೀದೇವಿಯೂ ಕೂಡಾ ತುಲಸಿಯನ್ನು ಪೂಜಿಸಿದ್ದಾಳೆ. ಹೀಗಾಗಿ ಮಾಡಿದ ಪಾಪಗಳ ಶಾಂತಿಗಾಗಿ ತುಲಸಿಯ ಪೂಜೆಯನ್ನು ಅತ್ಯಂತ

ಆವಶ್ಯಕವಾಗಿ ಮಾಡಬೇಕು. ತನ್ನ ಸುಖವನ್ನು ಪಡೆಯಲು ಇಚ್ಛಿಸುವವನು ತುಲಸಿಯ ಪೂಜೆಯನ್ನು ಮಾಡಬೇಕು. ಪುತ್ರಪ್ರಾಪ್ತಿಗಾಗಿ ವಿಶೇಷವಾಗಿ ತುಲಸಿಯ ಪೂಜೆ ಶ್ರೇಷ್ಠವಾದ ಉಪಾಯವಾಗಿದೆ. ಸ್ಕಂದಪುರಾಣ ತಿಳಿಸಿದ ಕಥಾನಕವಿದು.

★★★★★

## ೮. ಪುಣ್ಯಮಾಲಿನೀ ಸುಮಾಲಿನೀ

ವಾಮದೇವರ ಮಗಳು ಸುಮಾಲಿನೀ. ಅವಳು ವಿಷ್ಣುಭಕ್ತಳಾಗಿದ್ದಳು. ದೇವರನ್ನೇ ಸರ್ವೋತ್ತಮ ಎಂದು ಪೂಜಿಸುತ್ತಿದ್ದಳು. ಮತ್ತೊಬ್ಬ ಸರ್ವೋತ್ತಮ ಇಲ್ಲವೆಂದು ದೃಢವಾಗಿ ನಂಬಿದ್ದಳು. ತಂದೆಯು ಮುನಿಶ್ರೇಷ್ಠರಾಗಿದ್ದರು. ತಂದೆಯ ಜೊತೆ ಮಾತನಾಡಿದಳು. ಅಪ್ಪಾ ! ನಾನು ವಿಷ್ಣುಭಕ್ತಳಾಗಿದ್ದೇನೆ. ಆ ಭಕ್ತಿಯಿಂದ ನನ್ನ ಹೃದಯವೆಲ್ಲ ತುಂಬಿದೆ. ಎದೆಯನ್ನು ತುಂಬುವ ಪದಾರ್ಥ ಪ್ರಪಂಚದಲ್ಲಿ ಒಂದೇ. ಅದುವೇ ವಿಷ್ಣುಭಕ್ತಿ. ಭಕ್ತಿಯ ಹೊರತು ಉಳಿದದ್ದೆಲ್ಲ ಕಸ ಮಾತ್ರ. ಬೇರೊಬ್ಬ ದೇವತೆಗಳಲ್ಲಿ ನನ್ನ ಮನಸ್ಸೆಂದಿಗೂ ರಮಿಸುವುದಿಲ್ಲ. ನಾನೇನು ಮಾಡಲಿ? ಮತ್ತಾವ ರೀತಿಯಾಗಿ ಸಾಧನ ಮಾಡಲಿ? ನನಗೆ ಸದ್ಗತಿಯಾಗುವುದು ಹೇಗೆ? ಮಗಳ ಮಾತನ್ನು ಕೇಳಿ ತಂದೆಯಾದ ವಾಮದೇವರು ಹೇಳಿದರು.

ಮಗಳೇ ! ತುಲಸಿಯ ಆರಾಧನೆಯನ್ನು ವಿಶಿಷ್ಟವಾದ ರೀತಿಯಲ್ಲಿ ಮಾಡು. ಅದರಿಂದಲೇ ಸದ್ಗತಿ ದೊರೆಯುತ್ತದೆ. ಪುರುಷರಾಗಲೀ, ಸ್ತ್ರೀಯರಾಗಲೀ ತುಲಸಿಯ ಆರಾಧನೆಯಿಂದಲೇ ಎಲ್ಲವನ್ನು ಪಡೆಯುತ್ತಾರೆ. ನೀನು ಸುಪುತ್ರಿಯಾಗಿರುವಿ. ನಿನ್ನನ್ನು ಹೆತ್ತಿದ್ದಕ್ಕೆ ನನಗೆ ಸಂತೋಷವೇ ಇದೆ. ತುಲಸಿಯ ಪೂಜೆಯಿಂದ ಉತ್ತಮವಾದ ಗತಿಯು ಸಾಧ್ಯವಾಗುತ್ತದೆ.

ಆವತ್ತಿನಿಂದ ಸುಮಾಲಿನಿಯ ದಿನಚರಿ ಮತ್ತಿಷ್ಟು ವಿಶಿಷ್ಟವಾಯಿತು. ತುಲಸಿಯ ಆರಾಧನೆಯನ್ನು ಮಾಡಲು ಪ್ರಾರಂಭಿಸಿದಳು. ತನ್ನ ಅಂಗಳದಲ್ಲಿ ತುಲಸೀವೃಂದಾವನವನ್ನು ರಚಿಸಿದಳು. ಅಲ್ಲಿ ತುಲಸಿಯನ್ನು ಬೆಳೆಸಿದಳು. ಸುಂದರವಾದ ಮಂಟಪವನ್ನು ನಿರ್ಮಿಸಿದಳು. ಅಲ್ಲಿ ತುಲಸಿಯನ್ನು ನಿತ್ಯವೂ ಭಕ್ತಿಯಿಂದ ಆರಾಧಿಸಿದಳು.

ಸುಮಾಲಿನಿಗೆ ಹದಿನಾರು ಜನ ತಮ್ಮಂದಿರು ಇದ್ದರು. ಒಂದು ದಿನ ಸಮಿತ್ಕುಶಗಳನ್ನು ತರಲು ಕಾಡಿಗೆ ಹೋದರು. ಅವರು ಹೋದ ವನ ಅತ್ಯುತ್ತಮವಾದದ್ದು. ಅಲ್ಲಿ ಗೌತಮಋಷಿಗಳ ಆಶ್ರಮವಿತ್ತು. ಆಶ್ರಮವನ್ನು ಪ್ರವೇಶಿಸಿದರು. ಇನ್ನೂ ಗೌತಮರ ಸ್ನಾನವಾಗಿರಲಿಲ್ಲ. ಅವರ ಸರೋವರದಲ್ಲಿ ಸ್ನಾನಕ್ಕೆ ಇಳಿದರು. ಸರೋವರದಲ್ಲಿ ವಿಹಾರಮಾಡಿದರು. ಜಲಕ್ರೀಡೆಯಿಂದ ಸರೋವರವನ್ನು ಹೊಲಸು ಮಾಡಿದರು.

ಗೌತಮರು ಸರೋವರಕ್ಕೆ ಸ್ನಾನಕ್ಕೆಂದು ಬಂದರು. ಕ್ಷುಬ್ಧವಾದ ಸರೋವರವನ್ನು ನೋಡಿದರು. ಕ್ರುದ್ಧರಾದರು. ಕುರುಡರಾಗಿರಿ ಎಂದು ಶಪಿಸಿದರು. ಕ್ಷಣದಲ್ಲಿಯೇ ಅವರೆಲ್ಲ ಅಂಧರಾದರು. ಮುನಿಪುತ್ರರಿಗೆ ಬಹಳ ದುಃಖವಾಯಿತು. ಎಲ್ಲಿಗೆ ಹೇಗೆ ಹೋಗಬೇಕೆಂದು ತಿಳಿಯಲಿಲ್ಲ. ಕೇಳುತ್ತಾ, ಹುಡುಕುತ್ತಾ ತಮ್ಮ ಆಶ್ರಮಕ್ಕೆ ಬಂದರು. ಬಂದ ಮಕ್ಕಳು ಅಂಧರಾಗಿರುವುದನ್ನು ನೋಡಿದರು ವಾಮದೇವರು. ಬಹಳ ವಿಸ್ಮಯವಾಯಿತು ಅವರಿಗೆ. ದಿವ್ಯದೃಷ್ಟಿಯಿಂದಲೇ ನಡೆದುದನ್ನು ತಿಳಿದುಕೊಂಡರು. ದುಃಖಿತರಾದರು.

ಮಗಳು ಸುಮಾಲಿನೀ, ತಂದೆಯ ದುಃಖವನ್ನು ಗಮನಿಸಿದಳು. ಅದಕ್ಕೆ ಕಾರಣವನ್ನು ಕೇಳಿದಳು. ತನ್ನ ದುಃಖದ ಕಾರಣವನ್ನು ಮಗಳಿಗೆ ಹೇಳಿದರು. ಅಷ್ಟರಲ್ಲಿ ದೇವರ ಪೂಜೆಗೆ ಹೊತ್ತಾಗಿತ್ತು. ದೇವರ ಪೂಜೆಗೆ ತಂದೆಯನ್ನು ಎಬ್ಬಿಸಿದಳು. ಅಂಗಳದಲ್ಲಿಯ ದಿವ್ಯವಾದ ಮಂಟಪಕ್ಕೆ ತಾನು ಬಂದಳು. ತಮ್ಮಂದಿರ ಕುರುಡು ಕಳೆಯಬೇಕೆಂದು ಪ್ರಾರ್ಥಿಸುತ್ತಾ ತುಲಸಿಯ ಸೇವೆ ಮಾಡಿದಳು. ಸುಮಾಲಿನೀ ಮಾಡಿದ ಸೇವೆಯಿಂದ ಸಂತುಷ್ಟಳಾದ ತುಲಸಿಯು ಆ ಹದಿನಾರು ಜನರ ಅಂಧ್ಯವನ್ನು ಪರಿಹರಿಸಿದಳು. ದಯಾಘನಳಲ್ಲವೇ ತುಲಸಿ. ಅವಳ ಚರಿತ್ರೆಯೂ ಅತಿವಿಚಿತ್ರವಾಗಿದೆ.

ತುಲಸೀದೇವಿಯ ಕರುಣೆಯಿಂದ ಅವರಿಗೆ ದೃಷ್ಟಿ ಬಂದಿತು. ಅವರೆಲ್ಲ ಮತ್ತೆ ತಮ್ಮ ಕೆಲಸದಲ್ಲಿ ತೊಡಗಿಕೊಂಡರು. ಸಮಿತ್ಕುಶಾದಿಗಳನ್ನು ಕಾಡಿನಿಂದ ತರುತ್ತಾ ತನ್ನ ತಂದೆಯ ಸೇವೆಯನ್ನು ಮಾಡಲು ಪ್ರಾರಂಭಿಸಿದರು. ಈಗ ಗೌತಮರು ಪಶ್ಚಾತ್ತಪ್ತರಾಗಿದ್ದರು. ಪಾಪ, ಆ ಹದಿನಾರು ಜನ ಮಕ್ಕಳಿಗೆ ಸುಮ್ಮನೆ ಶಾಪವನ್ನು ನೀಡಿದೆ. ಕುರುಡರಾಗಿ ಅವರು ಎಲ್ಲಿದ್ದಾರೋ ? ಏನು ತಿನ್ನುತ್ತಿದ್ದಾರೋ ? ನೆನಿಸಿಕೊಂಡು ಸ್ವಯಂ ದುಃಖತಪ್ತರಾದರು. ಅವರನ್ನು ಹುಡುಕುತ್ತಾ ಬಂದರು.

ಆದರೆ ಅಲ್ಲಿ ಅವರು ಯಾರೂ ಇರಲಿಲ್ಲ. ಅವರ ನಡಿಗೆಯಲ್ಲಿ ಗಡಿಬಿಡಿ ಇತ್ತು. ನನ್ನ ಶಾಪದಿಂದ ಕುರುಡರಾಗಿದ್ದಾರೆ. ಎಲ್ಲಿ ಬಿದ್ದಿದ್ದಾರೋ, ಯಾವ ಕ್ರೂರಪ್ರಾಣಿಗಳು ಅವರನ್ನು ಕಾಡುತ್ತಿವೆಯೋ, ಅವರ ಮನಸ್ಸು ಕೇಡನ್ನು ಶಂಕಿಸುತ್ತಿತ್ತು. ಹೆಚ್ಚು ಕೇಡನ್ನು ಶಂಕಿಸುವ ಮನಸ್ಸು ಹೆಚ್ಚು ಪ್ರೀತಿಯುಕ್ತವಾಗಿರುತ್ತದೆ. ಎಲ್ಲಿಯೂ ಕಾಣದಿದ್ದಾಗ ತಾನೇ ಕುರುಡನಾದೆನೋ ಎಂಬ ಶಂಕೆಯೂ ಬಂತು. ದಿವ್ಯದೃಷ್ಟಿಯಿಂದ ನೋಡಿದರು. ಎಲ್ಲವನ್ನೂ ತಿಳಿದರು. ಸುಮಾಲಿನಿಯ ಪ್ರಭಾವ ಅವರ ದಿವ್ಯದೃಷ್ಟಿಗೆ ಗೋಚರವಾಯಿತು.

ನನ್ನಂಥವನ ಶಾಪವನ್ನೂ ಸುಳ್ಳುಮಾಡುವ ಸಾಮರ್ಥ್ಯ ಅವಳಿಗಿರುವುದನ್ನು ಕಂಡು ಮೂಕವಿಸ್ಮಿತರಾದರು. ಅವಳ ಪ್ರಭಾವಕ್ಕೆ ಮೆಚ್ಚಿದರು. ತಪಸ್ಸಿನಿಂದಲೇ ಎಲ್ಲರೂ ಸಿದ್ಧಿಯನ್ನು ಪಡೆಯುವುದಿಲ್ಲ. ಅವರವರಿಗೆ ವಿಹಿತವಾದ ಕರ್ಮಗಳನ್ನೇ ತಪಸ್ಸೆಂದು ತಿಳಿದು ಮಾಡಿದವರೇ ಸಂಸಿದ್ಧರಾಗುತ್ತಾರೆ. ಸುಮಾಲಿನಿಯು ಇದಕ್ಕೆ ದೃಷ್ಟಾಂತಳಾಗಿದ್ದಳು. ಕಸಬಳಿಯುವುದು, ತಂದೆಯ ತಪಸ್ಸಿಗೆ ಅನುಕೂಲ ಮಾಡಿಕೊಡುವುದು, ತುಲಸೀಪೂಜೆ ಮುಂತಾದ ವಿಹಿತವಾದ ಪೂಜೆಗಳನ್ನು ಮಾಡುವುದು, ಸ್ತ್ರೀಯರಿಗೆ ವಿಹಿತವಾದ ಇಂತಹ ಕರ್ಮಗಳನ್ನು ಮಾಡಿದ್ದರಿಂದ ಸುಮಾಲಿನಿಗೆ ಗೌತಮರ ಶಾಪವನ್ನು ಸುಳ್ಳುಮಾಡುವ ಸಾಮರ್ಥ್ಯ ಬಂದಿತ್ತು. ವಿಹಿತಕರ್ಮಗಳ ಪ್ರಭಾವ ಎಷ್ಟು ಎಂಬುದಕ್ಕೆ ಸುಮಾಲಿನಿ ನಿದರ್ಶನ ಎಂದರಿಯಬೇಕು. ಯಾವ ಕರ್ಮಗಳನ್ನೂ ಮೂದಲಿಸಬಾರದು. ಎಂಬ ಶಾಸ್ತ್ರದ ಮಾತುಗಳ ಅರ್ಥ ಅವರಿಗೆ ಮತ್ತಿಷ್ಟು ಗಾಢವಾಯಿತು.

ಮಾರನೆಯ ದಿನ ಗೌತಮರು ವಾಮದೇವರ ಆಶ್ರಮಕ್ಕೆ ಬಂದರು. ಅವರು ಬಂದದ್ದು ಸುಮಾಲಿನಿಯನ್ನು ನೋಡುವುದಕ್ಕಾಗಿ. ಒಬ್ಬ ದೊಡ್ಡ ಋಷಿ ಸುಮಾಲಿನಿಯ ದರ್ಶನಕ್ಕೆ ಬಂದಿದ್ದಾರೆಂದರೆ ಸುಮಾಲಿನಿ ಏನೆಂದು ಅರ್ಥಮಾಡಿಕೊಳ್ಳಬಹುದು. ಅತಿಥಿಗಳಾಗಿ ಬಂದ ಗೌತಮರನ್ನು ವಾಮದೇವರು ಅರ್ಘ್ಯಾದಿಗಳಿಂದ ಪೂಜಿಸಿದರು. ಆ ಅರ್ಚನೆಯ ವೈಭವದ ಹಿಂದೆ ಸುಮಾಲಿನಿಯು ಕಾಣುತ್ತಿದ್ದಳು. ಅತಿಥಿಗಳ ಪೂಜೆಗೆ ಬೇಕಾದ ಎಲ್ಲ ಸಾಮಗ್ರಿಗಳನ್ನು ಸುಮಾಲಿನಿಯು ಸಂಪಾದಿಸಿ ಸಹಕರಿಸಿದ್ದಳು.

ಗೌತಮರಿಗೆ ಸ್ವಾಗತವನ್ನು ಹೇಳಿದರು. ಬಂದ ಕಾರಣವನ್ನು ಕೇಳಿದರು. ಗೌತಮರು ಮಹಾತಪಸ್ವಿಗಳು. ಅವರ ಕುಲಕ್ಕೆ ಭೂಷಣಪ್ರಾಯರಾದವರು.

ಅಂಥವರು ಹೇಳಿದರು. ಏನಿಲ್ಲ ಮುನಿಗಳೇ. ನಿಮ್ಮ ಮಗಳ ವೈಭವವನ್ನು ನೋಡಲು ಮಾತ್ರ ನಾನು ಬಂದಿದ್ದೇನೆ. ಮತ್ತೇನೂ ಕಾರಣವಿಲ್ಲ. ತುಲಸಿಯ ಆರಾಧನೆಯಿಂದ ಅವಳೆಷ್ಟು ಪ್ರಭಾವವನ್ನು ಪಡೆದಿದ್ದಾಳೆಂದು ನಾನು ಧ್ಯಾನದಿಂದ ಕಂಡಿದ್ದೇನೆ. ಇವಳ ದರ್ಶನದಿಂದ ನಾನು ಪವಿತ್ರನಾಗಿದ್ದೇನೆ. ಮಕ್ಕಳನ್ನು ಅದರಲ್ಲಿಯೂ ಹೆಣ್ಣುಮಕ್ಕಳನ್ನು ಹೇಗೆ ಬೆಳೆಸಬೇಕೆಂದು ನಿಮ್ಮಿಂದ ಎಲ್ಲರೂ ಕಲೆಯಬೇಕು. ಎಲ್ಲ ಹೆಣ್ಣುಮಕ್ಕಳು ಹೇಗಿರಬೇಕೆಂದು ನಿನ್ನ ಮಗಳಾದ ಈ ಸುಮಾಲಿನಿಯನ್ನು ನೋಡಿ ಕಲಿಯಬೇಕು. ತುಲಸಿಯ ಪೂಜೆಯನ್ನು ಹೇಗೆ ಮಾಡಬೆಕೆಂದು ಇವತ್ತು ನಾನು ಇವಳಿಂದ ಕಲಿತಿದ್ದೇನೆ. ಇವಳ ದರ್ಶನದಿಂದ ನಾನು ಪವಿತ್ರನಾಗಿದ್ದೇನೆ. ಮತ್ತೇನೂ ನನಗೆ ಬೇಕಾಗಿಲ್ಲ. ಎಂದು ಹೇಳಿದರು. ಪರಮತೃಪ್ತರಾಗಿ ತಮ್ಮ ಆಶ್ರಮಕ್ಕೆ ನಡೆದರು.

ವಾಮದೇವರ ಕಣ್ಣುಗಳು ಹನಿಯುತ್ತಿದ್ದವು. ತಾನೆಷ್ಟು ಪುಣ್ಯ ಮಾಡಿದ್ದೇನೆ. ಇಂಥವಳು ನನಗೆ ಮಗಳಾಗಿದ್ದಾಳೆ. ತನ್ನ ಅದೃಷ್ಟವನ್ನು ನೆನೆದುಕೊಳ್ಳುತ್ತಿದ್ದರು. ಕಣ್ಣುಗಳಲ್ಲಿ ಆಪ್ಯಾಯತೆ ತುಂಬಿ ಹರಿಯುತ್ತಿತ್ತು. ಮಗಳನ್ನು ಪ್ರೀತಿಯಿಂದ ಆಶೀರ್ವದಿಸಿದರು.

ಇತ್ತ ಗೌತಮರು ತಮ್ಮ ಮನೆ ತಲುಪಿದರು. ತಮ್ಮ ಮನೆಯಲ್ಲಿಯೂ ತುಲಸಿಗೆ ವಿಶಿಷ್ಟವಾದ ಸ್ಥಾನವನ್ನು ನೀಡಿದರು. ತುಲಸಿಯನ್ನು ತಮ್ಮ ಅಂಗಳದಲ್ಲಿ ಬೆಳೆಸಿದರು. ಅಲ್ಲಿ ವೃಂದಾವನವನ್ನು ನಿರ್ಮಿಸಿದರು. ಹಿರಿದಾದ ಮಂಟಪವನ್ನು ಹಾಕಿದರು. ತುಲಸಿಯ ಪೂಜೆಯನ್ನು ಮಾಡಿದರು. ಸತಿ-ಸುತರಿಂದಲೂ ತುಲಸಿಯ ಪೂಜೆ ಮಾಡಿಸಿದರು. ಎಲ್ಲರೂ ಸುಖೀಜೀವನವನ್ನು ನಡೆಸಿದರು.

ಆದ್ದರಿಂದ ಮನುಷ್ಯನಾಗಿ ಜನಿಸಿದವನು ಪ್ರಯತ್ನಪೂರ್ವಕವಾಗಿ ತುಲಸಿಯ ಪೂಜೆಯನ್ನು ಮಾಡಬೇಕು. ಪೂಜಿತಳಾದ ತುಲಸಿಯು ಎಲ್ಲ ವಿಧವಾದ ಕಾಮನೆಗಳನ್ನು ಪೂರ್ಣಮಾಡುತ್ತಾಳೆ. ಈ ವಿಷಯದಲ್ಲಿ ಸರ್ವಥಾ ಸಂದೇಹವಿಲ್ಲ.

ಸ್ಕಂದಪುರಾಣದ ಸನತ್ಕುಮಾರಸಂಹಿತಾದಲ್ಲಿಯ ವಿಚಿತ್ರವಾದ ಕಥೆಯಿದು.



## ೯. ತುಲಸೀಮಹಿಮಾಶ್ರವಣ

ಗರುಡ ಹೇಳಿದ ಮತ್ತೊಂದು ಇತಿಹಾಸವಿದು. ಈ ಕಥೆಯನ್ನು ಸ್ಮರಣೆ ಮಾಡಿದ ಮಾತ್ರಕ್ಕೆ ಎಲ್ಲ ವಿಧವಾದ ಪಾಪಗಳು ನಷ್ಟವಾಗುತ್ತವೆ.

ಸುಮೇಧ-ಹರಿಮೇಧ ಎಂಬ ಬ್ರಾಹ್ಮಣರಿದ್ದರು. ತೀರ್ಥಯಾತ್ರಾಕ್ರಮದಿಂದ ಸಮಗ್ರ ಭೂಮಿಗೆ ಪ್ರದಕ್ಷಿಣೆ ಹಾಕಲು ಪ್ರಾರಂಭಿಸಿದರು. ಸರ್ವಭೂತದಯಾ ಅವರಲ್ಲಿ ಜಾಗ್ರತವಾಗಿತ್ತು. ಎಲ್ಲ ತತ್ತ್ವಗಳನ್ನು ತಿಳಿದಿದ್ದರು. ಗಂಗಾಯಾತ್ರೆ ಮಾಡಬೇಕೆಂದು ಉತ್ತರದಿಕ್ಕಿಗೆ ಪ್ರಯಾಣ ಬೆಳೆಸಿದರು.

ಅರಣ್ಯದ ಮೂಲಕ ಅವರ ಸಂಚಾರ ಮುಂದುವರೆಯಿತು. ನಡೆದು ನಡೆದು ಬಹಳ ಶ್ರಾಂತರಾದರು. ಹಸಿವು-ನೀರಡಿಕೆಯಿಂದ ದಣಿದರು. ವಿಶ್ರಾಂತಿಗಾಗಿ ನೆರಳನ್ನು ಹುಡುಕಿದರು. ಅಷ್ಟರಲ್ಲಿ ಅವರು ತುಲಸೀವನವನ್ನು ನೋಡಿದರು. ಸುಮೇಧಾ ಎಂಬುವವರು ತುಲಸೀವನಕ್ಕೆ ಪ್ರದಕ್ಷಿಣೆ ಹಾಕಿದರು. ಭಕ್ತಿಪೂರ್ವಕವಾಗಿ ನಮಸ್ಕಾರಗಳನ್ನು ಮಾಡಿದರು.

ಇದನ್ನು ಹರಿಮೇಧರು ನೋಡಿದರು. ಸುಮೇಧರಿಗೆ ಕೇಳಿದರು. ತೀರ್ಥಗಳಿಗೆ, ಬ್ರಾಹ್ಮಣರಿಗೆ, ಪ್ರತಿಮೆಗಳಿಗೆ ನಮಸ್ಕರಿಸುವುದನ್ನು ನೋಡಿದ್ದೇನೆ. ಈ ಗಿಡಗಳಿಗೆ ನೀವು ನಮಸ್ಕರಿಸುತ್ತಿದ್ದೀರಿ. ಕಾರಣವೇನು? ಈ ವೃಕ್ಷದ ಮಹಿಮೆ ನಿಮಗೆ ಗೊತ್ತಿದೆ. ನನಗೂ ಹೇಳಿರಿ. ತುಲಸಿಯ ಮಹಿಮೆಯನ್ನು ನಾನು ಕೇಳುತ್ತೇನೆ. ಈ ವಿಷಯದಲ್ಲಿ ಕುತೂಹಲ ನನಗೆ ಹೆಚ್ಚಾಗುತ್ತಿದೆ.

ಸುಮೇಧರು ಹೇಳಿದರು. ನಿಮ್ಮ ಈ ಜಿಜ್ಞಾಸೆ ಸಾಧುವಾಗಿದೆ. ಈಗ ಬಿಸಿಲಿನ ತಾಪ ಹೆಚ್ಚಿದೆ. ಅಲ್ಲಿ ವಟವೃಕ್ಷ ಕಾಣಿಸುತ್ತಿದೆ. ಅದರ ನೆರಳಲ್ಲಿ ಕುಳಿತುಕೊಳ್ಳೋಣ. ಅಲ್ಲಿ ನಿಮಗೆ ತುಲಸೀಮಹಿಮೆಯನ್ನು ಹೇಳುತ್ತೇನೆ. ಎಂದು ಲಗುಬಗೆಯಿಂದ ನೆರಳಿಗೆ ನಡೆದರು. ಅಲ್ಲಿ ಸುಖಾಸನದಲ್ಲಿ ಕುಳಿತುಕೊಂಡರು. ಅದು ಸುಂದರವಾದ ವೃಕ್ಷ. ಕಿಂಚಿತ್ತೂ ಬಿಸಿಲು ಅಲ್ಲಿ ಇರಲಿಲ್ಲ. ಸೂರ್ಯನ ಕಿರಣಗಳನ್ನು ತನ್ನ ಎಲೆಗಳಿದ ತಡೆದುಹಾಕಿತ್ತು. ಬಂದ ಅತಿಥಿಗಳಿಗೆ ಬಹುಶಃ ಈ ವಟವೃಕ್ಷಕ್ಕಿಂತಲೂ ಹೆಚ್ಚಾಗಿ ಉಪಚರಿಸಲು ಸಾಧ್ಯವಿರಲಿಲ್ಲ. ನೆರಳಲ್ಲಿ ವಿಶ್ರಾಂತಿಯನ್ನು ಪಡೆದರು. ದೇವರನ್ನು ಸ್ಮರಿಸಿದರು. ಸುಮೇಧರು ತುಲಸಿಯ ಮಹಿಮೆಯನ್ನು ಹರಿಮೇಧರಿಗೆ ಹೇಳಲು ಉಪಕ್ರಮಿಸಿದರು.

ಪರಮಾತ್ಮನ ಆನಂದಾಶ್ರುಗಳು ಅಮೃತಕಲಶದಲ್ಲಿ ಬಿದ್ದಾಗ ಜನಿಸಿದವಳು ಶ್ರೀತುಲಸೀ. ಅವಳ ಮಹಿಮೆಯನ್ನು ಹೇಳುತ್ತೇನೆ ಕೇಳಿರಿ.

ದುರ್ವಾಸರ ಶಾಪದಿಂದ ಇಂದ್ರ ಐಶ್ವರ್ಯಭ್ರಷ್ಟನಾದ. ದೈತ್ಯರ ಪೀಡೆಯನ್ನು ಸಹಿಸದ ದೇವತೆಗಳು ದೇವರನ್ನು ಪ್ರಾರ್ಥಿಸಿದರು. ದೇವತೆಗಳನ್ನು ಅನುಗ್ರಹಿಸುವುದಕ್ಕಾಗಿ ಸಮುದ್ರಮಥನವನ್ನು ತಾನೇ ನಿಂತು ಮಾಡಿದ ಪರಮಾತ್ಮ. ಬ್ರಹ್ಮಾದಿದೇವತೆಗಳು, ಕಲ್ಯಾದಿದೈತ್ಯರು ಈ ಸಮುದ್ರಮಥನಕ್ಕೆ ನಿಮಿತ್ತರಾದರು.

ಸಮುದ್ರಮಥನ ಮಾಡುತ್ತಿರುವಾಗ ಕಲ್ಪವೃಕ್ಷ, ಚಂದ್ರ, ಲಕ್ಷ್ಮೀದೇವಿ, ಉಚ್ಚೈಶ್ರವ ಎಂಬ ಕುದುರೆ, ಐರಾವತ, ಕೌಸ್ತುಭಗಳು ಹುಟ್ಟಿದವು. ಪರಮಾತ್ಮ ಧನ್ವಂತರಿಯಾಗಿ ಅವತರಿಸಿದ. ಲೋಕಶ್ರೇಯೋವಿಧಾಯಕವಾದ ಹರೀತಕೀ ಮೊದಲಾದ ಓಷಧಿಗಳು ಮತ್ತು ಇತರ ದ್ರವ್ಯಗಳು ಕೂಡಾ ಉತ್ಪನ್ನವಾದವು.

ಧನ್ವಂತರಿರೂಪಿಯಾದ ಪರಮಾತ್ಮ ತನ್ನ ಎರಡು ಕೈಗಳಿಂದ ಅಮೃತತುಂಬಿದ ಕಲಶವನ್ನು ಧರಿಸಿಯೇ ಅವತರಿಸಿದ. ಆ ಅಮೃತವನ್ನು ನೋಡಿ ಧನ್ವಂತರಿಗೆ ಸಂತೋಷವಾಯಿತು. ಈ ಅಮೃತದ ಪಾನದಿಂದ ದೇವತೆಗಳು ಕೃತಕೃತ್ಯರಾಗುತ್ತಾರೆ. ದೇವತೆಗಳಿಗೆ ಅಜರಾಮರದಾಯಕವಾದ ಅಮೃತವಿದು ಎಂದು ನೆನೆದು ಧನ್ವಂತರಿಗೆ ಆನಂದವಾಯಿತು. ಆನಂದದ ಅಶ್ರುಗಳು ಆ ಕಲಶದಲ್ಲಿ ಉದುರಿದವು. ಕೂಡಲೇ ಅಲ್ಲಿ ಪರಮಮಂಗಲೆಯಾದ ತುಲಸಿಯ ಅವತಾರವಾಯಿತು.

ತುಲಸಿಯು ಸಮಸ್ತಲಕ್ಷಣಗಳಿಂದ ಸಂಪನ್ನಳಾಗಿದ್ದಳು. ಎಲ್ಲ ಆಭರಣಗಳಿಂದ ಯುಕ್ತಳಾಗಿದ್ದಳು. ಅಂತಹ ತುಲಸಿಯನ್ನು ಮತ್ತು ಲಕ್ಷ್ಮೀದೇವಿಯನ್ನು ದೇವರು ಸ್ವೀಕರಿಸಿದ. ತುಲಸಿಯನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡ. ಎಲ್ಲ ಲೋಕಗಳನ್ನು ನೀನು ಪವಿತ್ರಗೊಳಿಸು ಎಂದು ವರ ನೀಡಿದ.

ಅಂದಿನಿಂದ ತುಲಸಿಯು ಭಗವಂತನಿಗೆ ಪ್ರಿಯಳಾದಳು. ಎಲ್ಲ ಲೋಕಗಳಲ್ಲಿಯೂ ಪ್ರಸಿದ್ಧಳಾದಳು. ಎಲ್ಲರಿಂದಲೂ ಪೂಜ್ಯಳಾದಳು. ಎಲ್ಲಿ ತುಲಸೀಕಾನನವಿರುತ್ತದೋ ಅಲ್ಲಿ ಪರಮಾತ್ಮ ಇರುತ್ತಾನೆ. ತುಲಸಿಯನ್ನು ಪೂಜಿಸಿದರೇ ಅದು ದೇವರ ಪೂಜೆಯೇ ಆಗುತ್ತದೆ. ನಾರಾಯಣನೇ ಸಕಲಲೋಕದ ಧಾತಾ. ತುಲಸಿಗೆ ಪರಮಪ್ರಿಯನಾದವನು. ಈ ವಿಷಯ ಸತ್ಯವಾಗಿದೆ. ಯಥಾರ್ಥವಾದ ಈ ವಿಷಯವನ್ನು ತಿಳಿದರೆ ಅವರನ್ನು ಭಗವಂತ ಸಂರಕ್ಷಿಸುತ್ತಾನೆ.

